# ವಿಜಯನಗರ ಕಾಲದ ಶೈವದೇವಾಲಯಗಳು

(ಕರ್ನಾಟಕ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ

ಕೆ. ಸತೀಶ

ಮಾರ್ಗದರ್ಶಕರು

ಡಾ. ಕೆ.ಎಂ.ಸುರೇಶ್

ನಿರ್ದೇಶಕರು

ವಸ್ತುಸಂಗ್ರಹಾಲಯ




ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೪

132

# ವಿಜಯನಗರ ಕಾಲದ ಶೈವದೇವಾಲಯಗಳು

## (ಕರ್ನಾಟಕ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ
ಕೆ.ಸತೀಶ

'ಸಿರಿಗನ್ನಡ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಾರ್ಗದರ್ಶಕರು
ಡಾ. ಕೆ.ಎಂ.ಸುರೇಶ್
ನಿರ್ದೇಶಕರು
ವಸ್ತುಸಂಗ್ರಹಾಲಯ




ಶಾಸನಶಾಸ್ತ್ರ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೪

# ಮಾರ್ಗದರ್ಶಕರ ಪ್ರಮಾಣ ಪತ್ರ

ಕೆ.ಸತೀಶ್ ಅವರು ವಿಜಯನಗರ ಕಾಲದ ಶೈವದೇವಾಲಯಗಳು (ಕರ್ನಾಟಕ) ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಕೆ.ಎಂ.ಸುರೇಶ
ಮಾರ್ಗದರ್ಶಕರು ಮತ್ತು ನಿರ್ದೇಶಕರು
ವಸ್ತುಸಂಗ್ರಹಾಲಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ :
ಸ್ಥಳ : ವಿದ್ಯಾರಣ್ಯ

ಸಿರಿಗನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಸಂಶೋಧಕರ ಪ್ರಮಾಣ ಪತ್ರ

**ವಿಜಯನಗರ ಕಾಲದ ಶೈವದೇವಾಲಯಗಳು (ಕರ್ನಾಟಕ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ಡಾ.ಕೆ.ಎಂ.ಸುರೇಶ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

K. Satisha.

**ಕೆ. ಸತೀಶ್**
ಸಂಶೋಧಕ
**ಶಾಸನಶಾಸ್ತ್ರ** ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ದಿನಾಂಕ :**
**ಸ್ಥಳ : ವಿದ್ಯಾರಣ್ಯ**

## ಪರಿವಿಡಿ

# ಕರ್ನಾಟಕ ರಾಜ್ಯ



ಬೀದರ್
ಗುಲ್ಬರ್ಗ
ಬಿಜಾಪುರ
ರಾಯಚೂರು
ಬಾಗಲಕೋಟೆ
ಬೆಳಗಾಂ
ಗದಗ್
ಕೊಪ್ಪಳ
ಧಾರವಾಡ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಚಿತ್ರದುರ್ಗ
ಶಿವಮೊಗ್ಗ
ಉಡುಪಿ
ಚಿಕ್ಕಮಗಳೂರು
ತುಮಕೂರು
ಕೋಲಾರ
1
ಬೆಂಗಳೂರು(ಗ್ರಾ)
ಬೆಂ(ನ)
ಹಾಸನ
ದಕ್ಷಿಣ ಕನ್ನಡ
ಮಂಡ್ಯ
ಕೊಡಗು
ಮೈಸೂರು
ಚಾಮರಾಜನಗರ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ವಿಧಾನ

ಮಾನವ ಇತರೆ ಪ್ರಾಣಿವರ್ಗಗಳಿಗಿಂತ ಮಕುಟಪ್ರಾಯವಾಗಿರುವುದು ಅವನು ರೂಪಿಸಿಕೊಂಡ ಸಮಾಜಮುಖಿ ಜೀವನಕ್ರಮದಿಂದ. ಆದುದರಿಂದಲೇ ಈತ ಸದಾ ಜ್ಞಾನಪಿಪಾಸು. ಜಿಜ್ಞಾಸೆಯ ಪ್ರವೃತ್ತಿಯೇ ಆತನ ಸಾಧನೆಯ ಮೂಲಾಧಾರವಾಗಿದೆ. ಹಳೆಯ ಅನುಭವದೊಂದಿಗೆ ತಳುಕುಹಾಕಿಕೊಂಡ ಅವನು ತನ್ನ ಮುಂದಿನ ಭವಿಷ್ಯವನ್ನು ರೂಪಿಸಿಕೊಳ್ಳುತ್ತಾ ಬಂದಿದ್ದಾನೆ. ಹಳೆಯ ಅನುಭವಗಳನ್ನು ಮೆಲುಕು ಹಾಕಲು ಆತನಿಗೆ ಇತಿಹಾಸದ ಪ್ರಜ್ಞೆ ಅತೀ ಅವಶ್ಯ. ಆದುದರಿಂದ ಮಾನವನೊಬ್ಬ ಐತಿಹಾಸಿಕ ಜೀವಿ, ಅವನು ಇತಿಹಾಸದ ಅರಿವಿನೊಂದಿಗೆ ತನ್ನ ಸಮಾಜವನ್ನು, ತನ್ನ ಜೀವನವನ್ನು ರೂಪಿಸಿಕೊಳ್ಳಬೇಕಾದುದು ಅನಿವಾರ್ಯವಾಗುತ್ತದೆ.

ಇತಿಹಾಸವೆಂದರೆ ಕೇವಲ ರಾಜಮಹಾರಾಜರ ರಾಜಕೀಯ ಇತಿಹಾಸ ಎಂಬ ಕಲ್ಪನೆ ಬಹಳ ಪ್ರಚಲಿತದಲ್ಲಿದೆ. ಇತಿಹಾಸವನ್ನು ಚಿತ್ರಿಸುವ ಗ್ರಂಥಗಳಲ್ಲಿ ಈ ರಾಜಕೀಯ ಇತಿಹಾಸವೇ ಪ್ರಧಾನವಾಗಿ ಮೂಡಿ ಬರುತ್ತಿದೆ. ಗ್ರಂಥದ ಕೊನೆಯಲ್ಲಿ ಆ ನಾಡಿನ, ಕಲೆ, ಧರ್ಮ ಇತ್ಯಾದಿ ವಿಷಯಗಳು ಒಂದು ಅನುಬಂಧ ರೂಪದಲ್ಲಿ ನಿರೂಪಿತವಾಗಿರುತ್ತವೆ. ಒಂದು ನಾಡು ಎಂದರೆ ಅಲ್ಲಿನ ರಾಜ, ರಾಣಿ, ಅಧಿಕಾರಿಗಳಲ್ಲ; ಅಲ್ಲಿ ಬಾಳಿ ಬದುಕಿದ ಜನ, ಹೀಗೆ ಬದುಕಿದ ಜನರು ಒಂದು ಗಣನೀಯವಾದ ಭಾಗವೇ. ಆ ರಾಜ್ಯವನ್ನಾಳಿದ ರಾಜ ಸಮೂಹ ಒಂದು ಸಾಮ್ರಾಜ್ಯದ ನಿಜವಾದ ಇತಿಹಾಸವೆಂದರೆ ಆ ರಾಜ್ಯದಲ್ಲಿ ಬದುಕಿದ ಜನತೆಯ ಇತಿಹಾಸ. ಜನತೆ ಬದುಕಿನ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಮೌಲ್ಯ ಇತ್ಯಾದಿ ವಿವರಣೆಗಳೇ ಆ ಸಾಮ್ರಾಜ್ಯದ ಇತಿಹಾಸವಾಗುತ್ತದೆ. ಜನತೆಯ ಜೀವನವನ್ನು ಕುರಿತು ಕೈಗೊಳ್ಳುವ ಈ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನ ಎಂದು ಕರೆಯಲಾಗುತ್ತದೆ.

ಸಂಸ್ಕೃತಿ ಒಂದು ಭಾವನಾತ್ಮಕ ಅನುಭವ, ಅದು ಆನಂದ ರೂಪಿಯಾಗಿ ಅಭಿವ್ಯಕ್ತಗೊಳ್ಳುತ್ತದೆ. ನಾಗರಿಕತೆಗೆ ಪ್ರಯೋಜನಾತ್ಮಕವಾದುದು ಸಂಸ್ಕೃತಿ. ಮಾನವನ ಬಹುಮುಖವಾದ ಸ್ವಭಾವ, ಅವನ ಭಾವನೆಗಳ ಸೂಕ್ಷ್ಮವಾದ ಸುಂದರವಾದ ಚಿತ್ರಣಗಳನ್ನು, ಸಂಸ್ಕೃತಿಯ ಅಂಗಗಳಲ್ಲಿ ಕಾಣಬಹುದು. ಇದು ಸಂಗೀತ, ಶಿಲ್ಪ, ನೃತ್ಯ, ವಾಸ್ತುಶಿಲ್ಪ, ಚಿತ್ರ, ಸಾಹಿತ್ಯ ಮತ್ತು ಧರ್ಮ ಎಂಬ ಕವಲುಗಳಾಗಿ ಹರಿಯುತ್ತದೆ. ಈ ಎಲ್ಲಾ ಕವಲುಗಳು ಸಂಸ್ಕೃತಿಯ ಪರಿಧಿಯೊಳಗೆ ಬರುತ್ತವೆ.

ಪ್ರಾಚೀನ ಕಾಲದಲ್ಲಿ ಶಿಲ್ಪ ಎನ್ನುವ ಮಾತು ಬಹಳ ವ್ಯಾಪಕವಾದ ಅರ್ಥವನ್ನು ಪಡೆದುಕೊಂಡಿತ್ತು. ಪ್ರಾಚೀನ ಅರವತ್ತುನಾಲ್ಕು ಕಲೆಗಳಿಗೆಲ್ಲ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಈ ಅರ್ಥದ

ವಿಶಾಲತೆಯು ಕ್ರಮೇಣ ಕಡಿಮೆಯಾಗುತ್ತ ಬಂದು ವಿಜಯನಗರ ಕಾಲಕ್ಕಾಗಲೇ ಶಿಲ್ಪ ಎನ್ನುವುದು ಕಲ್ಲಿನಲ್ಲಿ ನಿರ್ಮಿಸಿದ ಮೂರ್ತಿಗಳಿಗೆ ಮಾತ್ರ ಎಂಬ ಕಲ್ಪನೆ ಮೂಡಿತು. ಇದೇ ರೀತಿಯಲ್ಲಿ ಭೂಮಿಯನ್ನು ಒಂದು ವಸ್ತು ಎಂದು ತಿಳಿದುಕೊಂಡರೆ ಕಲ್ಲು, ಮಣ್ಣು ಮತ್ತು ಗಾರೆ ಇತ್ಯಾದಿಗಳನ್ನು ಬಳಸಿ ನಿರ್ಮಿಸಿದ ಕಟ್ಟಡಕ್ಕೆ ವಾಸ್ತು ಎಂದು ಕರೆಯುತ್ತೇವೆ. ಇದನ್ನು ಆಶ್ರಯಿಸಿ ಬೆಳೆದದ್ದು "ವಾಸ್ತುಶಿಲ್ಪ" ಎಂಬ ಹೆಸರನ್ನು ಪಡೆಯಿತು. ಮಯಮತ ಗ್ರಂಥವು "ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಾಸ್ತುಶಿಲ್ಪ ಎಂದು ಕರೆಯಲಾಗುತ್ತದೆ.

ಮನುಷ್ಯ ತನ್ನ ಜೀವನವನ್ನು ಸಾಗಿಸಲು ನಿರಂತರವಾಗಿ ಪ್ರಕೃತಿಯೊಂದಿಗೆ ಹೋರಾಟ ಮಾಡಬೇಕಾಗಿತ್ತು. ಈ ಕಾರಣದಿಂದಲೇ ಪ್ರಕೃತಿಯು ಮನುಷ್ಯನ ಪೂಜಾಸ್ಥಾನವಾಯಿತು. ಈ ಅರಿವಿನಿಂದ ಅವನು ಪ್ರಕೃತಿದತ್ತವಾದ ಮರ, ಕಲ್ಲು, ಮಣ್ಣು ಮುಂತಾದ ವಸ್ತುಗಳನ್ನು ಪೂಜಿಸಹತ್ತಿದನು.

ಕಾಲಗತಿಸಿದಂತೆ ಮನುಷ್ಯನ ಜ್ಞಾನ ಬೆಳೆದಂತೆಲ್ಲ ನಿಸರ್ಗದಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ ಅದ್ಭುತ ಶಕ್ತಿಯೊಂದಿದೆ ಎಂದು ನಂಬಿದ. ಈ ಅಪೂರ್ವವಾದದ್ದನ್ನು ಅದ್ಭುತ ದಿವ್ಯವಾದದನ್ನು ಅನುಭವಿಸುವ, ಸವಿಯುವ ಅವಕಾಶ ಮನುಷ್ಯನಿಗೆ ಇರುವಂತೆಯೇ, ಪ್ರಕೃತಿಯನ್ನು ಕಲ್ಪಿಸಿಕೊಳ್ಳುವ ರೂಪಿಸಿಕೊಳ್ಳುವ, ಸೃಜನ ಶಕ್ತಿಯು ಇದೆ. ತನಗೆ ಆಶ್ಚರ್ಯವೆನಿಸುವ ವಸ್ತುಗಳನ್ನು ನೋಡಿ ಅವನು ತನ್ನ ಇಚ್ಛಾಶಕ್ತಿಯ ನೆರವಿನಿಂದ ಪ್ರತಿಮೆಗಳನ್ನು ತಯಾರಿಸಹತ್ತಿದ. ಪ್ರತಿಮೆಯನ್ನು ಬಳಸತೊಡಗಿದ ಮೇಲೆ ಅದರ ಮೇಲೆ ಅವನಿಗೆ ಪಾವಿತ್ರದ ಕಲ್ಪನೆ ಮೂಡಿಬಂದಿತು. ಹೀಗೆ ಶಕ್ತಿ ಸಂಪನ್ನವಾದ ಪ್ರತಿಮೆ ಇರುವ ಸ್ಥಳದಲ್ಲೇ ಕಟ್ಟಡ ಕಟ್ಟಿ, ಆವರಣ ನಿರ್ಮಿಸಿದ. ತನಗಾಗಿ ನಿರ್ಮಿಸಿಕೊಂಡ ಮನೆ, ಗೃಹವಾಸ್ತು ಎನಿಸಿದರೆ, ತನ್ನ ದೇವರಿಗಾಗಿ ನಿರ್ಮಿಸಿದ್ದು ದೇವಾಲಯ ವಾಸ್ತುಶಿಲ್ಪ ಎಂದೆನಿಸಿತು.

ವಾಸ್ತುಶಿಲ್ಪ ಕಲೆಯು ಐತಿಹಾಸಿಕ ಅಧ್ಯಯನಕ್ಕೆ ದೊರಕುವ ವಿಶಿಷ್ಟವಾದ ಸಾಮಗ್ರಿಗಳೆಂದರೆ ದೇವಾಲಯಗಳೇ ಆಗಿವೆ. ಕರ್ನಾಟಕವು ದೇವಾಲಯ ಸಂಸ್ಕೃತಿಯನಾಡು. ನಮ್ಮ ಹಿರಿಯರು ತಮಗೆ ವಾಸಿಸಲು ತೀರಾ ಸಾಮಾನ್ಯವಾದ ಮನೆಯನ್ನು ಕಟ್ಟಿಕೊಂಡರೂ ಊರಿನ ದೇವಾಲಯವನ್ನು ಭವ್ಯವಾಗಿ ಕಲಾತ್ಮಕವಾಗಿ ಶ್ರೀಮಂತವಾಗಿ ಕಟ್ಟುತ್ತಿದ್ದರು. ಅಂದರೆ, ವಾಸ್ತುಶಿಲ್ಪ ಪ್ರಧಾನವಾಗಿ ಉಳಿದು ಬೆಳೆದು ಬಂದುದ್ದು ಧಾರ್ಮಿಕ ತಳಹದಿಯ ಮೇಲೆಯೇ ಎನ್ನಬಹುದು. ಆದುದರಿಂದ ವಾಸ್ತುಶಿಲ್ಪ ಚರಿತ್ರೆ ಎಂದರೆ ಒಂದು ಜನಾಂಗದ ಅಭಿರುಚಿಯ ಚರಿತ್ರೆ. ನಮ್ಮ ದೇಶದ ವಾಸ್ತುಶಿಲ್ಪ ಇದಕ್ಕೆ ಪೂರಕವಾಗಿ ಬೆಳೆದುಬಂದಿದೆ.

ಕ್ರಿ.ಶ.ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದ ಇತಿಹಾಸದಲ್ಲಿ ಒಂದು ನವೀನ ಅಧ್ಯಯನವನ್ನು ಪ್ರಾರಂಭಿಸಿತು. ಕರ್ನಾಟಕದ ಧರ್ಮ ಮತ್ತು ಸಂಸ್ಕೃತಿಯ ಪುನರುತ್ಥಾನಕ್ಕಾಗಿ ತಲೆ ಎತ್ತಿದ ಭಾರತದ ಮಧ್ಯಕಾಲೀನ ಅರಸು ಮನೆತನದ

ಇತಿಹಾಸದಲ್ಲಿ ಈ ಸಾಮ್ರಾಜ್ಯಕ್ಕೆ ವಿಶಿಷ್ಟ ಮನ್ನಣೆ ಇದೆ. ಉತ್ತರದ ಪ್ರಬಲವಾದ ದಾಳಿಯನ್ನು ತಡೆ ಗೋಡೆಯಂತೆ ನಿಂತು ಕನ್ನಡದ ಜನತೆ ಮರೆಯದಂತಹ ಮಹಾಸಾಮ್ರಾಜ್ಯ ಒಂದನ್ನು ತುಂಗಭದ್ರ ತೀರದ ಹಂಪೆಯಲ್ಲಿ ಸ್ಥಾಪಿಸಿದರು.

ಡಾ.ಬಾ.ರಾ.ಗೋಪಾಲ್ ಹೇಳುವಂತೆ "ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಭಾರತದ ಇತಿಹಾಸದಲ್ಲಿಯೇ ಒಂದು ಅಪೂರ್ವ ಘಟನೆ" ಎಂದಿದ್ದಾರೆ. ಹೊಯ್ಸಳ ಮೂರನೆಯ ಬಲ್ಲಾಳನು ಸ್ವದೇಶದ ರಕ್ಷಣೆಗಾಗಿ ತುಂಗಭದ್ರೆಯ ಉತ್ತರಕ್ಕೆ ಹಂಪೆಯಲ್ಲಿ ಒಂದು ಬಲವಾದ ಕೋಟೆಯನ್ನು ಕಟ್ಟಿದನು. ಹರಿಹರ ಬುಕ್ಕಾದಿಗಳು ಇದರ ಆಧಿಪತ್ಯವನ್ನು ವಹಿಸಿಕೊಂಡಿದ್ದರು. ಪರಂಪರಾಗತ ನಂಬಿಕೆಯಂತೆ ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡಿತು. ದಕ್ಷಿಣ ಹಿಂದೂಸ್ಥಾನವನ್ನೆಲ್ಲ ಆಕ್ರಮಿಸಿದ್ದು ಅದರ ಸಾಮ್ರಾಜ್ಯಧಿಕಾರ ಆ ಕಾಲದಲ್ಲಿ ಸೃಷ್ಠಿಯಾದ ಸಾಹಿತ್ಯ, ಕಲೆ, ನೃತ್ಯ, ಸಂಗೀತ, ಶಿಲ್ಪ, ವಾಸ್ತುಶಿಲ್ಪ, ಮುಂತಾದ ಸಮೃದ್ಧ ಜನಪರ ಕಾರ್ಯಗಳು ವಿಜಯನಗರ ವೈಭವದ ಮೆರುಗಿಗೆ ಕಾರಣವಾಗಿದ್ದವು. ಇಷ್ಟೊಂದು ವಿಶಾಲವಾದ ಈ ಸಾಮ್ರಾಜ್ಯ ತನ್ನ ರಾಜ್ಯಭಾರಾವಧಿಯಲ್ಲಿ ಹಲವಾರು ಧರ್ಮಗಳಿಗೆ ನೆಲೆಯನ್ನೊದಗಿಸಿತು.

ಧರ್ಮ ಎಂಬ ಪದವನ್ನು ವಿಜಯನಗರದ ಅರಸರು ಬಹುವಿಶಾಲವಾದ ಅರ್ಥದಲ್ಲಿ ಗ್ರಹಿಸಿದ್ದು ಕಂಡುಬರುತ್ತದೆ. ಆದುದರಿಂದಲೇ ಕೆಲವು ವಿದ್ವಾಂಸರು ವಿಜಯನಗರ ಧರ್ಮವನ್ನು 'ಕರ್ನಾಟಕ ಧರ್ಮವೆಂತಲೂ' ಕರೆದಿದ್ದಾರೆ. ಧರ್ಮದ ಬುನಾದಿಯ ಮೇಲೆಯೇ ಕಟ್ಟಲ್ಪಟ್ಟ ಈ ಸಾಮ್ರಾಜ್ಯವು, ಮೊದಲಿಗೆ ಶೈವ ಧರ್ಮದ ಅನುಯಾಯಿಗಳಾದ ಸಂಗಮವಂಶೀಯರ ಆಳ್ವಿಕೆಗೆ ಒಳಪಟ್ಟಿತ್ತು. ಇದರಿಂದ ಶೈವ ಧರ್ಮ ಸಾಮ್ರಾಜ್ಯದಲ್ಲಿ ಹೆಚ್ಚು ಪಸರಿಸಿತು. ಆ ಕಾಲದಲ್ಲಿ ಶೈವ ಧರ್ಮದ ವಿವಿಧ ಶಾಖೆಗಳಾದ ಪಾಶುಪತ, ಕಾಳಮುಖ, ಶೈವ ವೀರಶೈವ ಶಾಖೆಗಳು ಹೆಚ್ಚು ಪ್ರಚಲಿತದಲ್ಲಿದ್ದವು. ಸಾಳವ ಮತ್ತು ತುಳುವ ವಂಶಗಳು ವೈಷ್ಣವ ಧರ್ಮೀಯರಾದವರು ಶೈವ ಧರ್ಮಕ್ಕೇನು ಕುಂದುಟಾಗಲಿಲ್ಲ. ಇದರಿಂದ ವಿಜಯನಗರ ಕಾಲದ ಧಾರ್ಮಿಕತೆಯ ಬೆಳವಣಿಗೆ ಕಂಡಿತು. ಕರ್ನಾಟಕ ಧಾರ್ಮಿಕ ಪರಿಸರಕ್ಕೆ ಹೊಂದಿಕೊಂಡಂತೆ ವಿಜಯನಗರದ ಶೈವಾಧಾರ್ಮಿಕ ಪರಿಸರ ಅತ್ಯಂತ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿತು.

ದಕ್ಷಿಣ ಭಾರತವನ್ನೆಲ್ಲ ತನ್ನ ಸುಪರ್ದಿಯಲ್ಲಿಟ್ಟುಕೊಂಡು ಬೆಳೆದುಬಂದ ವಿಜಯನಗರ ಸಾಮ್ರಾಜ್ಯವು ವಾಸ್ತುಶಿಲ್ಪದ ದೃಷ್ಟಿಯಿಂದಲೂ ಅತ್ಯಂತ ಸಂಪದ್ಭರಿತವಾದದ್ದು. ಈ ಕಾಲದ ದೇವಾಲಯಗಳು ಇಡೀ ದಕ್ಷಿಣ ಭಾರತದಲ್ಲೆಲ್ಲ ಹರಡಿಕೊಂಡಿವೆ. ಉತ್ತರದ ಪ್ರಬಲ ದಾಳಿಗಳಿಂದ ಜರ್ಜರಿತವಾಗಿದ್ದ ಇಲ್ಲಿನ ದೇವಾಲಯಗಳನ್ನು ಮರಳಿ ಪೂಜೆ ಪುನಸ್ಕಾರಗಳು ನೆಲೆಗೊಳ್ಳುವಂತೆ ಮಾಡಿದುದು ವಿಜಯನಗರ ಅರಸರ ಮಹತ್ತರ ಕಾರ್ಯಗಳಲ್ಲೊಂದು. ಅರಸನೂ ಸೇರಿದಂತೆ ಒಟ್ಟಾರೆ ಜನರ ಬದುಕಿನಲ್ಲಿ ಶಿಸ್ತು-

ಸಂಯಮ ಮಾನವೀಯ ಗುಣಗಳನ್ನು ಕಲಿತು ಅಳವಡಿಸಿಕೊಳ್ಳಲು ದೇವಸ್ಥಾನವು ಗೌರವಯುತವಾದ ಸ್ಥಾನವಾಗಿತ್ತಲ್ಲದೆ, ನ್ಯಾಯಾಲಯಗಳಾಗಿಯೂ ಕಾರ್ಯ ನಿರ್ವಹಿಸುತ್ತಿತ್ತು.

ವಿಜಯನಗರ ಕಾಲದಲ್ಲಿ ದೇವಾಲಯವೆಂಬ ಸಂಸ್ಥೆ ಮಾನವನ ಸಮಷ್ಠಿ ಜೀವನದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿತ್ತು. ಪವಿತ್ರವಾದ ವಾತಾವರಣದಿಂದ ಕೂಡಿದ ಈ ಸ್ಥಳ ನಿತ್ಯನೈಮಿತ್ತಿಕ ಧಾರ್ಮಿಕ, ಕಾರ್ಯಗಳ ಕೇಂದ್ರವಾಗಿತ್ತು. ಸಂಗೀತ, ಶಿಲ್ಪಕಲೆ, ವಾಸ್ತುಶಿಲ್ಪ ಮೊದಲಾದ ಕಲೆಗಳ ಕೇಂದ್ರಸ್ಥಾನವಾಗಿತ್ತು. ಸಾರ್ವಜನಿಕ ಸಮ್ಮೇಳನ ಮಂದಿರ, ವಿದ್ಯಾಶಾಲೆಯೂ, ನ್ಯಾಯಾಲಯವೂ ಆಗಿದ್ದ ದೇವಸ್ಥಾನವು ಅಂದಿನ ಸಮಾಜದ ಪ್ರಮುಖ ವಾಹಿನಿಯಾಗಿತ್ತು.

## ೧.೧. ಅಧ್ಯಯನದ ಉದ್ದೇಶ

ಹದಿಮೂರನೆಯ ಶತಮಾನದ ಮಧ್ಯ ಅವಧಿಯಲ್ಲಿ ಕಂಪಲಿ ಮತ್ತು ಹೊಯ್ಸಳ ರಾಜ್ಯಗಳು ಮಹಮದ್ ಬಿನ್ ತೊಗಲಕ್ ನಿಂದ ದಾಳಿಗೊಳಗಾದ ನಂತರ ದಕ್ಷಿಣದಲ್ಲಿ ಪ್ರಬಲವಾದ ಸಾಮ್ರಾಜ್ಯಗಳು ಕಂಡುಬರಲಿಲ್ಲ. ಇಂತಹ ಸಂದಿಗ್ಧ ಸಮಯದಲ್ಲಿ ವಿಜಯನಗರ ಸಾಮ್ರಾಜ್ಯವು ತಲೆಯೆತ್ತಿತ್ತು. ಈ ಸಾಮ್ರಾಜ್ಯ ಮುಂದೆ ಇಡೀ ದಕ್ಷಿಣ ಭಾರತವನ್ನೆಲ್ಲ ಆಕ್ರಮಿಸಿ ದ್ರಾವಿಡ ಭಾಷಾ ನಾಡುಗಳನ್ನು ಬಹುತೇಕವಾಗಿ ಒಂದೇ ಕೇಂದ್ರದ ಆಡಳಿತದ ತೆಕ್ಕೆಯಲ್ಲಿ ತೆಗೆದುಕೊಂಡಿತು. ಈ ಸಾಮ್ರಾಜ್ಯದಲ್ಲಿ ಹಲವಾರು ಧರ್ಮಗಳು ನೆಲೆನಿಂತಿದ್ದವು. ಅಂತಹ ಧರ್ಮಗಳಲ್ಲಿ ಶೈವ ಧರ್ಮವೂ ಒಂದು. ಈ ಶೈವ ಧರ್ಮದಲ್ಲೇ ಬೇರೆ ಬೇರೆ ಕವಲುಗಳಿದ್ದವು. ಆಯಾ ಜನಾಂಗದ ನಾಯಕರು ಮತ್ತು ಆಳರಸರು ಇಡೀ ಸಾಮ್ರಾಜ್ಯದ ತುಂಬಾ ಶೈವ ದೇವಾಲಯಗಳ ರಚನೆಯನ್ನು ಮಾಡಿದರು. ಈ ಶೈವ ದೇವಾಲಯಗಳಲ್ಲಿ ಶೃಂಗೇರಿಯ ವಿದ್ಯಾಶಂಕರ ದೇವಾಲಯ ಹಂಪೆಯ ವಿರೂಪಾಕ್ಷ ದೇವಾಲಯಗಳನ್ನು ಕುರಿತು ಕೆಲವಾರು ಗ್ರಂಥಗಳಲ್ಲಿ ಮಾಹಿತಿ ದೊರೆತರೂ ಇಡೀ ಶೈವ ದೇವಾಲಯಗಳನ್ನು ಮತ್ತು ಶೈವ ದೇವಾಲಯಗಳ ಸಾಂಸ್ಕೃತಿಕ ಚಟುವಟಿಕೆಗಳನ್ನು ಕೇಂದ್ರ ಬಿಂದುವಾಗಿಟ್ಟುಕೊಂಡು ಯಾವುದೇ ಒಂದು ಸಮಗ್ರ ಅಧ್ಯಯನ ನಡೆದಿಲ್ಲ. ಈ ಕಾರಣದಿಂದಾಗಿಯೇ ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಶೈವ ದೇವಾಲಯಗಳ ಸಮಗ್ರ ಅಧ್ಯಯನವೇ ಈ ಮಹಾ ಪ್ರಬಂಧದ ಉದ್ದೇಶವಾಗಿದೆ.

## ೧.೨. ಈವರೆಗಿನ ಅಧ್ಯಯನ ಸಮೀಕ್ಷೆ

ಪ್ರಾಚೀನ ಭಾರತದ ದೇವಾಲಯಗಳು ಸಾಂಸ್ಕೃತಿಕ ಕೇಂದ್ರಗಳಾಗಿ ಹೊರ ಹೊಮ್ಮಿದವು. ಶತಶತಮಾನಗಳ ಇತಿಹಾಸವುಳ್ಳ ಈ ದೇವಾಲಯಗಳ ಬಗೆಗೆ ಆಧುನಿಕ ಭಾರತದಲ್ಲಿ ಅಧ್ಯಯನಗಳು ನಡೆಯುತ್ತಲೆ ಬಂದಿವೆ. ಭಾರತವನ್ನು ಸಂದರ್ಶಿಸಿದ ಪಾಶ್ಚಿಮಾತ್ಯರಿಗೆ ಇಲ್ಲಿನ ಕಲಾಪೂರ್ಣ ಜಗತ್ತು ಅಚ್ಚರಿ ಮೂಡಿಸಿತು. ಆದುದರಿಂದಲೇ ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಪಾಶ್ಚಿಮಾತ್ಯರು

ದೇವಾಲಯಗಳ ಬಗೆಗೆ ವಸ್ತುನಿಷ್ಠವಾದ ಅಧ್ಯಯನವನ್ನು ಕೈಗೊಂಡರು. ದೇವಾಲಯ ವಾಸ್ತುಶಿಲ್ಪದ ಅಧ್ಯಯನವನ್ನು ಕೈಗೊಂಡವರಲ್ಲಿ 'ರಾಂರಾಜ್ ಮೊದಲಿಗರು.[೧] ಇವರು ಭಾರತೀಯ ದೇವಾಲಯ ವಾಸ್ತುಶಿಲ್ಪವನ್ನು ಕುರಿತು ಸಿದ್ಧಪಡಿಸಿದ ರೀತಿ ನೀತಿಗಳು ಇಂದಿಗೂ ಅನುಕರಣೀಯ ಯೋಗ್ಯತೆಯನ್ನು ಪಡೆದುಕೊಂಡಿವೆ. ಕ್ರಿ.ಶ.೧೮೬೨ರಲ್ಲಿ ಭಾರತದಲ್ಲಿನ ಈಸ್ಟ್ ಇಂಡಿಯಾ ಕಂಪನಿಯ ಗವರ್ನರ್ ಜನರಲ್ ಆಗಿದ್ದ "ಲಾರ್ಡ ಕನ್ನಿಂಗ್" ದೇವಾಲಯಗಳನ್ನು ದಾಖಲಿಸಿ ರಕ್ಷಿಸುವಲ್ಲಿ ಶ್ರಮಿಸಿದನು. ಕ್ರಿ.ಶ.೧೮೭೬ರಲ್ಲಿ ಜೇಮ್ಸ್ ಫರ್ಗುಸನ್ ರವರ "ಹಿಸ್ಟರಿ ಆಫ್ ಇಂಡಿಯನ್ ಅಂಡ್ ಇಂಡೋನೇಷಿಯ್ ಆರ್ಕಿಟೆಕ್ಚರ್ ಪ್ರಕಟವಾಯಿತು. ಈತನು ಆರಂಭಸಿದ ವಸ್ತುನಿಷ್ಠ ಅಧ್ಯಯನವನ್ನು ಹೆನ್ರಿ ಕಜಿನ್ಸ್ ಜೇಮ್ಸ್ ಬರ್ಗೆಸ್, ಬೆಂಜಮನ್ ರೋಲೆಂಡ್, ಜೆ.ಸಿ.ಹಾರ್ಲೆ ಮುಂದುವರೆಸಿದರು.[೨] ಪರ್ಸಿಬ್ರೌನ್ ರಂತು ತಮ್ಮ ಗ್ರಂಥ "ಇಂಡಿಯನ್ ಆರ್ಕಿಟೇಕ್ಚರ್ " ಎಂಬುದರಲ್ಲಿ ಇಡೀ ಭಾರತದ ಬೌದ್ಧ ಮತ್ತು ಹಿಂದೂ ದೇವಾಲಯಗಳ ವಾಸ್ತುಶಿಲ್ಪದ ಬಗ್ಗೆ ಸಂಪೂರ್ಣವಾಗಿ ವೈಜ್ಞಾನಿಕವಾದ ಮಾಹಿತಿ ಒದಗಿಸಿದ್ದಾರೆ.

ರಾಂರಾಜ್‌ರವರು ಕೈಗೊಂಡ ವಸ್ತುನಿಷ್ಠ ಅಧ್ಯಯನವನ್ನು ಸ್ಟೆಲ್ಲಾ ಕ್ರಾಂರಿಚ್ ಮುಂದುವರಿಸಿದರು. ಪ್ರಾಚೀನ ವಾಸ್ತುಶಾಸ್ತ್ರಗಳನ್ನು ಗುರುತಿಸಿ, ಅವುಗಳ ನೆರವಿನಿಂದ ದೇವಾಲಯ ವಾಸ್ತುವನ್ನು ಗುರುತಿಸುವ ಕಾರ್ಯವು ಮುಂದುವರೆಯಿತು. ಕೆ.ಆರ್.ಶ್ರೀನಿವಾಸನ್, ಟಿ.ವಿ.ಮಹಾಲಿಂಗಂ, ಕೆ.ವಿ.ಸೌಂದರರಾಜನ್ ಮುಂತಾದವರು ದಕ್ಷಿಣಾತ್ಯ ದೇವಾಲಯಗಳನ್ನು ಶಾಸ್ತ್ರೀಯ ರೀತಿಯಿಂದ ಗುರುತಿಸಿದರು.[೩]

ಕನ್ನಡದಲ್ಲಿ ದೇವಾಲಯವನ್ನು ಕುರಿತು ಅಧ್ಯಯನಗಳು ನಡೆದಿವೆ. ಡಾ.ಎಂ.ಚಿದಾನಂದ ಮೂರ್ತಿಯವರು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನಾ ಪ್ರಬಂಧದ ಒಂದು ಅಧ್ಯಾಯದಲ್ಲಿ ದೇವಾಲಯಗಳ ಸಾಂಸ್ಕೃತಿಕ ಅಧ್ಯಾಯವನ್ನು ನಡೆಸಿದ್ದಾರೆ.[೪] ಅಲ್ಲದೆ, ಬಿ.ವೆಂಕೋಬರಾಯರು "ಮೈಸೂರು ದೇಶದ ವಾಸ್ತುಶಿಲ್ಪ ಗ್ರಂಥದಲ್ಲಿ ಮೈಸೂರು ರಾಜ್ಯದ ದೇವಾಲಯವನ್ನು ಕುರಿತು ಪರಿಚಯಾತ್ಮಕವಾಗಿ ವಿವರಿಸಿದ್ದಾರೆ.[೫] ಇದೇ ರೀತಿಯಲ್ಲಿ ಡಾ.ಶಿವರಾಮ ಕಾರಂತರು ಬರೆದಿರುವ 'ಭಾರತೀಯ ಶಿಲ್ಪ' ಗ್ರಂಥವು ಶಿಲ್ಪಗಳ ಬಗೆಗೆ ಕನ್ನಡದಲ್ಲಿ ದೊರೆಯುವ ಪ್ರಮುಖ ಆಕರ ಗ್ರಂಥವಾಗಿದೆ.[೬] ಇವರ ಇನ್ನೊಂದು ಗ್ರಂಥವಾದ 'ಚಿತ್ರ, ಶಿಲ್ಪ ಮತ್ತು ಕಲೆಗಳು' ಮೂರು ಉಪನ್ಯಾಸಗಳ ಪುಸ್ತಕವಾಗಿದೆ. ಕಾರಂತರ ಮತ್ತೊಂದು ಪುಸ್ತಕವಾದ "ಚಾಲುಕ್ಯ ವಾಸ್ತುಶಿಲ್ಪ" ಎಂಬ ಗ್ರಂಥವು ಚಾಲುಕ್ಯ ವಾಸ್ತುಶಿಲ್ಪದ ಬಗೆಗೆ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ.[೭]

ಎಸ್.ಕೆ.ರಾಮಚಂದ್ರರಾಯರು ಬರೆದಿರುವ "ಭಾರತೀಯ ದೇವಾಲಯಗಳ ನೆಲೆ ಹಿನ್ನೆಲೆ" ಗ್ರಂಥವು ಭಾರತದ ದೇವಾಲಯಗಳು ಬೆಳೆದು ಬಂದು ರೀತಿಯನ್ನು ವಿವರಿಸುತ್ತಿದೆ.[೮] ಇದೇ ಲೇಖಕರ 'ಮೂರ್ತಿಶಿಲ್ಪದ ನೆಲೆ-ಹಿನ್ನಲೆ' ಎಂಬ ಗ್ರಂಥವು ಭಾರತೀಯ ಮೂರ್ತಿ ಶಿಲ್ಪದ ಬಗೆಗೆ ಮಾಹಿತಿಯನ್ನು ನೀಡುತ್ತದೆ.

ವಿಜಯನಗರದ ಸಾಮ್ರಾಜ್ಯವನ್ನೇ ಕೇಂದ್ರವಾಗಿಟ್ಟುಕೊಂಡು ರಚನೆಯಾದ ಗ್ರಂಥಗಳು ಬಹಳಷ್ಟು ಕಂಡುಬರುತ್ತವೆ. ಆದರೆ ವಿಜಯನಗರದ ವಾಸ್ತುಶಿಲ್ಪವನ್ನೆ ಸಮಗ್ರವಾಗಿಟ್ಟು ನಡೆದಿರುವ ಅಧ್ಯಯನಗಳು ಆಂಗ್ಲ ಭಾಷೆಯಲ್ಲಿ ನಡೆದಿವೆಯಾದರೂ ಕನ್ನಡದಲ್ಲಿ ಈ ಬಗೆಗಿನ ಗ್ರಂಥಗಳು ಕಡಿಮೆ.

ವಿಜಯನಗರ ಸಾಮ್ರಾಜ್ಯವನ್ನು ಕೇಂದ್ರವಾಗಿಸಿಕೊಂಡ ಅಧ್ಯಯನಗಳು ನಮಗೆ ಅಂದಿನ ಕಾಲದ ವಾಸ್ತುಶಿಲ್ಪದ ಮಾಹಿತಿಯನ್ನು ನೀಡುತ್ತವೆ. ಅಂತಹ ಗ್ರಂಥಗಳಲ್ಲಿ ಅನಿತಾ ವರ್ಗಿಸ್ ರವರ "Religious Traditions at Vijayanagar,[೧೦] ವಿ.ಜಿ.ಜಯಂತಿ ಅವರ 'Hampi a cultural study',[೧೧] ಕೆ.ರೆಡ್ಡೆಪ್ಪ ಅವರ "Vijayanagara Temples",[೧೨] ಕೊಂದೊರಿ ಸರೋಜಿನ ಅವರ Religion in Vijayanagara Empire,[೧೩] ಡಾ.ಕೆ.ಎಂ.ಸುರೇಶ್ ಅವರ Sculptural Art of Hampi[೧೪] ಮುಂತಾದ ಗ್ರಂಥಗಳಲ್ಲಿ ಸಂಶೋಧಕರು ತಮ್ಮದೇ ಆದ ವ್ಯಾಪ್ತಿಯಲ್ಲಿ ವಿಜಯನಗರದ ಹಲವು ಮುಖಗಳನ್ನು ಕುರಿತು ಸೂಕ್ಷ್ಮವಾಗಿ ಅಧ್ಯಯನ ನಡೆಸಿ ವಿವರಣೆ ನೀಡಿದ್ದಾರೆ.

ವಿಜಯನಗರ ವಾಸ್ತುಶಿಲ್ಪದ ಬಗೆಗೆ ಮಾಹಿತಿ ನೀಡುವ ಈ ಪುಸ್ತಕಗಳು ಅಧ್ಯಯನಕ್ಕೆ ವಿವರಣೆ ನೀಡುತ್ತವೆ. ಅವುಗಳಲ್ಲಿ ರಮಾನಂದ ಅವರ "ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯಯನ"[೧೫] ಎಸ್.ಎಸ್. ಸಜ್ಜನ ಅವರ "ವಿಜಯನಗರ ಕಾಲದ ಜಾತ್ರೆ ಮತ್ತು ಉತ್ಸವಗಳು"[೧೬] ಅಂದಿನ ಕಾಲದ ಜಾತ್ರೆಗಳ ಬಗೆಗೆ ಮತ್ತು ಉತ್ಸವಗಳ ಬಗೆಗೆ ಮಾಹಿತಿ ನೀಡುತ್ತವೆ. ಇದೇ ರೀತಿಯಲ್ಲಿ ರಾಜಶೇಖರ ಸಿಂದಗಿಯವರ "ಕರ್ನಾಟಕ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ"[೧೭] ಎಂಬ ಗ್ರಂಥದಲ್ಲಿ ವಿಜಯನಗರ ಕಾಲದ ವಾಸ್ತುಶಿಲ್ಪದ ಬಗೆಗೆ ಒಂದು ಅಧ್ಯಯವನ್ನು ಮೀಸಲಿಟ್ಟಿದ್ದಾರೆ. ಇದೇ ರೀತಿಯಲ್ಲಿ ಮಾಹಿತಿ ನೀಡುವ ಬಾ.ರಾ.ಗೋಪಾಲ್ ಅವರ "ವಿಜಯನಗರದ ವಾಸ್ತುಶಿಲ್ಪ"[೧೮] ಎಂಬ ಗ್ರಂಥವು ಅಂದಿನ ಕಾಲದ ವಾಸ್ತುಗಳ ಲಕ್ಷಣವನ್ನು ತಿಳಿಸುತ್ತದೆ.

ವಿಜಯನಗರ ಕಾಲದ ವಾಸ್ತುಶಿಲ್ಪವನ್ನೆ ಕೇಂದ್ರವಾಗಿಟ್ಟು ರಚನೆಗೊಂಡ ಗ್ರಂಥಗಳಲ್ಲಿ ಮಹತ್ವದ ಕೃತಿ ಎಂದರೆ ಎಸ್.ಶಿವರುದ್ರ ಸ್ವಾಮಿಯವರ "Vijayanagara Temples in karnataka"[೧೯] ಎಂಬ ಗ್ರಂಥ ಈ ಗ್ರಂಥದಲ್ಲಿ ಕರ್ನಾಟಕದಲ್ಲಿರುವ ವಿಜಯನಗರ ದೇವಾಲಯಗಳ ಒಂದು ಪಟ್ಟಿಯನ್ನು ನೀಡಿದ್ದಾರೆ. ಅಲ್ಲದೆ ವಿಜಯನಗರ ವಾಸ್ತುಶಿಲ್ಪದ ಲಕ್ಷಣಗಳನ್ನು ವಿವರಿಸಿದ್ದಾರೆ. ಇದರಲ್ಲಿ ವಿಜಯನಗರ ಕಾಲದ ದೇವಾಲಯಗಳ ವಾಸ್ತುಶಿಲ್ಪಕ್ಕೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಗ್ರಂಥದಲ್ಲಿ ಆರು ಶೈವದೇವಾಲಯಗಳನ್ನು ಕುರಿತು ಮಾತ್ರ ವಿವರಣೆ ಬಂದಿದೆ. ಈ ಎಲ್ಲ ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಪ್ರಸ್ತುತವಾಗಿ ಶೈವ ದೇವಸ್ಥಾನಗಳ ಮುಖೇನವಾಗಿ ವಿಜಯನಗರ ಕಾಲದ ದೇವಾಲಯಗಳ ಸಾಂಸ್ಕೃತಿಕ ದೃಷ್ಟಿಕೋನವನ್ನಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

## ೩.೩. ಅಧ್ಯಯನದ ವ್ಯಾಪ್ತಿ

ವಿಜಯನಗರ ಕಾಲದ ಶೈವ ದೇವಾಲಯಗಳು ರಾಜಾಶ್ರಯದ ನೆರಳಿನಲ್ಲಿ ಬೆಳೆದುಬಂದವು ಎಂಬುದು ಎಲ್ಲರೂ ಬಲ್ಲ ಮಾತು. ನಮ್ಮ ನಾಡಿನ ಸಾಂಸ್ಕೃತಿಕ ಬದುಕನ್ನು ಬಿಂಬಿಸುವ ದೇವಾಲಯಗಳು ಅಂದಿನ ಸಾಮ್ರಾಜ್ಯದ ಉತ್ಥಾನ, ಅವನತಿ ಸ್ಥಿತ್ಯಾಂತರ, ಸುಭೀಕ್ಷೆ, ಸಂಕೀರ್ಣತೆಗಳಿಗೆಲ್ಲ ಕಾರಣವಾಗಿದೆ. ಈ ರೀತಿಯ ಹಿನ್ನೆಲೆಯನಿಟ್ಟುಕೊಂಡ ಶೈವ ದೇವಾಲಯಗಳು ಆ ಕಾಲದ ಸಾಂಸ್ಕೃತಿಕ ಜೀವನದ ಬಿಂಬಕಗಳಾಗಿದ್ದವು. ಅಂದಿನ ಕಾಲದಲ್ಲಾದ ಶೈವ ಧರ್ಮದ ವಿವಿಧ ಶಾಖೆಗಳಾದ ಕಾಪಾಲಿಕ, ಕಾಳಾಮುಖ, ಪಾಶುಪತ ಶೈವ, ವೀರಶೈವ ಧರ್ಮಗಳ ಅವ್ಯಾಹತ ಪರಂಪರೆ ಎಂತಹದು, ಇವುಗಳನ್ನು ವಿಜಯನಗರ ಕಾಲದಲ್ಲಿ ಗಳಿಸಿಕೊಂಡ ಸ್ಥಾನ ಏನು ಎಂಬುದನ್ನು ತಿಳಿಸುವುದಕ್ಕೆ ಈ ಅಧ್ಯಯನವು ನೆರವಾಗಬಲ್ಲದು.

ಪ್ರಸ್ತುತ ಪ್ರಬಂಧದ ವಿಷಯ ವ್ಯಾಪ್ತಿಯು ಕ್ರಿ.ಶ.೧೩೩೬ರಿಂದ ಅಂದರೆ ಒಂದನೆಯ ಹರಿಹರನಿಂದ ಪ್ರಾರಂಭವಾಗಿ ಅರವೀಡು ವಂಶದ ರಾಮರಾಯನ ಕ್ರಿ.ಶ.೧೫೬೫ ತಾಳಿಕೋಟೆ ಯುದ್ಧದವರೆಗೆ ಕಟ್ಟಲ್ಪಟ್ಟ ಸಂರಕ್ಷಿಸಲ್ಪಟ್ಟ ಶೈವದೇವಾಲಯಗಳನ್ನು ಅಧ್ಯಯನ ಮಾಡುವ ಆಸೆಯ ಹೊತ್ತು ಪ್ರಾರಂಭಿಸಲಾಯಿತು. ಆದರೆ ಈ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ಇಡೀ ದಕ್ಷಿಣ ಭಾರತವನ್ನೆಲ್ಲ ವ್ಯಾಪಿಸಿದ್ದು, ಇವುಗಳೆಲ್ಲದರ ಅಧ್ಯಯನವು ಬಹಳ ಕಷ್ಟಕರವಾದ ಕೆಲಸವಾದ್ದರಿಂದ ಈ ಅಧ್ಯಯನವನ್ನು ಕೇವಲ ಕರ್ನಾಟಕಕಷ್ಟೇ ಸೀಮಿತಗೊಳಿಸಿಕೊಳ್ಳಲಾಯಿತು. ಅಧ್ಯಯನ ಕೈಗೊಂಡಾಗ ಸುಮಾರು ಎರಡುನೂರ ಒಂಬತ್ತು ಶೈವದೇವಾಲಯಗಳ ಪಟ್ಟಿ ಸಿದ್ಧವಾಯಿತು. ಈ ಕಾರಣದಿಂದ ವಿಜಯನಗರ ಕಾಲದ ಶಾಸನಗಳನ್ನು ಹೊಂದಿದ ಪ್ರಮುಖವಾದ ಶೈವದೇವಾಲಯಗಳನ್ನಾಯ್ದುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ೧.೪. ಅಧ್ಯಯನ ವಿಧಾನ

ವಿಜಯನಗರ ಕಾಲದ ಶೈವ ದೇವಾಲಯಗಳು ಎಂಬ ಈ ಪ್ರಬಂಧದಲ್ಲಿ ಮುಖ್ಯವಾಗಿ ಶಾಸನಗಳು ಮತ್ತು ಕೆಲವು ಸಾಂದರ್ಭಿಕ ಗ್ರಂಥಗಳು ಹಾಗೂ ಕ್ಷೇತ್ರಕಾರ್ಯವನ್ನು ಕೈಗೊಂಡು ಅಧ್ಯಯನವನ್ನು ನಡೆಸಲಾಗಿದೆ. ವಿದೇಶಿಯ ಪ್ರವಾಸಿಗರ ಕಥನಗಳನ್ನು ಸಹ ಪ್ರಬಂಧದ ರಚನೆಯಲ್ಲಿ ಸಾಂದರ್ಭಿಕವಾಗಿ ಉಪಯೋಗಿಸಲಾಗಿದೆ. ವಿಜಯನಗರದ ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನಗಳು ಐತಿಹಾಸಿಕವಾದ ಅತ್ಯಮೌಲ್ಯವಾದ ಲಿಖಿತ ದಾಖಲೆಗಳಾಗಿವೆ. ರಾಜಕೀಯ, ಆರ್ಥಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಲಿಖಿತ ದಾಖಲೆಗಳು ಹೆಚ್ಚು ಖಚಿತವಾದ ಮಾಹಿತಿಯನ್ನು ಒದಗಿಸುತ್ತವೆ. ಇದರಿಂದಾಗಿ ಪ್ರಸ್ತುತ ವಿಜಯನಗರ ಕಾಲದ ಶೈವ ದೇವಾಲಯಗಳು ಈ ಅಧ್ಯಯನಕ್ಕೆ ಶಾಸನಗಳೇ ಮೂಲ

ಆಕರಗಳಾಗಿವೆ. ಶಾಸನಗಳು ಗತಕಾಲದ ಪ್ರಮುಖ ದಾಖಲೆಗಳು. ಇವುಗಳಿಂದ ತಿಳಿದುಬರುವ ಮಾಹಿತಿಯು ಬಿಡಿ ಬಿಡಿಯಾಗಿ ದೊರೆತರೂ ಅವುಗಳನ್ನು ಒಂದು ಚೌಕಟ್ಟಿನಲ್ಲಿಟ್ಟು ಪರಿಶೀಲಿಸಿದಾಗ ಅಂದಿನ ಕಾಲದ ವಾಸ್ತು ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ವಿಶ್ಲೇಷಿಸಲು ನೆರವಾಗುತ್ತದೆ.

ಸಮಕಾಲೀನ ಶಾಸನಗಳ ಹಿನ್ನೆಲೆಯಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಮತ್ತು ದಾನದತ್ತಿ ಪಡೆದುಕೊಂಡು, ಜೀರ್ಣೋದ್ಧಾರ ಹೊಂದಿದ ದೇವಾಲಯಗಳನ್ನು ಪರಿಚಯ ಮಾಡಿಕೊಳ್ಳುವಾಗ ತಿಳಿದುಬರುವ ಸಾಂಸ್ಕೃತಿಕ ಮಹತ್ವವನ್ನು ವಿಶ್ಲೇಷಿಸಲಾಗಿದೆ. ಈ ಕಾಲದಲ್ಲಿನ ಶಾಸನಗಳನ್ನು ಸಂಗ್ರಹಿಸಿ ಅವುಗಳಲ್ಲಿರುವ ವಿಷಯಗಳ ಬಗ್ಗೆ ಪ್ರಪತ್ರವನ್ನು ಸಿದ್ಧಪಡಿಸಿ ಅದರಲ್ಲಿ ಶಾಸನದ ಹೆಸರು, ಕಾಲ, ರಾಜ್ಯ, ಗ್ರಂಥ ದೇವಾಲಯದ ಹೆಸರು ನಿರ್ಮಾಣ ಜೀರ್ಣೋದ್ಧಾರ, ದಾನದತ್ತಿ, ಗ್ರಾಮಗಳು, ದಾನ ನೀಡಿದವರು, ಯಾರ ಒಳಿತಿಗಾಗಿ ದಾನ ನೀಡಲಾಗಿದೆ. ಹೀಗೆ ಶಾಸನಗಳಿಂದ ತಿಳಿದ ಮಾಹಿತಿಯಿಂದ ತೆಗೆದುಕೊಂಡು ಕರ್ನಾಟಕದಲ್ಲಿರುವ ಶೈವ ದೇವಸ್ಥಾನಗಳ ಪಟ್ಟಿ ಸಿದ್ಧಮಾಡಿಕೊಳ್ಳಲಾಯಿತು. ನಂತರದಲ್ಲಿ ರಾಜ್ಯ ಮತ್ತು ಕೇಂದ್ರ ಪುರಾತತ್ವ ಇಲಾಖೆಯಿಂದ ದೇವಾಲಯಗಳ ಬಗೆಗೆ ಮಾಹಿತಿ ಪಡೆದುಕೊಂಡು ಕ್ಷೇತ್ರಕಾರ್ಯದ ಸ್ಥಳಗಳನ್ನು ಗುರುತಿಸಿಕೊಂಡು ಅಧ್ಯಯನ ಕೈಗೊಳ್ಳಲಾಯಿತು.

ಕ್ಷೇತ್ರಕಾರ್ಯದಲ್ಲಿ ದೇವಸ್ಥಾನದ ಛಾಯಾಚಿತ್ರ, ಶಾಸನವಿರುವ ಸ್ಥಳ ಮತ್ತು ದೇವಸ್ಥಾನ ಶೈಲಿ ಇಂದಿನ ಕಾಲದಲ್ಲಿ ಯಾವ·ರೀತಿಯಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ ಎಂಬುದನ್ನು ಗಮನಿಸಲಾಗಿದೆ. ಕೆಲವೊಂದು ಕಡೆಗಳಲ್ಲಿ ಹಳೆಯ ದೇವಸ್ಥಾನಗಳನ್ನು ಪೂರ್ತಿಯಾಗಿ ನಾಶಪಡಿಸಿ ಮತ್ತು ಹೊಸ ದೇವಸ್ಥಾನ ನಿರ್ಮಿಸಲಾಗಿದೆ. ಹಳೆಯ ದೇವಸ್ಥಾನದ ಪರಿಕರಗಳು ಮತ್ತು ಆ ಸ್ಥಳದ ಛಾಯಚಿತ್ರವನ್ನು ತೆಗೆದು ಅಲ್ಲಿನ ಐತಿಹಾಸಿಕ ಕುರುಹುಗಳಿದ್ದರೆ ಅದರ ವಿವರಣೆಯನ್ನು ನೀಡಲಾಗಿದೆ. ಇದ್ದ ದೇವಾಲಯದ ತಲನಕ್ಷೆಯನ್ನು ಸಿದ್ಧಪಡಿಸಿಕೊಂಡು ಪ್ರಬಂಧದಲ್ಲಿ ಸೇರಿಸಲಾಗಿದೆ. ಮೊದಲಿನ ಗ್ರಂಥಗಳು ಹೇಳುವ ದೇವಾಲಯ ಸ್ಥಿತಿಗಳನ್ನು ಇಂದು ಅದು ಪಡೆದುಕೊಂಡ ಮಾರ್ಪಾಡನ್ನು ತಿಳಿಸಲಾಗಿದೆ.

ಹೀಗೆ ಒಂದು ದೇವಸ್ಥಾನದ ಬಗೆಗೆ ಸಮಗ್ರ ಮಾಹಿತಿಯನ್ನು ನೀಡಲು ಇಲ್ಲಿ ಪ್ರಯತ್ನಿಸಲಾಗಿದೆ. ಇದಕ್ಕೆ ಪೂರಕವಾದ ನಕ್ಷೆ, ಛಾಯಾಚಿತ್ರಗಳನ್ನು ನೀಡಲಾಗಿದೆ. ಹಾಗೇಯೆ ಅನುಬಂಧದಲ್ಲಿ ಅಧ್ಯಯನಕ್ಕೆ ಪೂರಕವಾದ ಗ್ರಂಥಪಟ್ಟಿಯನ್ನು ಮತ್ತು ದೇವಾಲಯಕ್ಕೆ ಸಂಬಂಧಿಸಿದ ಹೊಸ ಶಬ್ದಗಳ ಅರ್ಥವನ್ನು ನೀಡುವ ಪಾರಿಭಾಷಿಕ ಪದಕೋಶವನ್ನು ನೀಡಲಾಗಿದೆ.

**ಅಡಿಟಿಪ್ಪಣಿಗಳು**

೧. ಪ್ರಭಾಕರ್ ಎಂ.ಎಸ್., **ದೇವಾಲಯ ವಾಸ್ತುಚಂದ್ರಿಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೬

೨. ಅದೇ, ಪು.೭

೩. ಅದೇ, ಪು.೭

೪. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦

೫. ವೆಂಕೋಬರಾವ್ ಬಿ., **ಮೈಸೂರು ದೇಶದ ವಾಸ್ತುಶಿಲ್ಪ,** ಬೆಂಗಳೂರು, ೧೯೫೫

೬. ಶಿವರಾಮ ಕಾರಂತ, **ಭಾರತೀಯ ಶಿಲ್ಪ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

೭. ಶಿವರಾಮ ಕಾರಂತ, **ಚಾಲುಕ್ಯ ವಾಸ್ತು ಮತ್ತು ಶಿಲ್ಪ,** ಮೈಸೂರು ರಾಜ್ಯದ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೬೯

೮. ರಾಮಚಂದ್ರಾವ್ ಎಸ್.ಕೆ., **ಭಾರತೀಯ ದೇವಾಲಯ ನೆಲೆ-ಹಿನ್ನೆಲೆ,** ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೭೯

೯. ರಾಮಚಂದ್ರಾವ್ ಎಸ್.ಕೆ., **ಮೂರ್ತಿಶಿಲ್ಪದ ನೆಲೆ-ಹಿನ್ನೆಲೆ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೬

೧೦. Anita Vargees, **Religious Tradition at Vijayanagar,** American Institute of Indian studies, New Delhi, 1995

೧೧. Jayanti V.G., **Hampi a Cultural Study** (Ph.D.Thesis: Unpublished), Karnataka University, Dharwad, 1993

೧೨. Reddeppa K., **Vijayanagar Temples,** Bharatiya Kala Prakashana, New Delhi

೧೩. Sarjojini Konduri, **Religion in Vijayanagar Empire,** New Delhi, 1990

೧೪. Suresh K.M., **Sculptural Art of Hampi,** Directorate of Archaeology and Museum, Mysore, 1998

೧೫. ರಮಾನಂದ, **ವಿಜಯನಗರ ಕಾಲದ ಶಾಸನಗಳು : ಸಾಂಸ್ಕೃತಿಕ ಅಧ್ಯಯನ** (ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೯

೧೬. ಸಜ್ಜನ ಎಸ್.ಎಸ್. **ವಿಜಯನಗರ ಕಾಲದ ಜಾತ್ರೆ ಮತ್ತು ಉತ್ಸವಗಳು** (ಎಂ.ಫಿಲ್.ಅಪ್ರಕಟಿತ ಪ್ರಬಂಧ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

೧೭. ರಾಜಶೇಖರ ಸಿಂದಗಿ, **ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ,** ಸುಜಾತ ಪಬ್ಲಿಕೇಷನ್ಸ್, ಧಾರವಾಡ

೧೮. ಗೋಪಾಲ್ ಬಾ.ರಾ., **ವಿಜಯನಗರದ ವಾಸ್ತುಶಿಲ್ಪ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೬

೧೯. Shiva Rudraswami N., **Vijayanagara Temples in Karnataka,** Directorate of Archaeology and Museum, Mysore, 1996

# ಚಾರಿತ್ರಿಕ ಹಿನ್ನೆಲೆ

ಹದಿನಾಲ್ಕನೆಯ ಶತಮಾನದ ಮಧ್ಯದಲ್ಲಿ ತಲೆಯೆತ್ತಿದ ವಿಜಯನಗರ ಸಾಮ್ರಾಜ್ಯವು ಆಕಸ್ಮಿಕವಾಗಿ ಜನ್ಮತಾಳಿದ್ದುದಲ್ಲ. ಇದು ಸಾಂಸ್ಕೃತಿಕ ರಕ್ಷಣೆಯ ಮಹತ್ವವನ್ನು ಇಟ್ಟುಕೊಂಡು ಉದಯಿಸಿದ ರಾಜ್ಯವಾಗಿತ್ತು. ಕ್ರಿ.ಶ.ಹತ್ತನೆಯ ಶತಮಾನದಿಂದಲೇ ವಿದೇಶಿಯ ದಾಳಿಗೆ ತುತ್ತಾಗಿದ್ದ ಭಾರತ ಹದಿಮೂರನೆಯ ಶತಮಾನದ ಹೊತ್ತಿಗಾಗಲೇ ದಿಲ್ಲಿಯ ಸುಲ್ತಾನರ ಆಧಿಪತ್ಯಕ್ಕೆ ಒಳಪಟ್ಟಿತ್ತು. ಕ್ರಿ.ಶ.೧೨೯೬ರಲ್ಲಿ ಮಲ್ಲಿಕ್ ಫಿರೋಜ್ ಎಂಬಾತನು ಜಲಾಲುದ್ದೀನ್ ಪಿರೋಜ್ ಷಹ ಎಂಬ ಹೆಸರಿನಿಂದ ದೆಹಲಿಯಲ್ಲಿ ಸಿಂಹಾಸನಾರೋಹಿಯಾಗಿದ್ದ. ಇಡೀ ಉತ್ತರ ಭಾರತವು ಈತನ ಆಳ್ವಿಕೆಯಿಂದ ಕೇಂದ್ರೀಕೃತವಾದ ರಾಜಸತ್ತೆಗೆ ಒಳಪಟ್ಟಿತ್ತು. ಕ್ರಿ.ಶ.೧೩೨೦ರಲ್ಲಿ ಈ ಸಂತತಿಯು ನಶಿಸಿತು. ಇವರ ಸೇನಾಧಿಪತಿಯಾಗಿದ್ದ ಘೀಯಾಸುದ್ದೀನ್ ತೊಘಲಕ್ ತಾನೇ ಸಿಂಹಾಸನಾಧಿಪತಿಯಾಗಿ ಅಧಿಕಾರದ ಗದ್ದುಗೆ ಹಿಡಿದನು. ಈತನ ನಂತರ ಈತನ ಮಗನಾದ ಮಹಮದ್ ಬಿನ್-ತುಘಲಕ್ ದೆಹಲಿಯ ರಾಜ್ಯಭಾರವನ್ನು ವಹಿಸಿಕೊಂಡಿದ್ದ ಈ ಕಾಲಘಟ್ಟದಲ್ಲೇ ದಕ್ಷಿಣದಲ್ಲಿ ಪ್ರಬಲವಾದ ಹಿಂದೂ ಸಾಮ್ರಾಜ್ಯ ತಲೆ ಎತ್ತಿತ್ತು.[೧]

ವಿಜಯನಗರ ರಾಜ್ಯವು ಉದಯಿಸುವ ವೇಳೆಯಲ್ಲಿ ದಕ್ಷಿಣ ಭಾರತದಲ್ಲಿ ಹಲವಾರು ರಾಜ ಮನೆತನಗಳು ಆಳ್ವಿಕೆ ನಡೆಸುತ್ತಿದ್ದವು. ಕಾಕತೀಯ ರಾಜನು ಓರಂಗಲ್ಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು, ಚೋಳರು ತಂಜಾವೂರನ್ನು ರಾಜಧಾನಿಯನ್ನಾಗಿಸಿಕೊಂಡಿದ್ದರು, ಪಾಂಡ್ಯರು ಮಧುರೆಯನ್ನು ರಾಜಧಾನಿಯಾಗಿಸಿಕೊಂಡು ಆಳ್ವಿಕೆ ನಡೆಸುತ್ತಿದ್ದರು.[೨] ಚೇರರ ರಾಜ್ಯವು ತಿರುವನಂತಪುರ ಕೊಚ್ಚಿನ್ ಪ್ರಾಂತ್ಯಗಳಲ್ಲಿ ಆಳ್ವಿಕೆಯನ್ನು ನಡೆಸುತ್ತಿತ್ತು. ಮುಖ್ಯವಾಗಿ ಹೊಯ್ಸಳ ಸಾಮ್ರಾಜ್ಯವು ದ್ವಾರಸಮುದ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕರ್ನಾಟಕ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳನ್ನು ಹಿಡಿತದಲ್ಲಿಟ್ಟುಕೊಂಡಿತ್ತು. ಇದು ಕರ್ನಾಟಕದ ಒಂದು ಪ್ರಮುಖ ಸಾಮ್ರಾಜ್ಯವಾಗಿತ್ತು. ಕಾಲಾನಂತರದಲ್ಲಿ ಈ ಎಲ್ಲಾ ದಕ್ಷಿಣದ ರಾಜ್ಯಗಳು ತಮ್ಮ ಸಾಮರ್ಥ್ಯಗಳನ್ನು ಕ್ಷೀಣಿಸಿಕೊಳ್ಳುವ ಸಮಯದಲ್ಲಿ ಉತ್ತರದಿಂದ ಮಲ್ಲಿಕಾಫರನು ಕ್ರಿ.ಶ.೧೩೦೬ ರಿಂದ ಕ್ರಿ.ಶ.೧೩೩೦ವರೆಗೆ ದಕ್ಷಿಣಾ ಪಥವನ್ನು ಜಯಿಸಲು ದಂಡಯಾತ್ರೆ ಕೈಗೊಂಡನು. ಆತನು ಉತ್ತರದ ಮಾಧವರನ್ನು ತೊಡೆದು ಹಾಕಿ, ಪೂರ್ವದಲ್ಲಿ, ಗಜಪತಿಯನ್ನು, ದಕ್ಷಿಣದಲ್ಲಿ ತಮಿಳು ರಾಜ್ಯವನ್ನೂ, ಓರಂಗಲ್ಲಿನ ಕಾಕತೀಯರನ್ನೂ

ಜಯಿಸಿದ್ದನು.[೩] ಈ ರೀತಿಯ ರಾಜಕೀಯ ಸಂದಿಗ್ಧದಲ್ಲಿ ಹೊಯ್ಸಳರಾಜನಾದ ಮೂರನೆಯ ಬಲ್ಲಾಳನು ಉತ್ತರದ ವೈರಿದಾಳಿಗಳನ್ನು ಸಮರ್ಥವಾಗಿ ಎದುರಿಸಿದನು.[೪] ಈ ಯುದ್ಧಗಳಲ್ಲಿ ಸಂಗಮನ ಐವರು ಮಕ್ಕಳು ಮೂರನೆಯ ಬಲ್ಲಾಳನಿಗೆ ಸಹಾಯ ನೀಡಿದರು. ಇದರಿಂದ ಸಂಗಮರ ಮೇಲೆ ಹೊಯ್ಸಳ ರಾಜನಿಗೆ ಸಂತೋಷ ಉಂಟಾಗಿತ್ತು. ಮುಂದೆ ಹೊಯ್ಸಳ ರಾಜರು ಈ ಐವರು ಸಂಗಮನ ಮಕ್ಕಳಿಗೆ ಧರ್ಮದೀಕ್ಷೆಯನ್ನು ಬಿಟ್ಟು ಹೋದರೂ ಕೂಡ ಈ ಸಹೋದರರಿಗೆ ಮೊದಲಿಗೆ ಮೂರನೆಯ ಬಲ್ಲಾಳನೇ ಮಹಾರಾಜನಾಗಿದ್ದನು.[೫]

ಹೀಗೆ ೧೩೩೬ರಲ್ಲಿ ಸಂಗಮ ಸಹೋದರರು ವಿಜಯನಗರದಲ್ಲಿ ರಾಜ್ಯಸ್ಥಾಪನೆಯನ್ನು ಮಾಡಿದರೂ ಸಹ ಅವರು ಇನ್ನೂ ಹೊಯ್ಸಳ ಸಾಮಂತ ಅರಸರೆಂದು ಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. ಮುಂದೆ ಕ್ರಿ.ಶ.೧೩೪೬ರಲ್ಲಿ ಇವರು ಸಂಪೂರ್ಣ ಸ್ವತಂತ್ರ್ಯವಾದ ಸಾಮ್ರಾಜ್ಯದ ಒಡೆಯರಾದರು. ಹೀಗೆ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯವು ಕೆಲವು ಖಚಿತವಾದ ಉದ್ದೇಶವನ್ನು ಹೊಂದಿತ್ತು. ಸ್ವರಾಜ್ಯ ಮತ್ತು ಸ್ವಧರ್ಮ ಸ್ವಸಂಸ್ಕೃತಿಗಳನ್ನು ಪೂರೈಸುವ ಹೊಣೆಯನ್ನು ಹೊತ್ತ ಈ ವಿಜಯನಗರವು ತಲೆ ಎತ್ತಿತ್ತು.[೬] ಭಾರತೀಯ ಧರ್ಮ ಮತ್ತು ಸಂಸ್ಕೃತಿಗಳನ್ನು ಪುನರುಜ್ಜೀವನಗೊಳಿಸುವಲ್ಲಿ ವಿಜಯನಗರ ಸಾಮ್ರಾಜ್ಯವು ವಿಶೇಷ ಪಾತ್ರವನ್ನು ವಹಿಸಿತು. ಇದಕ್ಕಾಗಿ ಎಲ್ಲಾ ಧರ್ಮಪಂಥಗಳನ್ನು ಪೋಷಿಸುವ ಪರಂಪರಾಗತವಾದ ವಿದ್ಯೆ, ಜ್ಞಾನ, ಶಾಖೆಗಳನ್ನು ಊರ್ಜಿತಗೊಳಿಸುವ ಸ್ವಭಾಷೆ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ನೀಡುವ ಅಭಿಲಾಷೆಗಳನ್ನು ಈ ಸಾಮ್ರಾಜ್ಯದ ಅರಸರು ಹೊಂದಿದ್ದರು ಎಂಬುದು ಸುಸ್ಪಷ್ಟ.[೭]

ಸಂಗಮ, ಸಾಳುವ, ತುಳುವ, ಅರೆವೀಡು ಎಂಬುವ ನಾಲ್ಕು ರಾಜವಂಶಗಳು ವಿಜಯನಗರವನ್ನು ಆಳ್ವಿಕೆ ನಡೆಸಿದವು. ಮೊದಲ ಮೂರು ರಾಜ ವಂಶಗಳು ವಿಜಯನಗರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರೆ ಕೊನೆಯ ಅರವೀಡು ವಂಶವು ರಕ್ಕಸತಂಗಡಿಯ ಕಾಳಗದವರೆಗೆ ವಿಜಯನಗರವನ್ನೂ, ಆನಂತರದಲ್ಲಿ ಆಂಧ್ರದ ಪೆನುಕೊಂಡ ಮತ್ತು ರಾಜಮಹೇಂದ್ರಿಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿತು. ಧಾರ್ಮಿಕ ಸಹಿಷ್ಣತೆ, ಕಲಾಪೋಷಣೆ, ಸಾಹಿತ್ಯದ ಪೋಷಣೆ ವಿಜಯನಗರ ಸಾಮ್ರಾಜ್ಯದಲ್ಲಿ ವಿಶೇಷವಾಗಿತ್ತು. ಇದರಿಂದ ಸಾಮ್ರಾಜ್ಯವು ಶಾಂತಿಯುತವೂ, ಸಂಪದ್ಭರಿತವೂ ಆಗಿತ್ತು. ಹಾಗೆಯೇ ರಾಜ್ಯದ ವಿಸ್ತರಣೆಗಾಗಿ ಯುದ್ಧಗಳನ್ನು ಸಾಮ್ರಾಜ್ಯವು ಎದುರಿಸುತ್ತಿರುವುದರಿಂದ ಆಗಾಗ ಜನಸಾಮಾನ್ಯರು ಕಷ್ಟನಷ್ಟಗಳಿಗೆ ಗುರಿಯಾಗಿದ್ದರು.

## ೨.೧. ಸಂಗಮ ವಂಶ

ವಿಜಯನಗರ ಸಾಮ್ರಾಜ್ಯವು ಪರಂಪರಾಗತವಾಗಿ ಕ್ರಿ.ಶ.೧೩೩೬ರಿಂದ ಸ್ಥಾಪನೆಯಾಯಿತು. ಇದರ ಸ್ಥಾಪನೆಯ ಶ್ರೇಯಸ್ಸು ಯಾದವವಂಶದ ಸಂಗಮ ಎಂಬ ಸಣ್ಣ ಸಾಮಂತ ಅಥವಾ ಪಾಳೆಯಗಾರನ

ಐವರು ಪುತ್ರರಿಗೆ ಸಲ್ಲುತ್ತದೆ. ಈ ವಂಶದ ಮೂಲಪುರುಷ 'ಸಂಗಮ'ನಾದ್ದರಿಂದ ಈ ವಂಶಕ್ಕೆ "ಸಂಗಮ" ವಂಶ ಎಂದು ಹೆಸರಾಯಿತು. ಈ ಸಂಗಮ ವಂಶವು ವಿಜಯನಗರವನ್ನು ಆಳ್ವಿಕೆ ನಡೆಸಿದ ಪ್ರಥಮ ರಾಜವಂಶವಾಗಿದೆ. ಸಂಗಮನ ಐದು ಮಕ್ಕಳೆಂದರೆ

೧. ಹರಿಹರ

೨. ಬುಕ್ಕ

೩. ಕಂಪಣ್ಣ

೪. ಮಾರಪ್ಪ

೫. ಮುದ್ದಪ್ಪ[೮]

ಎಂಬುವ ಐದು ಜನ ಸಹೋದರರೇ ಆಗಿದ್ದಾರೆ. ಇವರಲ್ಲಿ ಹರಿಹರನು ಹಿರಿಯನಾಗಿದ್ದರಿಂದ ಈತನು ವಿಜಯನಗರ ಸಾಮ್ರಾಜ್ಯದ ಅಧಿಪತಿಯಾದನು. ಕ್ರಿ.ಶ.೧೩೩೯-೪೦ ವರ್ಷಗಳ ಶಾಸನಗಳಲ್ಲಿ ಹರಿಹರ ಮಹಾರಾಯನನ್ನು ಮಹಾಮಂಡಲೇಶ್ವರನೆಂದು ಕರೆಯಲಾಗಿದೆ. ೧೩೪೩ರ ಶಾಸನಗಳಲ್ಲಿ ಹರಿಹರನು ಮಹಾರಾಜಾಧಿರಾಜ, ರಾಜಪರಮೇಶ್ವರ ಇತ್ಯಾದಿ ಬಿರುದುಗಳನ್ನು ಅಲಂಕರಿಸಿದ್ದರಿಂದ ಈ ಅವಧಿಯಲ್ಲಿ ಹರಿಹರ ಮಹಾರಾಯನು ವಿಜಯನಗರದ ಅಧಿಪತ್ಯವನ್ನು ವಹಿಸಿಕೊಂಡಿರಬೇಕು. ೧೩೪೬ರಲ್ಲಿ ಸಂಗಮ ಸಹೋದರರು ಶೃಂಗೇರಿಯಲ್ಲಿ ವಿಜಯೋತ್ಸವದ ನೆನಪಿಗಾಗಿ ದತ್ತಿಬಿಟ್ಟದ್ದನ್ನು ವಿವರಿಸುತ್ತದೆ.[೯] ಆದ್ದರಿಂದ ಕೆಲವು ವಿದ್ವಾಂಸರು ವಿಜಯನಗರದ ಸ್ಥಾಪನೆಯ ವರ್ಷವನ್ನು ಕ್ರಿ.ಶ.೧೩೪೬ರಲ್ಲಿ ಎಂದು ಹೇಳುತ್ತಾರೆ. ಹೀಗೆ ಸಂಗಮ ವಂಶವು ಆಳ್ವಿಕೆಯನ್ನು ಆರಂಭಿಸಿತು. ಇದು ಕ್ರಿ.ಶ.೧೪೮೬ರಲ್ಲಿ ತನ್ನ ಆಳ್ವಿಕೆಯನ್ನು ಕೊನೆಗೊಳಿಸಿತು. ನಂತರದಲ್ಲಿ ಸಾಳವ ವಂಶವು ಆಳ್ವಿಕೆಯನ್ನು ಪ್ರಾರಂಭಿಸುವುದು. ಒಟ್ಟಾರೆಯಾಗಿ ಕ್ರಿ.ಶ.೧೩೩೬ರ ಸಂಗಮ ಸಹೋದರರು ಹಂಪೆ ಪ್ರದೇಶದಲ್ಲಿ ಆಳ್ವಿಕೆಯನ್ನು ಕೈಗೊಂಡರು. ೧೩೪೬ರಲ್ಲಿ ಸ್ವತಂತ್ರ್ಯ ರಾಜ್ಯ ಸ್ಥಾಪನೆಯ ವಿಜಯೋತ್ಸವನ್ನು ಶೃಂಗೇರಿಯಲ್ಲಿ ಆಚರಿಸಿದರು ಎಂದು ನಂಬಬಹುದು.

## ಹರಿಹರ

ಹರಿಹರನು ವಿಜಯನಗರ ಸಾಮ್ರಾಜ್ಯದ ಸ್ಥಾಪಕ ದೊರೆಯಾಗಿದ್ದಾನೆ. ಈತನು ಕ್ರಿ.ಶ.೧೩೩೬ ರಿಂದ ೧೩೫೬ರವರೆಗೆ ಆಳಿದರು. ಹರಿಹರ ಮಹಾರಾಯನು ಬಲಿಷ್ಠರಾಜ್ಯದ ಅಸ್ತಿಭಾರವನ್ನು ಹಾಕಿದವನಾಗಿದ್ದಾನೆ. ಕ್ರಿ.ಶ.೧೩೩೯ವರೆಗಿನ ಹರಿಹರನ ಶಾಸನಗಳು ಈತನನ್ನು ಮಹಾಮಂಡಲೇಶ್ವರನೆಂದೇ ಕರೆಯಲಾಗಿದೆ.[೧೦] ಇನ್ನೂ ಕೆಲವು ಶಾಸನಗಳಲ್ಲಿ ಈತನನ್ನು ಪೂರ್ವಪಶ್ಚಿಮ ಸಮುದ್ರಾಧೀಶ್ವರ, ಅರಿಯ ರಾಯವಿಭಾಡ, ಭಾಷೆಗೆ ತಪ್ಪದ ರಾಯರಗಂಡ ಎಂದು ಕರೆಯಲಾಗಿದೆ.[೧೧] ಇದನ್ನು ಆಧಾರವಾಗಿಟ್ಟುಕೊಂಡ ಕೆಲವು ವಿದ್ವಾಂಸರು ಹರಿಹರನು ಸ್ವಾತಂತ್ರ್ಯ ಸಾಮ್ರಾಜ್ಯಧಿಪತಿಯಾದದ್ದು ೧೩೪೩ರಲ್ಲಿ ಎಂದು ಹೇಳುತ್ತಾರೆ.[೧೨]

ಇನ್ನೂ ಕೆಲವರು ಕ್ರಿ.ಶ.೧೩೪೬ರಲ್ಲಿ ಎಂದು ಶೃಂಗೇರಿಯ ವಿಜಯೋತ್ಸವದ ಶಾಸನವಿಟ್ಟುಕೊಂಡು ಇದು ವಿಜಯನಗರ ರಾಜ್ಯಸ್ಥಾಪನೆಯ ವರ್ಷವೆಂದು ಹೇಳಿದ್ದಾರೆ. ಪರಂಪರಾಗತವಾಗಿ ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಯಾದ ವಿಜಯನಗರವು ಕ್ರಿ.ಶ.೧೩೪೬ರ ಹೊತ್ತಿಗಾಗಲೇ ಒಂದು ಸಾಮ್ರಾಜ್ಯದ ಸ್ಥಾನಮಾನವನ್ನು ಪಡೆದುಕೊಂಡಿತ್ತು.

ಗುಡ್ಡ-ಗಾಡು ಪ್ರದೇಶವಾದ ಹಂಪೆಯಲ್ಲಿ ಹೊಸರಾಜಧಾನಿಯನ್ನು ಕಟ್ಟಿಸಿದ ಕೀರ್ತಿ ಹರಿಹರನದು ಹಂಪೆ ಅತೀ ಪ್ರಾಚೀನವಾದ ಪಂಪಾಕ್ಷೇತ್ರ ಎಂದು ಪ್ರಾಚೀನ ಗ್ರಂಥಗಳು, ಶಾಸನಗಳು ಉಲ್ಲೇಖಿಸಿವೆ. ಶ್ರೀ ವಿರೂಪಾಕ್ಷ ಈ ಅರಸರ ಆರಾದ್ಯ ದೈವ. ಶ್ರೀ ವಿರೂಪಾಕ್ಷನ ಕೃಪೆಯಿಂದಲೇ ತಾವು ಈ ರಾಜ್ಯವನ್ನು ಆಳುತ್ತಿದ್ದೇವೆ ಎಂಬುದನ್ನು ದೃಢಪಡಿಸಲು ಶಾಸನಗಳ ಕೊನೆಯಲ್ಲಿ "ಶ್ರೀವಿರೂಪಾಕ್ಷ" ಎಂಬ ಹಸ್ತಾಕ್ಷರ ಇರುತ್ತಿತ್ತು. ಶ್ರೀ ವಿರೂಪಾಕ್ಷನು ಹಂಪೆಯ ಆರಾಧ್ಯದೈವವಾಗಿರುವ ಜೊತೆಯಲ್ಲೇ ಅಧಿದೇವರೂ ಆಗಿದ್ದಾನೆ. ಆದ್ದರಿಂದಲೇ ಭಾರತದಲ್ಲಿರುವ ಅನೇಕ ಶೈವ ಕ್ಷೇತ್ರಗಳಲ್ಲಿ ಪಂಪಾ ಕ್ಷೇತ್ರವೂ ಒಂದು ಎಂದು ಪರಿಗಣಿಸಲ್ಪಟ್ಟಿದೆ.[೧೩]

ಸಂಗಮ ವಂಶಜನಾದ ಹರಿಹರನು ದಕ್ಷನಾಗಿ ರಾಜ್ಯಭಾರ ಮಾಡಿದನು. ಈತನಿಗೆ ಬೆಂಬಲವಾಗಿ ಇವನ ಉಳಿದ ನಾಲ್ಕುಜನ ಸಹೋದರರು ಸಹಾಯಕರಾಗಿ ನಿಂತರು. ಇವರು ಆರಂಭದಲ್ಲಿ ಕರ್ನಾಟಕದಲ್ಲಿ ಮತ್ತು ಆಂಧ್ರದ ಬೇರೆ ಬೇರೆ ಕಡೆಯಿಂದ ಆಳ್ವಿಕೆ ನಡೆಸುತ್ತಿದ್ದರು. ಆದರೂ ರಾಜ್ಯದ ಸಾರ್ವಭೌಮ ಅಧಿಕಾರವೆಲ್ಲ ಹರಿಹರನ ಕೈಯಲ್ಲೇ ಕೇಂದ್ರಿಕೃತವಾಗಿತ್ತು. ಬುಕ್ಕರಾಯನು ಯುವರಾಜನಾಗಿದ್ದುಕೊಂಡು ದ್ವಾರಸಮುದ್ರದಿಂದ ಅಣ್ಣನಿಗೆ ಸಹಾಯಕನಾಗಿ ಆಳುತ್ತಿದ್ದನು. ಕಂಪಣ್ಣೊಡೆಯನು ಆಂಧ್ರಪ್ರದೇಶದ ನೆಲ್ಲೂರು ಮತ್ತು ಕಡಪ ಜಿಲ್ಲೆಗಳನ್ನೊಳಗೊಂಡ ಉದಯಗಿರಿಯ ಪ್ರಾಂತ್ಯಾಧಿಕಾರಿಯಾಗಿದ್ದನು. ಮಾರಪ್ಪನು ಕೊಂಕಣವನ್ನೊಳಗೊಂಡ ಮಲೆರಾಜ್ಯವನ್ನಾಳುತ್ತಿದ್ದನು. ಇದಕ್ಕೆ "ಚಂದ್ರಗುತ್ತಿ" ಪ್ರಾಂತೀಯ ರಾಜಧಾನಿಯಾಗಿದ್ದಿತು. ಕೊನೆಯ ಸಂಗಮ ಸಹೋದರನಾದ ಮುದ್ದಪ್ಪನು ಮುಳುಬಾಗಿಲು ಪ್ರಾಂತ್ಯದ ಅಧಿಕಾರಿಯಾಗಿ, ಕಾರ್ಯ ನಿರ್ವಹಿಸುತ್ತಿದ್ದನು. ಈ ಎಲ್ಲಾ ಸಹೋದರರು ವಿಜಯನಗರ ರಾಜ್ಯಸ್ಥಾಪನೆಯ ವಿಜಯೋತ್ಸವವನ್ನು ಶೃಂಗೇರಿಯಲ್ಲಿ ಕ್ರಿ.ಶ.೧೩೪೬ರಲ್ಲಿ ಆಚರಿಸಿದರು ಎಂದು ಶೃಂಗೇರಿಯ ಶಾಸನವು ದೃಢಪಡಿಸುತ್ತದೆ.[೧೪]

ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿದ ಹರಿಹರನು ಅಂದು ಉತ್ತರದ ದಾಳಿಯಿಂದ ಜರ್ಜರಿತವಾಗಿದ್ದ ಸಾಮ್ರಾಜ್ಯದ ಅನಿಶ್ಚಿತತೆಯನ್ನು ಹೋಗಲಾಡಿಸಿ ವ್ಯವಸ್ಥಿತವಾದ ಆಡಳಿತವನ್ನು ರೂಪಿಸುವುದರತ್ತ ಗಮನಹರಿಸಿದನು. ಕಾಡುಗಳನ್ನು ಕತ್ತರಿಸಿ ಹೊಸ ಜಮೀನುಗಳನ್ನು ಸಾಗುವಳಿಗೆ ತರುವಂತೆ ರೈತರಿಗೆ ಪ್ರೋತ್ಸಾಹ ನೀಡಿದನು. ಜಮೀನುಗಳನ್ನು ಸುಲಭ ಷರತ್ತುಗಳ ಮೇಲೆ ಗುತ್ತಿಗೆ ಕೊಡಲಾಯಿತು. ಕ್ರಿ.ಶ.೧೩೪೫ರಲ್ಲಿ ಹರಿಹರ ಬುಕ್ಕರಾಯರು ತುಳುನಾಡನ್ನು ಸಂಪೂರ್ಣವಾಗಿ ತಮ್ಮ ವಶಕ್ಕೆ ತೆಗೆದುಕೊಂಡರು.

ಆಡಳಿತದ ದೃಷ್ಟಿಯಿಂದ ತುಳುವನಾಡನ್ನು ಎರಡು ಭಾಗಗಳಾಗಿ ವಿಂಗಡಿಸಲಾಯಿತು. ಒಂದಕ್ಕೆ ಬಾರಕೂರು ರಾಜ್ಯವೆಂದು ಕರೆದರೆ, ಇನ್ನೊಂದಕ್ಕೆ ಮಂಗಳೂರು ರಾಜ್ಯವೆಂದು ಕರೆಯಲಾಯಿತು.[೧೫]

## ಒಂದನೆಯ ಬುಕ್ಕರಾಯ

ವಿಜಯನಗರ ಸಾಮ್ರಾಜ್ಯದ ಸಂಗಮವಂಶದ ಎರಡನೆಯ ದೊರೆ ಬುಕ್ಕರಾಯನು ಅಧಿಕಾರಕ್ಕೆ ಬರುವ ವೇಳೆಗಾಗಲೇ ಆಡಳಿತಾತ್ಮಕ ವಿಷಯದಲ್ಲಿ ಸಾಕಷ್ಟು ಪಳಗಿದ್ದನು. ಹರಿಹರನು ರಾಜ್ಯಾಡಳಿತದ ಅವಧಿಯಲ್ಲಾಗಲೇ ಯುವರಾಜನಾಗಿದ್ದುಕೊಂಡು ಆಡಳಿತದ ರೀತಿ ನೀತಿಗಳನ್ನು ಅರಿತಿದ್ದನು. ಈತನು ಕ್ರಿ.ಶ.೧೩೫೬ರಲ್ಲಿ ಸಿಂಹಾಸನಾರೂಢನಾದನು.

ಮದ್ದೂರಿನ ಶಾಸನದಲ್ಲಿ ಬುಕ್ಕರಾಯರನ್ನು ಬುಕ್ಕಣ್ಣ ಒಡೆಯರ್ ಎಂದು ಕರೆಯಲಾಗಿದೆ.[೧೬] ಚಾಮರಾಜನಗರದ ಶಾಸನವು ಬುಕ್ಕನನ್ನು ಪೂರ್ವ-ಪಶ್ಚಿಮ ಸಮುದ್ರಾಧೀಶ್ವರನೆಂದು ಕರೆಯಲಾಗಿದೆ.[೧೭] ಬುಕ್ಕರಾಯನು ಪಟ್ಟಕ್ಕೆ ಬಂದಾಗ ಮೂರು ಮುಖ್ಯ ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ಮೊದಲನೆಯದಾಗಿ ಹೊಸದಾಗಿ ಅಸ್ಥಿತ್ವಕ್ಕೆ ಬಂದ ಈ ರಾಜ್ಯವನ್ನು ಉತ್ತರದ ಪ್ರಬಲವಾದ ಶಕ್ತಿಗಳಿಂದ ರಕ್ಷಿಸಬೇಕಾಗಿತ್ತು. ಎರಡನೆಯದಾಗಿ ಮಧುರೆಯ ಸುಲ್ತಾನನ ಹಿಂಸೆಯನ್ನು ಎದುರಿಸಬೇಕಾಗಿತ್ತು ಮತ್ತು ಕೊನೆಯದಾಗಿ ಪ್ರಭುತ್ವವನ್ನು ವಿರೋಧಿಸುವ ಶಂಬುವರಾಯನಂತಹ ಸಾಮಂತ ಅರಸರ ಪುಂಡಾಟವನ್ನು ಬುಕ್ಕರಾಯನು ಎದುರಿಸಬೇಕಾಗಿತ್ತು.[೧೮]

ಶಂಬುವರಾಯ ಮನೆತನದ ನಾಯಕರು ಆಳುತ್ತಿದ್ದುದು ತಮಿಳುನಾಡಿನ ಚಂಗಲ್ ಪೇಟೆ. ಇದು ಉತ್ತರ ಮತ್ತು ದಕ್ಷಿಣ ಆರ್ಕಾಟ್ ಜಿಲ್ಲೆಗಳನ್ನೊಳಗೊಂಡ ಒಂದು ಭಾಗ. ಇದಕ್ಕೆ 'ಗಂಭೀರ' ರಾಜ್ಯವೆಂದು ಹೆಸರು. ಗಂಭೀರನ್ ಮಲೈ ಇದರ ರಾಜಧಾನಿ. ಇಲ್ಲಿ ರಾಜಗಂಭೀರನಾರಾಯಣ ಎಂಬುವ ರಾಜನು ಆಳ್ವಿಕೆ ನಡೆಸುತ್ತಿದ್ದನು. ಈ ರಾಜನು ವಿಜಯನಗರದ ರಾಜರಿಗೆ ಮೇಲಿಂದ ಮೇಲೆ ತೊಂದರೆ ಕೊಡುತ್ತಿದ್ದನು. ಈತನ ಉಪದ್ರವವನ್ನು ಕೊನೆಗಾಣಿಸಲು ಬುಕ್ಕನು ತನ್ನ ಮಗ ಕಂಪಣ್ಣನನ್ನು ಕ್ರಿ.ಶ.೧೩೬೦ರಲ್ಲಿ ಯುದ್ಧಕ್ಕೆ ಕಳುಹಿಸಿದನು. ಕುಮಾರ ಕಂಪಣ್ಣನು ಗಂಭೀ ರಾಜ್ಯದ ಗಂಭೀರನಾರಾಯಣನ ಮಗನಾದ ಶಂಬುವರಾಯನನ್ನು ಯುದ್ಧರಂಗದಲ್ಲಿ ಸೋಲಿಸಿ ಆತನನ್ನು ಸೆರೆಹಿಡಿದನು. ಶಂಬುವರಾಯನು ವಿಜಯನಗರದ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಶಂಬುವರಾಯನು ವಿಜಯ ನಗರದ ರಾಜರಿಗೆ ಕಪ್ಪವನ್ನು ನೀಡಲು ಒಪ್ಪಿದನು.

ಪಾಂಡ್ಯರ ಪತನಾನಂತರ ಮಧುರೆಯಲ್ಲಿ ಸ್ಥಾಪಿತವಾದ ಸುಲ್ತಾನರ ರಾಜ್ಯವು ಆಗ ದಕ್ಷಿಣದಲ್ಲಿ ಪ್ರಬಲವಾಗಿತ್ತು. ಹೊಯ್ಸಳ ಮೂರನೆಯ ಬಲ್ಲಾಳನು ಕ್ರಿ.ಶ.೧೩೪೧ರಲ್ಲಿ ಈ ಸುಲ್ತಾನನ ರಾಜ್ಯದ ವಿರುದ್ಧ ಹೋರಾಡುತ್ತಾ ಅಸುನೀಗಿದರು. ಕ್ರಿ.ಶ.೧೩೩೪ರ ಬಳಿಕ ಸುಲ್ತಾನ ಜಲಾಲುದ್ದೀನ್ ಹಸನ್

ಷಹ ಎಂಬಾತನು ದೇವಗಿರಿಯಲ್ಲಿ ಸ್ವತಂತ್ರವಾಗಿ ರಾಜ್ಯವಾಳುತ್ತಿದ್ದನು. ಈ ಸುಲ್ತಾನನು ಅಲ್ಲಿನ ದೇವಾಲಯಗಳನ್ನು ಧ್ವಂಸಗೊಳಿಸಿ ಸೂರೆ ಹೊಡೆದು ಪ್ರಜೆಗಳಿಗೆ ಎಲ್ಲಾ ತರದ ಕಿರುಕುಳಗಳನ್ನು ನೀಡುತ್ತಿದ್ದನು. ಕ್ರಿ.ಶ.೧೩೭೪ರಲ್ಲಿ ಕುಮಾರ ಕಂಪಣನು ಈ ಸುಲ್ತಾನನ ವಿರುದ್ಧ ದಾಳಿಯನ್ನು ಕೈಗೊಂಡನು. ಕಂಪಣ್ಣನು ಜಿಂಜಿಕೋಟೆಯನ್ನು ವಶಪಡಿಸಿಕೊಳ್ಳಲು ಸಮಿಯವರಂ ಎಂಬಲ್ಲಿನ ಕದನದಲ್ಲಿ ಸುಲ್ತಾನನ ಸೈನ್ಯವನ್ನು ಸದೆ ಬಡಿದನು. ತಮಿಳುನಾಡಿನ ಕಣ್ಣಾನೂರಕೊಪ್ಪಂ ಕೋಟೆ ಕುಮಾರ ಕಂಪಣ್ಣನ ತಹಬದಿಗೆ ಬಂದಿತು. ಶ್ರೀರಂಗಂನ ದೇವಾಲಯವು ಸುಲ್ತಾನನ ಆಳ್ವಿಕೆಯಲ್ಲಿ ಹಾಳುಬಿದ್ದಿತ್ತು. ಆಗ ಶ್ರೀರಂಗಂನ ಶ್ರೀರಂಗನಾಥ ಮೂರ್ತಿಯನ್ನು ಸ್ಥಳೀಯರು ತಿರುಪತಿಯಲ್ಲಿ ಅಜ್ಞಾತಸ್ಥಳದಲ್ಲಿ ಇಟ್ಟಿದ್ದರು.[೧೯] ಕ್ರಿ.ಶ.೧೩೭೧ರಲ್ಲಿ ಸುಲ್ತಾನನನ್ನು ಸೋಲಿಸಿದ ಕಂಪಣನು ತಿರುಪತಿಯಲ್ಲಿದ್ದ ಶ್ರೀರಂಗನಾಥ ಮೂರ್ತಿಯನ್ನು ಮರಳಿತಂದು ಶ್ರೀರಂಗಂನಲ್ಲಿ ಪ್ರತಿಷ್ಠಾಪಿಸಿದ್ದನು.[೨೦] ಹಾಗೆಯೇ "ಕಣ್ಣಾನೂರ ಕೊಪ್ಪಂ"ದಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ಮರುಸ್ಥಾಪಿಸಿದನು. ಕುಮಾರು ಕಂಪಣನು ಮುಂದೆ ಮಧುರೆಯನ್ನು ಮುತ್ತಿದನು ಈತನ ಸೈನ್ಯವು ಮಧುರೆಯನ್ನು ವಶಪಡಿಸಿಕೊಂಡಿತು. ಆಗ ಮಧುರೆಯ ಮೀನಾಕ್ಷಿ ದೇವಾಲಯವು ಪಾಳುಬಿದ್ದಿತ್ತು. ಈ ದೇವಾಲಯದ ಬಾಗಿಲನ್ನು ತೆರೆಸಿ ಆ ದೇವಸ್ಥಾನದ ಪೂಜಾದಿ-ಉತ್ಸವಗಳು ಜರುಗುವಂತೆ ಮಾಡಿ ಕಂಪಣನು ಮುಂದೆ ಸಾಗಿದನು.

ಕಂಪಣನ ದಂಡೆಯಾತ್ರೆಯ ಸಮಯದಲ್ಲಿ ತಮಿಳುನಾಡಿನ ಅನೇಕ ಬೃಹತ್ ದೇವಾಲಯಗಳು ಅರಾಜಕತೆಯ ಮೂಲಕ ಮುಚ್ಚಿಬಿಟ್ಟಿದ್ದವು. ಮಧುರೆ ಶ್ರೀರಂಗದ ಸುತ್ತಮುತ್ತಣ ಪ್ರದೇಶ ಉತ್ತರದ ಸುಲ್ತಾನರ ದಾಳಿಗೆ ತುತ್ತಾಗಿದ್ದವು. ಆಗ ಸಂಗಮ ವಂಶಸ್ಥರು ಒಂದೊಂದೇ ಊರುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಪ್ರತಿಯೊಂದು ಊರುಗಳಲ್ಲಿನ ದೇವಸ್ಥಾನಗಳನ್ನು ಸುವ್ಯವಸ್ಥಿತವಾಗಿ ನೆಲೆಸುವಂತೆ ಮಾರ್ಪಾಡು ಮಾಡಿದ್ದನ್ನು ನಾವು ಕಂಪಣನ ದಂಡಯಾತ್ರೆಯಲ್ಲಿ ಕಾಣಬಹುದು. ಅಲ್ಲಿನ ಅನೇಕ ಶಾಸನಗಳು ಇದನ್ನು ದೃಢಪಡಿಸುತ್ತವೆ.[೨೧] ತಮಿಳುನಾಡಿನ ಈ ದಂಡಯಾತ್ರೆಯ ವಿಜಯವನ್ನು ಕುಮಾರ ಕಂಪಣನ ಪತ್ನಿ ಗಂಗಾದೇವಿಯು "ಮಧುರಾವಿಜಯಂ" ಅಥವಾ "ವೀರ ಕಂಪಣರಾಯ ಚರಿತಂ" ಎಂಬ ಕಾವ್ಯದಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾಳೆ. ಇದೊಂದು ಐತಿಹಾಸಿಕ ಕಾವ್ಯ. ಈ ಮೇಲಿನ ಅಂಶಗಳು ವಿಜಯನಗರದ ಅರಸರು ಮತ್ತು ಹಿಂದೂ ಧರ್ಮವನ್ನು ಎತ್ತಿ ಹಿಡಿದುದ್ದನ್ನು ತಿಳಿಸಿಕೊಡುತ್ತವೆ. ಶ್ರೀರಂಗಂನಲ್ಲಿ ಶ್ರೀರಂಗನಾಥ ಮೂರ್ತಿಯ ಪ್ರತಿಷ್ಠಾಪನೆ ಮಾಡಿದ್ದು ಕಣ್ಣಾನೂರ ಕೊಪ್ಪಂದಲ್ಲಿ ಹೊಯ್ಸಳೇಶ್ವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ್ದು, ಈ ರಾಜರುಗಳು ದೇವಾಲಯ ಸಂಸ್ಕೃತಿಯನ್ನು ಪೋಷಿಸಿದ್ದನ್ನು ಸಾಬೀತು ಪಡಿಸುತ್ತದೆ.

ತುಂಗಭದ್ರ-ಕೃಷ್ಣಾ ನದಿಗಳ ಮುಖಜ ಭೂಮಿ ದೋಅಬ್ ಪ್ರದೇಶದ ಬಗೆಗೆ ಹರಿಹರನಿಗೂ ಸುಲ್ತಾನನಿಗೂ ಯುದ್ಧವಾಯಿತು. ಈ ಯುದ್ಧದಲ್ಲಿ ಹರಿಹರನು ಮೇಲುಗೈ ಪಡೆದನು. ಕೃಷ್ಣಾನದಿಯನ್ನು

ಉಭಯ ರಾಜ್ಯಗಳ ಗಡಿ ಎಂದು ಸುಲ್ತಾನ ಮಹಮದ್ ಷ ಒಪ್ಪಿಕೊಳ್ಳಬೇಕಾಯಿತು. ಕ್ರಿ.ಶ.೧೩೭೫ರಲ್ಲಿ ಸುಲ್ತಾನನು ವಿಜಯನಗರದ ವಿರುದ್ಧ ಯುದ್ಧಸಾರಿ ಆದವಾನಿ ಕೋಟೆಯನ್ನು ಗೆಲ್ಲಲು ಯತ್ನಿಸಿ ವಿಫಲನಾದನು. ಈ ಯುದ್ಧದ ನಂತರ ಎರಡೂ ರಾಜ್ಯಗಳಲ್ಲಿ ಇಪ್ಪತ್ತುವರ್ಷಗಳವರೆಗೂ ಶಾಂತಿ ನೆಲೆಸಿತು.[೨೨] ಸಿಂಹಳ ಮತ್ತು ಮಲಬಾರ್ ಗಳ ರಾಜರು ವಿಜಯನಗರದ ರಾಯರುಗಳಿಗೆ ಕಪ್ಪವನ್ನು ನೀಡುತ್ತಿದ್ದರು.

ಬುಕ್ಕರಾಯನ ರಾಜಕೀಯ ಕಾರ್ಯಗಳಿಗಿಂತ ಆತನ ಸಾಂಸ್ಕೃತಿಕ ಕಾರ್ಯಗಳು ಹೆಚ್ಚು ಅರ್ಥಪೂರ್ಣ ಬುಕ್ಕರಾಯನು ಇತಿಹಾಸದಲ್ಲಿ ಅಮರನಾಗಿರುವುದು ಧರ್ಮಜ್ಞಾನಕ್ಕಾಗಿ, ಪರಮತ ಸಹಿಷ್ಣುತೆಗಾಗಿ, ಸರ್ವಮತಗಳೂ ಸಾರುವತತ್ವವು ಒಂದೇ ಎಂದು ತಿಳಿದು ಈತನು ರಾಜ್ಯವಾಳಿದನು. ಈ ಕಾಲದ ದೇವಾಲಯಗಳಲ್ಲಿ ವಿವಾದಗಳು ಉಂಟಾದರೆ ಇದನ್ನು ತೀರ್ಮಾನಿಸಲು ಬ್ರಾಹ್ಮಣ ಅಧಿಕಾರಿಗಳನ್ನು ನೇಮಿಸಿದ್ದನು.[೨೩] ವಿಠ್ಠಪ್ಪ ಮತ್ತು ಗೋಪಣ್ಣ ಎಂಬ ಅಧಿಕಾರಿಗಳು ದೇವಾಲಯಗಳ ಪುನರ್ ಪ್ರತಿಷ್ಠಾಪನೆಯ ಹೊಣೆಯನ್ನು ಹೊತ್ತಿದ್ದರು.[೨೪] ಕ್ರಿ.ಶ.೧೩೬೮ರಲ್ಲಿ ಕಲ್ಯಾಣ ಮತ್ತು ಶ್ರಾವಣ ಬೆಳಗೊಳದ ಶಾಸನಗಳು ಬುಕ್ಕರಾಯನ ಧಾರ್ಮಿಕ ಸಹಿಷ್ಣತೆಯನ್ನು ಸಾರುತ್ತವೆ. ಒಮ್ಮೆ ಶ್ರೀವೈಷ್ಣವರಿಗೂ ಹಾಗೂ ಜೈನರಿಗೂ ನಡೆದ ಜಗಳದಲ್ಲಿ ಅರಸನು ಇಬ್ಬರನ್ನೂ ಆಸ್ಥಾನಕ್ಕೆ ಕರೆಯಿಸಿ, ಜೈನ, ವೈಷ್ಣವ ಧರ್ಮಗಳಿಗೆ ಮೂಲಭೂತ ವ್ಯತ್ಯಾಸವಿಲ್ಲವೆಂದು ಹೇಳಿ ಎರಡೂ ಮತೀಯರು ಒಬ್ಬರನ್ನೊಬ್ಬರು ಪರಸ್ಪರ ಗೌರವಿಸಬೇಕೆಂದು ಮನದಟ್ಟು ಮಾಡಿಕೊಟ್ಟು, ರಾಜ್ಯದಲ್ಲಿನ ಜೈನಧರ್ಮೀಯರ ಪೂಜಾ ಮಂದಿರಗಳನ್ನು ರಕ್ಷಿಸುವ ಹೊಣೆಯನ್ನು ಶ್ರೀ ವೈಷ್ಣವರಿಗೆ ವಹಿಸಿಕೊಟ್ಟು ಐತಿಹಾಸಿಕ ಮಹತ್ವದ ತೀರ್ಪನ್ನು ನೀಡಿದ್ದನ್ನು ಶಾಸನಗಳು ತಿಳಿಸುತ್ತವೆ.[೨೫] ಈ ಎಲ್ಲಾ ಕಾರ್ಯಗಳನ್ನು ಗಮನಿಸಿದಾಗ ಬುಕ್ಕರಾಯನು ಸಂಗಮವಂಶದ ಅರಸರಲ್ಲಿ ಪ್ರಖ್ಯಾತ ದೊರೆ. ಹಾಗಾಗಿ ಬುಕ್ಕರಾಯನನ್ನು ವಿಜಯನಗರ ಸಾಮ್ರಾಜ್ಯದ ನಿಜವಾದ ಶಿಲ್ಪಿ ಎಂದು ಕರೆಯಲಾಗಿದೆ.[೨೬]

ವೇದಗಳನ್ನು ಜನಪ್ರಿಯಗೊಳಿಸುವ ಕಾರ್ಯಕ್ಕೆ ಈತನ ಕಾಲದಲ್ಲಿ ಆದ್ಯತೆ ಕೊಡಲಾಯಿತು. ಘನವಿದ್ವಾಂಸರಾದ ಸಾಯಣಾಚಾರ್ಯ ಮತ್ತು ಮಾಧವಾಚಾರ್ಯರ ನೇತೃತ್ವದಲ್ಲಿ ವೇದಭಾಷ್ಯಗಳನ್ನು ಸಂಕಲ್ಪಿಸುವ ಕಾರ್ಯ ಜರುಗಿತು. ಕ್ರಿ.ಶ.೧೩೬೦ರಲ್ಲಿ "ವೇದಾರ್ಥ ಪ್ರಕಾಶ" ಎಂಬ ಗ್ರಂಥ ರಚನೆ ಪ್ರಾರಂಭವಾಯಿತು.[೨೭] ಈ ಕಾರ್ಯವನ್ನು ಕೈಗೊಂಡಿದ್ದರಿಂದ ಬುಕ್ಕರಾಯನಿಗೆ "ವೈದಿಕ ಮಾರ್ಗ ಪ್ರವರ್ತಕ" ಎಂಬ ಹೆಸರನ್ನು ತಂದುಕೊಟ್ಟಿತು.[೨೮]

## ಎರಡನೆಯ ಹರಿಹರ

ಎರಡನೆ ಬುಕ್ಕರಾಯನ ನಂತರ ಎರಡನೆಯ ಹರಿಹರನು ವಿಜಯನಗರ ಸಾಮ್ರಾಜ್ಯಕ್ಕೆ ಉತ್ತರಾಧಿಕಾರಿಯಾದನು. ಎರಡನೆಯ ಹರಿಹರನು ಕ್ರಿ.ಶ.೧೩೭೭ರಿಂದ ಕ್ರಿ.ಶ.೧೪೦೪ವರೆಗೆ

ವಿಜಯನಗರದಲ್ಲಿ ಆಳ್ವಿಕೆ ನಡೆಸಿದನು. ಈತನು ಒಂದನೆಯ ಬುಕ್ಕರಾಯನ ಪುತ್ರನಾಗಿದ್ದರಿಂದ ರಾಜ್ಯದ ಅಧಿಕಾರವನ್ನು ಸುಲಭವಾಗಿ ವಹಿಸಿಕೊಂಡನು.[೨೯] ಈತನು ಪಟ್ಟಕ್ಕೆ ಬಂದಾಗ ಅನೇಕ ಆಂತರಿಕ ದಂಗೆಗಳನ್ನು ಅಡಗಿಸಬೇಕಾಯಿತು. ಈ ದಂಗೆಗಳನ್ನು ಪ್ರಧಾನ ಪ್ರಾಂತಗಳ ಮೇಲಾಧಿಕಾರಿಗಳಾಗಿದ್ದ ಈತನ ಮಕ್ಕಳಾದ ಬುಕ್ಕರಾಯ, ವಿರೂಪಾಕ್ಷ ಮತ್ತು ದೇವರಾಯರು ಸಮರ್ಥ ರೀತಿಯಲ್ಲಿ ಹತ್ತಿಕ್ಕಿದರು.[೩೦] ತನ್ನ ದಾಯಾದಿಗಳ ಸ್ಥಾನದಲ್ಲಿ ತನ್ನ ಮಕ್ಕಳನ್ನು ಪ್ರಾಂತೀಯ ರಾಜ್ಯಪಾಲರನ್ನಾಗಿ ನೇಮಿಸಿದನು. ಎರಡನೆಯ ವಿರೂಪಾಕ್ಷನನ್ನು ತಮಿಳು ಪ್ರಾಂತ್ಯದ ಪ್ರಾಂತ್ಯಾಧಿಕಾರಿಯಾಗಿ, ಒಂದನೆಯ ದೇವರಾಯನನ್ನು ಉದಯಗಿರಿಯ ಪ್ರಾಂತ್ಯಾಧಿಕಾರಿಯಾಗಿ, ಎರಡನೆಯ ಬುಕ್ಕರಾಯನನ್ನು ಮುಳುಬಾಗಿಲು ಪ್ರಾಂತ್ಯದ ಅಧಿಕಾರಿಯಾಗಿ ನೇಮಿಸಲಾಯಿತು. ದಂಗೆ ಎದ್ದ ಬಾರಕೂರು ಬೈರರಸರನ್ನು ಬುಕ್ಕರಾಯನು ಅಡಗಿಸಿದ.[೩೧] ಚೋಳ, ಪಾಂಡ್ಯ ಮತ್ತು ತುಂಡೀರನಾಯಕರನ್ನು ಎರಡನೆಯ ವಿರೂಪಾಕ್ಷನು ಸದೆಬಡಿದನು ಮುಂದುವರಿದ ಆತನು ಸಿಲೋನಿನ ದೊರೆ ಭುವನೈಕ್ಯಬಾಹುವಿನಿಂದ ಕಪ್ಪವನ್ನು ವಸೂಲು ಮಾಡಿದನು.[೩೨] ಬಹುಮನಿ ಸುಲ್ತಾನರೊಂದಿಗೆ ಸಾಂಪ್ರದಾಯಿಕ ವೈರತ್ವ ಮುಂದುವರೆದಿತ್ತು.

ಹರಿಹರನ ಆಳ್ವಿಕೆಯಲ್ಲಿ ಅನೇಕ ಜನತೆಯ ಕಲ್ಯಾಣಕಾರ್ಯ ರಚನಾತ್ಮಕ ಕಾರ್ಯಗಳು ಜರುಗಿದ್ದವು. ಕೃಷಿಗೆ ಹೆಚ್ಚು ಒಲವು ತೋರಿದ್ದನು. ಕೃಷಿಗಾಗಿ ನೀರಾವರಿ ಸೌಕರ್ಯಗಳನ್ನು ಹೆಚ್ಚಿಸಿದನು. ಹೊಳೆಗಳಿಗೆ ಕಾಲುವೆಗಳನ್ನು ನಿರ್ಮಿಸಿದ, ಕೆರೆಗಳನ್ನು ಕಟ್ಟಿಸಿದನು. "ಸಿಂಗಮಭಟ್ಟ" ಎಂಬ ಜಲಯಂತ್ರವಿಶಾರದನು ಹೊನ್ನ ಹೊಳೆಯಿಂದ ಪೆನಗೊಂಡೆಯವರೆಗೆ ಕಾಲುವೆಯಿಂದ ನೀರನ್ನು ಒದಗಿಸಿದನು.[೩೩]

ಎರಡನೆಯ ಹರಿಹರ ರಾಯನು ಆಂಧ್ರದ ರೆಡ್ಡಿಗಳ ರಾಜ್ಯದ ಮೇಲೆ ಆಕ್ರಮಣ ಮಾಡಿದ. ವೇಲಮ ಅನಪೋತ ನಾಯಿಡುನಿಂದ ಶ್ರೀಶೈಲವನ್ನು ವಶಪಡಿಸಿಕೊಂಡನು. ಶ್ರೀಶೈಲ ಪರ್ವತಕ್ಕೆ ಮೆಟ್ಟಿಲುಗಳನ್ನು ಕಟ್ಟಿಸಿದ ಕೀರ್ತಿ ಎರಡನೆಯ ಹರಿಹರನಿಗೆ ಸಲ್ಲುತ್ತದೆ.[೩೪] ಒಂದನೇ ಬುಕ್ಕರಾಯರ ಕಾಲದಲ್ಲಿ ಆರಂಭವಾದ ವೇದಗಳ ಮೇಲಿನ ಭಾಷ್ಯಗಳ ರಚನೆಯ ಯೋಜನೆಯು ಕ್ರಿ.ಶ.೧೩೮೦ರಲ್ಲಿ ಪೂರ್ತಿಗೊಂಡಿತು. ಈ ಸಾಧನೆಯು ಹರಿಹರ ರಾಯನಿಗೆ "ವೇದ ಮಾರ್ಗ ಸ್ಥಾಪನಾ ಚಾರ್ಯ" ಎಂಬ ಬಿರುದನ್ನು ತಂದುಕೊಟ್ಟಿತು.[೩೫] ಈತನ ದಂಡನಾಯಕನಾದ ಇರುಗಪ್ಪ ದಂಡನಾಯಕನು ಕುಂಥು ಜಿನಾಲಯವನ್ನು ನಿರ್ಮಿಸಿದನು. ಇದು ಕದಂಬ ನಾಗರಶೈಲಿಯಲ್ಲಿದೆ.[೩೬] ಈತನ ಕಾಲದಲ್ಲಿ ಬೇಟೆಗಾರರ ಹೆಬ್ಬಾಗಿಲಿನ ಹತ್ತಿರ ಮೈಲಾರ ದೇವರನ್ನು ಪ್ರತಿಷ್ಠಾಪಿಸಲಾಯಿತು ಎಂದು ಹಂಪೆಯ ಶಾಸನ ಉಲ್ಲೇಖಿಸುತ್ತದೆ.[೩೭] ಈತನ ಕಾಲದಲ್ಲಿ ವೀರಶೈವ, ಶೈವ, ಜೈನ ಸಾಹಿತ್ಯವು ಅಭಿವೃದ್ಧಿ ಹೊಂದಿತು. ಹರಿಹರರಾಯನ ಕನ್ನಡ ಪ್ರೇಮದಿಂದಾಗಿ "ಕರ್ನಾಟಕ - ವಿದ್ಯಾವಿಲಾಸ" ಎಂಬ ಪ್ರಶಸ್ತಿ ಈತನಿಗೆ ಒಪ್ಪುವಂತಾಗಿತ್ತು.[೩೮]

## ಒಂದನೆಯ ದೇವರಾಯ

ಎರಡನೆಯ ಹರಿಹರ ಮರಣ ಹೊಂದಿದ ನಂತರದಲ್ಲಿ ಸಿಂಹಾಸನಕ್ಕೆ ದಾಯಾದಿಗಳಲ್ಲಿ ಕಲಹಗಳೇರ್ಪಟ್ಟವು. ಕೊನೆಗೆ ಕ್ರಿ.ಶ.೧೪೦೬ರಲ್ಲಿ ಒಂದನೆಯ ದೇವರಾಯನು ಪಟ್ಟಕ್ಕೆ ಬಂದನು.[೩೯] ಈತನಿಗೆ ಮಹಾರಾಜಾಧಿರಾಜ, ಪರಮೇಶ್ವರ, ವೀರಪ್ರತಾಪ ಎಂಬ ಬಿರುದುಗಳಿದ್ದವು. ಈತನು ರಾಜ್ಯವನ್ನು ಆಳುತ್ತಿದ್ದ ಸಮಯದಲ್ಲಿ ಇಟಲಿ ದೇಶದಿಂದ ''ನಿಕೋಲೋ ಕೊಂಟಿ'' ಎಂಬ ಪ್ರವಾಸಿ ವಿಜಯನಗರಕ್ಕೆ ಭೇಟಿ ನೀಡಿದ್ದನು. ಒಂದನೆಯ ದೇವರಾಯನು ತುಂಗಭದ್ರಾನದಿಗೆ ವಿಸ್ತಾರವಾದ ಅಣೆಕಟ್ಟನ್ನು ಸ್ಥಾಪಿಸಿ ಹದಿನೈದು ಮೈಲು ಉದ್ದನೆಯ ಕಾಲುವೆಯನ್ನು ನಿರ್ಮಿಸಿ ರಾಜಧಾನಿಗೆ ನಿರಂತರ ನೀರಿನ ವ್ಯವಸ್ಥೆಯನ್ನು ಕಲ್ಪಿಸಿದನು. ಬಾರಕೂರಿನ ಹತ್ತುಕೇರಿಯ ''ನಖಹಂಜ ಮಾನ್ '' ವರ್ತಕ ಸಂಘದ ವ್ಯಾಜ್ಯವನ್ನು ಗೋವೆಯ ರಾಜ್ಯಪಾಲನಾಗಿದ್ದ ಬಾಚಣ್ಣ ಒಡೆಯನು ಬಗೆಹರಿಸಿದನು.[೪೦] ಇದರಿಂದ ಸಂತೃಪ್ತನಾದ ರಾಜನು ಬಾಚಣ್ಣ ಒಡೆಯನ್ನು ಬಾರಕೂರು ಮತ್ತು ಮಂಗಳೂರು ಎರಡೂ ರಾಜ್ಯಗಳಿಗೂ ರಾಜ್ಯಪಾಲನನ್ನಾಗಿ ನೇಮಿಸಲಾಯಿತು.[೪೧] ಈತನ ಕಾಲದಲ್ಲಿ ಗುಲಗಂಜಿಯಲ್ಲಿ ವಿಶ್ವೇಶ್ವರ ಮತ್ತು ಲಕ್ಷ್ಮೀನಾರಾಯಣ ಎಂಬ ಎರಡು ದೇವಾಲಯಗಳು ರಚನೆಗೊಂಡವು.[೪೨]

## ಎರಡನೆಯ ದೇವರಾಯ

ವಿಜಯನಗರವು ಕಂಡ ಪ್ರಮುಖ ಚಕ್ರವರ್ತಿಗಳಲ್ಲಿ ಎರಡನೆಯ ದೇವರಾಯನು ಒಬ್ಬನಾಗಿದ್ದಾನೆ. ಈತನು ಸಂಗಮ ವಂಶದ ದೊರೆಗಳಲೆಲ್ಲಾ ಅತ್ಯಂತ ಶ್ರೇಷ್ಠ ದೊರೆಯಾಗಿದ್ದಾನೆ. ಈತನಿಗೆ ಪ್ರೌಢದೇವರಾಯ ಎಂಬ ಹೆಸರು ಇದೆ.[೪೩] ಪ್ರೌಢದೇವರಾಯ,[೪೪] ಪ್ರೌಢಪ್ರತಾಪ ದೇವರಾಯ,[೪೫] ಪ್ರೌವುಢದೇವರಾಯ,[೪೬] ಪ್ರೌಢರಾಯ ಎಂಬ ಹೆಸರುಗಳಿದ್ದವೆಂದು ಶಾಸನಗಳು ತಿಳಿಸುತ್ತವೆ. ಈತನ ಕಾಲದಲ್ಲಿ ಸೈನಿಕ, ರಾಜಕೀಯ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಂಸ್ಮರಣೀಯ ಘಟನೆಗಳು ಜರುಗಿದವು. ಎರಡನೆಯ ದೇವರಾಯನ ಆಳ್ವಿಕೆ ವಿಜಯನಗರದ ಚರಿತ್ರೆಯಲ್ಲೇ ವೈಭವೋಪೇತ ಕಾಲಗಳಲ್ಲಿ ಒಂದಾಗಿದೆ. ದೇವರಾಯನು ತಂದೆಯ ಕಾಲದಲ್ಲೇ ಆಡಳಿತದ ಕಾರ್ಯವನ್ನು ನಿರ್ವಹಿಸಿದ್ದರಿಂದ ಇವರು ಮೊದಲೇ ಆಡಳಿತದ ಸೂತ್ರಗಳನ್ನು ತಿಳಿದುಕೊಂಡಿದ್ದರು. ಯುದ್ಧದಲ್ಲಿ ಬಹುಮನಿಯರನ್ನು ನಿಯಂತ್ರಿಸಿದ್ದನು. ಕ್ರಿ.ಶ.೧೪೨೭ರಲ್ಲಿ ಗಜಪತಿಗಳನ್ನು ಯುದ್ಧದಲ್ಲಿ ಸೋಲಿಸಿದನು. ಕೇರಳದ ದಕ್ಷಿಣದ ಭಾಗದ ಕೊಯಿಲೋನಾ ಮುಂತಾದ ಭಾಗಗಳು ದೇವರಾಯನ ಆಡಳಿತದಲ್ಲಿದ್ದವು. ದೇವರಾಯನು ತನ್ನ ಸೇನಾಧಿಪತಿ ಲಕ್ಕಣ್ಣ ದಂಡನಾಯಕನ ನೇತೃತ್ವದಲ್ಲಿ ಲಂಕಾದ್ವೀಪದ ಮೇಲೆ ನೌಕಾಬಲದಿಂದ ದಂಡಯಾತ್ರೆ ಕೈಗೊಂಡನು. ವಿಜಯನಗರ ಸೇನೆ ವಿಜಯಹೊಂದಿ ಲಂಕಾದ್ವೀಪದ ರಾಜರಿಂದ 'ಕಪ್ಪ'ವನ್ನು ಸಂಗ್ರಹಿಸಿತು. ಈ ವಿಜಯದ ನೆನಪಿಗಾಗಿ ಸೇನಾಪತಿ ಲಕ್ಕಣ್ಣ ದಂಡನಾಯಕನಿಗೆ ''ದಕ್ಷಿಣ ಸಮುದ್ರಾಧಿಪಾತಿ'' ಎಂಬ ಪ್ರಶಸ್ತಿ ಲಭ್ಯವಾಯಿತು.[೪೭]

ಕೊಯಿಲಾನ್ (ಕೇರಳ ಶ್ರೀಲಂಕಾ) ಪುಲಿಕಾಟ್, ಪೆಗು, ಮತ್ತು ಚೆನ್ನಾಸ್ಪೆರಿಮ್ (ಬರ್ಮ) ಹಾಗೂ ಅನೇಕ ಭಾರತೀಯ ರಾಜರು ಇಮ್ಮಡಿ ದೇವರಾಯಗೆ ಕಪ್ಪವನ್ನು ಸಲ್ಲಿಸುವರೆಂಬ "ನುನೀಸನ" ಹೇಳಿಕೆಯು ದೇವರಾಯನ ಸೈನಿಕ ಸಾಧನೆಗಳನ್ನು ನಿರೂಪಿಸುತ್ತವೆ.[೪೮] ಕ್ರಿ.ಶ.೧೪೪೩ರಲ್ಲಿ ಪರ್ಷಿಯಾದ ರಾಯಭಾರಿಯಾದ ಅಬ್ದುಲ್ ರಜಾಕ್‌ನು ಈತನ ಆಸ್ಥಾನಕ್ಕೆ ಭೇಟಿ ನೀಡಿದನು. ಆತನ ಹೇಳಿಕೆಯಂತೆ ವಿಜಯನಗರ ಪಟ್ಟಣದ ವೈಭವವನ್ನು ಈ ರೀತಿ ವಿವರಿಸಿದ್ದಾನೆ. "ನನ್ನ ಕಣ್ಣಿನ ಪಟಲವು ಹಿಂದೆಂದೂ ಇದಕ್ಕೆ ಸಮನಾದ ನಗರವನ್ನು ನೋಡದಂತಹದಾಗಿತ್ತು" ಎಂದು ಉದ್ಗರಿಸುತ್ತಾನೆ.

ದೇವರಾಯನ ಕಾಲದಲ್ಲಿ ಸರ್ವಧರ್ಮಗಳಿಗೂ ಸಮಾನವಾದ ಗೌರವವನ್ನು ದೊರೆ ನೀಡುತ್ತಿದ್ದನು. ಅದಕ್ಕಾಗಿಯೇ ರಾಜನು ತನ್ನ ಸೈನ್ಯದಲ್ಲಿ ಅನೇಕ ಮಹಮದೀಯರನ್ನು ನೇಮಿಸಿಕೊಂಡನು.[೪೯] ಮಹಮದೀಯ ಅಧಿಕಾರಿಗಳಿಗೆ ಮತ್ತು ಸೈನಿಕರಿಗೆ ಈ ಕಾಲದಲ್ಲಿ ಜಾಗೀರುಗಳನ್ನು ಹಾಕಿಕೊಟ್ಟನು. ಮುಸಲ್ಮಾನ ಬಂಧುಗಳು ಮುಜುರೆಯೊಪ್ಪಿಸಲು ಅನುಕೂಲವಾಗುವಂತೆ ತನ್ನ ಸಿಂಹಾಸನದ ಹತ್ತಿರ ಒಂದು ಬೆಲೆಬಾಳುವ ಪೀಠದ ಮೇಲೆ ಕುರಾನನ್ನು ಇರಿಸಿದನು.[೫೦] ಮುಸ್ಲಿಂ ಭಕ್ತರಿಗಾಗಿ ರಾಜಧಾನಿಯಲ್ಲಿ ಮಾಸ್ಕ ಪದ್ಧತಿಯ ಮಸೀದಿಯನ್ನು ಕಟ್ಟಿಸಿದನು.[೫೧] ಕಲೆ ಮತ್ತು ಸಾಹಿತ್ಯಗಳಿಗೆ ದೊರೆ ಅಪಾರ ಪ್ರೋತ್ಸಾಹ ನೀಡುತ್ತಿದ್ದನು.[೫೨] ದೇವಸ್ಥಾನ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಅಪಾರವಾದ ದಾನದತ್ತಿಗಳನ್ನು ರಾಯರು ನೀಡುತ್ತಿದ್ದರು. ದೇವರಾಯನು ಹಂಪೆಯ ವಿರೂಪಾಕ್ಷ ದೇವಾಲಯದ ಮಣಿಗೋಪುರ ಮತ್ತು ಕಲಶಗಳನ್ನು ನಿರ್ಮಿಸಿದನು. ಶ್ರೀ ವಿರೂಪಾಕ್ಷ ಮತ್ತು ಪಂಪಾಂಬಿಕಾ ದೇವಿಯರ ರಥೋತ್ಸವವು ಸಾಂಗೋಪಾಂಗವಾಗಿ ನೆರವೇರಲು ರಥಬೀದಿಯನ್ನು ವಿಶಾಲಗೊಳಿಸಿದನು.[೫೩] ರಾಜಧಾನಿಯಲ್ಲಿ ಜೈನ ಧರ್ಮೀಯರಿಗಾಗಿ ಪಾನಸುಪಾರಿ ಬಜಾರದಲ್ಲಿ ಕ್ರಿ.ಶ.೧೪೩೦ರಲ್ಲಿ ಪಾರ್ಶ್ವನಾಥ ಜಿನಾಲಯವನ್ನು ನಿರ್ಮಿಸಿದನು. ಈತನ ಕಾಲದಲ್ಲೇ ದಂಡನಾಯಕನಾದ ಲಕ್ಕಣ್ಣದಂಡೇಶನು ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲೂಕಿನಲ್ಲಿ ಪ್ರಸನ್ನ ವಿರೂಪಾಕ್ಷ ದೇವಾಲಯ ನಿರ್ಮಿಸಿದನು. ಆ ದೇವಾಲಯಕ್ಕೆ ಸುವರ್ಣಗೋಪುರ, ಮನ್ಮಥ ಕುಂಡಕೆರೆ, ಉದ್ಯಾನಗಳನ್ನು ನಿರ್ಮಿಸಿದನು.[೫೪] ಈ ಕಾಲದಲ್ಲೇ ಗುಹಾರಣ್ಯ ಕ್ಷೇತ್ರದ ವಸಂತ ಮಲ್ಲಿಕಾರ್ಜುನ ದೇವಸ್ಥಾನ ಹಾಗೂ ಅದಕ್ಕೆ ಹೊಂದಿಕೊಂಡಂತೆ ತಟಾಕಗಳನ್ನು ನಿರ್ಮಿಸಲಾಯಿತು.[೫೫]

ಇಮ್ಮಡಿ ದೇವರಾಯನು ಕ್ರಿ.ಶ.೧೪೨೯ರಲ್ಲಿ ತಿರುಪತಿ ದೇವಸ್ಥಾನದ ಖಜಾನೆಗೆ ರಾಜ್ಯಭಂಡಾರದ ವರಮಾನದಿಂದ ಹನ್ನೆರಡು ಸಾವಿರ ಹೊನ್ನುಗಳನ್ನು ದಾನ ಮಾಡಿದ್ದನು. ತಿರುಪತಿಯ ಶಾಸನವು ಈ ವಿಷಯವನ್ನು ತಿಳಿಸುತ್ತದೆ.[೫೬] ಹೀಗೆ ರಾಜನು ವೀರಶೈವ ಧರ್ಮದವನಾಗಿದ್ದರೂ, ವೈಷ್ಣವ, ಶೈವ, ಶ್ರೀವೈಷ್ಣವ ಎಂಬ ಭೇದವಿಲ್ಲದೆ ಎಲ್ಲಾ ಧರ್ಮೀಯರ ದೇವಾಲಯಗಳಿಗೆ ಉದಾರವಾಗಿ ದಾನ

ಮಾಡಿದನು. ಇದು ಈ ರಾಜನ ಸರ್ವಧರ್ಮ ಸಮನ್ವಯತೆಗೆ ಹಿಡಿದ ಕನ್ನಡಿಯಾಗಿದೆ. ಶೃಂಗೇರಿಯ ಮಠಕ್ಕೆ ರಾಜನು ಹೊನ್ನಾವರ ರಾಜ್ಯದಲ್ಲಿನ "ಮಂಜುಗಣಿ" ಗ್ರಾಮವನ್ನೂ, ಗೋವಾ ರಾಜ್ಯದಲ್ಲಿಯ ಕೆಳಗುಂಡ ಮತ್ತು "ಕೈಗೈ" ಗ್ರಾಮಗಳನ್ನು ದಾನ ಮಾಡಿದಂತೆ ಶಾಸನಗಳು ಉಲ್ಲೇಖಿಸಿವೆ.[೫೭]

ಎರಡನೆಯ ದೇವರಾಯನ ಆಳ್ವಿಕೆಯ ಅವಧಿಯಲ್ಲಿ ಬಾರಕೂರಿನ ಆಡಳಿತವನ್ನು ನೋಡಿಕೊಳ್ಳುವ ಅಣ್ಣಪ್ಪ ಒಡೆಯನು ಯಾವುದೋ ಕಾರಣದಿಂದ ಶಿವಳ್ಳಿಯ ಗ್ರಾಮದ ಮೇಲೆ ದಾಳಿಮಾಡಿದನು. ಈ ದಾಳಿಯ ಕಾರಣದಿಂದ ಉಡುಪಿಯಲ್ಲಿನ ಶ್ರೀಕೃಷ್ಣನ ಅನ್ಯಮಾನ್ಯಗಳು ತಪ್ಪಿ ಹೋದವು. ಮತ್ತು ಶ್ರೀಕೃಷ್ಣನ ಪ್ರತಿಮೆಯು ಸ್ಥಳಾಂತರಗೊಂಡು ಪೂಜೆ - ಪುನಸ್ಕಾರಗಳು ನಿಂತುಹೋದವು.[೫೮] ಈ ಘಟನೆಯಿಂದ ಅಸಂತುಷ್ಟಗೊಂಡ ಶಿವಳ್ಳಿ ಮತ್ತು ಬಾರಕೂರು ನಗರದ ಜನರು ರಾಜನಾದ ದೇವರಾಯನಿಗೆ ದೂರನ್ನು ಸಲ್ಲಿಸಿದರು. ಸಾಮ್ರಾಟನು ಅಣ್ಣಪ್ಪ ಒಡೆಯನಿಗೆ ಆಜ್ಞೆ ಮಾಡಿ ಶ್ರೀಕೃಷ್ಣ ದೇವಸ್ಥಾನದ ಪೂಜಾ ಕಾರ್ಯಗಳು ಯಥಾಸ್ಥಿತಿಗೆ ಹಿಂದಿರುಗುವಂತೆ ಮಾಡಬೇಕೆಂದು ಆದೇಶವಿತ್ತನು. ಆಗ ಬಾರಕೂರು ರಾಜ್ಯಪಾಲನಾದ ಅಣ್ಣಪ್ಪ ಒಡೆಯನು ಸಾಮ್ರಾಟನ ಆದೇಶವನ್ನು ಪರಿಪಾಲಿಸಿ ಶ್ರೀಕೃಷ್ಣನ ಪ್ರತಿಮೆಯನ್ನು ಪುನಃ ಪ್ರತಿಷ್ಠಾಪಿಸಿದನು. ಇದೇ ಸಮಯದಲ್ಲಿ ಸಿಂಗರಸ ಒಡೆಯನೆಂಬಾತನು ಶ್ರೀಕೃಷ್ಣ ದೇವಸ್ಥಾನಕ್ಕೆ ಹಲವು ದಾನಗಳನ್ನು ಮಾಡಿದನು. ಈ ಘಟನೆಯನ್ನು ೧೪೩೪ನೇ ಇಸ್ವಿಯ ಶಾಸನವು ದೃಢಪಡಿಸುತ್ತದೆ.[೫೯]

ವಿಜಯನಗರದ ಭವ್ಯ ಇತಿಹಾಸದಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದ ಸುಪ್ರಸಿದ್ಧ ದೊರೆ ಎರಡನೆಯ ದೇವರಾಯ. ಈತನು ಅತೀ ವಿಸ್ತಾರವಾದ ಸಾಮ್ರಾಜ್ಯವನ್ನು ತುಂಬುವೈಭವದಿಂದ ಆಳ್ವಿಕೆ ನಡೆಸಿದನು. ಪ್ರೌಢದೇವರಾಯನು ಕಲಾಭಿಮಾನಿಯೂ ಶಿಲ್ಪಕಲಾ ಪ್ರೇಮಿಯೂ, ಧರ್ಮಪರ ರಾಜನೂ ಆಗಿದ್ದನು. ಕೃಷ್ಣದೇವರಾಯನ ಕಾಲದ ಸಾಂಸ್ಕೃತಿಕ ವೈಭವ ಶಕ್ತಿ, ಸಾಹಸಗಳ ಧವಳಕೀರ್ತಿಯ ಪ್ರಾರಂಭದ ಲಕ್ಷಣಗಳು ಈತನ ಆಳ್ವಿಕೆಯಲ್ಲಿ ಸುಳುಹುವು ಕಾಣಿಸಿದ್ದವು. ಕಲಾ ಸಾಹಿತ್ಯಗಳಿಗೆ ದೊರೆ ನೀಡುತ್ತಿದ್ದ ಪೋಷಣೆ, ದೇವಸ್ಥಾನ ಧಾರ್ಮಿಕ ಸಂಸ್ಥೆಗಳಿಗೆ ನೀಡುತ್ತಿದ್ದ ಅಪಾರವಾದ ದಾನ, ದತ್ತಿ ಮತ್ತು ಘನ ವಿದ್ವಾಂಸ, ದ್ವಿಜರಿಗೆ ಹಾಗೂ ಪ್ರತಿಭಾವಂತರಿಗೆ ನೀಡುತ್ತಿದ್ದ ದಾನ, ಧರ್ಮ, ಧಾರ್ಮಿಕ ಚರ್ಚೆಯಲ್ಲಿ ರಾಜ ತೋರುತ್ತಿದ್ದ ಆಸಕ್ತಿ ಮೊದಲಾದ ಸಂಗತಿಗಳು ಇಮ್ಮಡಿ ದೇವರಾಯನ ಕಾಲದ ಸಾಂಸ್ಕೃತಿಕ ವೈಭವವನ್ನು ನಿಶ್ಚಿತವಾಗಿ ತಿಳಿಸುತ್ತದೆ. ರಾಜನು ಸರ್ವಧರ್ಮಪ್ರಿಯನಾಗಿದ್ದು, ರಾಜನು ಎಲ್ಲ ಮತಗಳ ದೇವರಿಗೆ, ದೇವಸ್ಥಾನಗಳಿಗೆ, ಮಠಮಾನ್ಯಗಳಿಗೆ ದೊರೆಯ ಮತ್ತು ಆತನ ಸಾಮಂತರು ನೀಡುತ್ತಿದ್ದ ದತ್ತಿಗಳನ್ನು ಕುರಿತು ವಿವರಿಸುವ ಶಿಲಾಶಾಸನಗಳು ತಾಮ್ರ ಶಾಸನಗಳು ಅಸಂಖ್ಯಾತವಾಗಿ ದೊರೆಯುತ್ತವೆ. ಇವು ಈತನ ವ್ಯಕ್ತಿತ್ವವನ್ನು, ಶಕ್ತಿ, ಸಾಮರ್ಥ್ಯವನ್ನು ತಿಳಿಸುವ ಜೀವಂತ ಸಾಕ್ಷಿಯಾಗಿವೆ.

## ಮಲ್ಲಿಕಾರ್ಜುನ

ಎರಡನೆಯ ದೇವರಾಯನ ಉತ್ತರಾಧಿಕಾರಿಯಾಗಿದ್ದ ಮಲ್ಲಿಕಾರ್ಜುನ ಕ್ರಿ.ಶ.೧೪೪೬ ರಿಂದ ೧೪೬೫ರವರಗೆ ರಾಜ್ಯಭಾರ ಮಾಡಿದನು. ಈತನು ಬಳ್ಳಾರಿ ಜಿಲ್ಲೆಯ ನಿಂಬಾಪುರದಲ್ಲಿ ಸೌಮ್ಯ ಸೋಮೇಶ್ವರ ದೇವಾಲಯದ ನಿರ್ಮಾಪಕನಾಗಿದ್ದಾನೆ.[೬೦] ಈತನು ಸಂಗಮ ವಂಶದಲ್ಲಿ ದುರ್ಬಲ ಅರಸನಾಗಿದ್ದನು. ಈತನ ಕಾಲದಲ್ಲಿ ಗಣಪತಿಯನ್ನು ಎದುರಿಸಲಾರದೆ ಕ್ರಿ.ಶ.೧೪೫೪ರಲ್ಲಿ ರಾಜಮಹೇಂದ್ರಿಯನ್ನು ಕಳೆದುಕೊಂಡನು. ಕ್ರಿ.ಶ.೧೪೬೩ರಲ್ಲಿ ಆಂಧ್ರದ ಕೆಲವು ಭಾಗಗಳು ಈತನಿಂದ ಕೈಬಿಟ್ಟವು. ಹೀಗಾಗಿ ರಾಜ್ಯದ ಆಡಳಿತವು ದುರ್ಬಲತೆಗೆ ಕಾರಣವಾಯಿತು.

ಆದರೂ ಈತನ ಕಾಲದಲ್ಲೂ ಹಲವಾರು ಶೈವ ದೇವಸ್ಥಾನಗಳು ದಾನದತ್ತಿಗಳನ್ನು ಸ್ವೀಕರಿಸಿದವು. ಕ್ರಿ.ಶ.೧೪೫೦ರಲ್ಲಿ ಬಸರೂರಿನಲ್ಲಿಯ ದೇವರಿಗೆ ದಾನ ನೀಡಿದ್ದಾನೆ.[೬೧] ಕ್ರಿ.ಶ.೧೪೫೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರದ ಕುಂದೇಶ್ವರ ದೇವರಿಗೆ ೪೮ ಹೊನ್ನುಗಳನ್ನು ಮತ್ತು ಭೂಮಿಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸಿದೆ.[೬೨] ಈತನು ಕ್ರಿ.ಶ.೧೪೫೧ರಲ್ಲಿ ಬಸರೂರಿನ ನಖರೇಶ್ವರ ದೇವರಿಗೆ ೧೨೧ ಹೊನ್ನನ್ನು ದಾನವಾಗಿ ನೀಡಿದ್ದಾನೆ. ಇದನ್ನು ಅದೇ ಬಸರೂರಿನ ಶಾಸನವು ತಿಳಿಸುತ್ತದೆ.[೬೩] ಕ್ರಿ.ಶ.೧೪೬೫ರಲ್ಲಿ ಅರಸನಾದ ಮಲ್ಲಿಕಾರ್ಜುನನ್ನು ಬಸರೂರಿನ ಮಹಾದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸಿದೆ.[೬೪] ಬಸರೂರಿನ ಮಹಾಲಿಂಗೇಶ್ವರ ದೇವರನ್ನು ನಖರೇಶ್ವರ ಎಂದು ಕರೆದ ಶಾಸನವು ಕ್ರಿ.ಶ.೧೪೬೫ರಲ್ಲಿ ಮಹಾದೇವ ಎಂದು ಬದಲಾದದ್ದು ಶಾಸನಗಳಿಂದ ದೃಢಪಡುತ್ತದೆ. ಹೀಗೆ ವಿವಿಧ ದೇವಸ್ಥಾನಗಳಿಗೆ ದಾನ ನೀಡಿದ ಈತನು ದುರ್ಬಲ ರಾಜನಾಗಿದ್ದನು.

## ಇಮ್ಮಡಿ ವಿರೂಪಾಕ್ಷ

ಮಲ್ಲಿಕಾರ್ಜುನನ ತರುವಾಯ ಇಮ್ಮಡಿ ವಿರೂಪಾಕ್ಷನು ವಿಜಯನಗರದ ಸಿಂಹಾಸನವನ್ನೇರಿದನು. ಅನೇಕ ದುಶ್ಚಟಗಳ ದಾಸನಾಗಿದ್ದ ಈತನು ದುರ್ಬಲ ಅರಸರಲ್ಲಿ ಎರಡನೆಯವನಾಗಿದ್ದನು. ಈತನ ಕಾಲದಲ್ಲೂ ಕೆಲವೊಂದು ದೇವಸ್ಥಾನಗಳು ದಾನವನ್ನು ಸ್ವೀಕರಿಸಿದವು. ಅವುಗಳಲ್ಲಿ ಪ್ರಮುಖವಾಗಿ ಕ್ರಿ.ಶ.೧೪೬೭ರಲ್ಲಿ ಬಸರೂರಿನ ಮಹಾದೇವರಿಗೆ ಪಂಜಿನ ಎಣ್ಣೆ ನಿತ್ಯ ಸೇವೆಗಾಗಿ ದಾನ ನೀಡಿದ್ದನ್ನು ಶಾಸನವು ಉಲ್ಲೇಖಿಸುತ್ತದೆ.[೬೫] ಬಸರೂರಿನ ಕ್ರಿ.ಶ.೧೪೭೨ರ ಶಾಸನವು ನಿರೂಪಿಸುವಂತೆ ಬಸರೂರಿನ ದೇವರಿಗೆ ದಾನ ನೀಡಿದ್ದನು ಮಹಾದೇವ ವಿವರಿಸುತ್ತದೆ.[೬೬] ಕ್ರಿ.ಶ.೧೪೭೨ರ ವಿರೂಪಾಕ್ಷನು ಬಸರೂರಿನಲ್ಲಿ ಒಂದು ಮಠವನ್ನು ಕಟ್ಟಿಸಿದ ವಿಷಯವನ್ನು ಮತ್ತೊಂದು ಶಾಸನವು ಉಲ್ಲೇಖಿಸುತ್ತದೆ.[೬೭]

## ೨.೨. ಸಾಳುವ ವಂಶ

ಪ್ರಾಚೀನ ಮತ್ತು ಪ್ರತಿಷ್ಠಿತ ಮನೆತನಕ್ಕೆ ಸೇರಿದವರು ಸಾಳವ ವಂಶಜರು. ವಿಜಯನಗರದ ಅರಸರ ಕೈಕೆಳಗೆ ಸೇನೆಯಲ್ಲಿ ಸಾಳವ ವಂಶಜರು ಅಪ್ರತಿಮ ಸೇವೆ ಸಲ್ಲಿಸಿದ ನಾಯಕರಾಗಿದ್ದರು.[೧೮] ಸಾಳುವರು ಮಂಗಳಗಿರಿಯಿಂದ ಬಂದವರು. ಸಾಳವಂಶದ ಮಂಗುವೆನ್ನುವವನು ಸಂಬುವರಾಯ ಮತ್ತು ಮಧುರೆಯ ಸುಲ್ತಾನನ ವಿರುದ್ಧ ನಡೆದ ಯುದ್ಧದಲ್ಲಿ ರಾಜಕುಮಾರ ಎರಡನೆಯ ಕಂಪಣ್ಣನಿಗೆ ಸಹಾಯ ನೀಡಿದ್ದನು. 'ಸಾಳುವಾಭ್ಯುದಯಂ' ಪ್ರಕಾರ ಸಾಳುವ ಪೂರ್ವಜರು ಕಲ್ಯಾಣಿಯಲ್ಲಿ ಆಳ್ವಿಕೆ ನಡೆಸುತ್ತಿದ್ದರು.[೧೯] ಕ್ರಿ.ಶ.೧೪೫೬ ಸಾಳವ ಮೂರನೆಯ ಗುಂಡನ ಮಗ ಸಾಳವ ನರಸಿಂಹನು ಚಂದ್ರಗಿರಿ ರಾಜ್ಯದ ರಾಜ್ಯಪಾಲನಾಗಿ ಕಾರ್ಯನಿರ್ವಹಿಸುತ್ತಿದ್ದನು.[೨೦]

### ಸಾಳುವ ನರಸಿಂಹ

ಸಾಳುವ ನರಸಿಂಹನು ಚಂದ್ರಗಿರಿಯಲ್ಲಿ ರಾಜ್ಯಪಾಲನಾಗಿ ಕಾರ್ಯನಿರ್ವಹಿಸುತ್ತಿದ್ದನು. ಸಂಗಮ ವಂಶದ ಕೊನೆಯ ಅರಸರಾದ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷರ ದುರ್ಬಲ ಆಡಳಿತವು ಸಾಳುವ ನರಸಿಂಹನನ್ನು ಸ್ವಾತಂತ್ರ್ಯವನ್ನಾಗಿಸಿತು. ೧೪೮೫ರಲ್ಲಿ ಈತನು ವಿಜಯನಗರದ ಅಧಿಪತಿಯಾದನು. ಈತನು ಕೇವಲ ಆರು ವರ್ಷಗಳ ಕಾಲ ಮಾತ್ರ ಆಳ್ವಿಕೆ ನಡೆಸಿದನು.[೨೧] ಈತನ ಕಾಲದಲ್ಲಿ 'ರಾಮಾಭ್ಯುದಯಂ' ಎಂಬ ರಾಮಕಥಾ ಕಾವ್ಯರಚನೆಯಾಯಿತು.[೨೨] ಕ್ರಿ.ಶ.೧೪೯೧ರಲ್ಲಿ ಈತನು ಕಾಲವಾದನು. ಸಾಳವ ನರಸಿಂಹನಿಗೆ ಇಬ್ಬರು ಮಕ್ಕಳಿದ್ದರು. ಈ ಇಬ್ಬರು ಮಕ್ಕಳು ಅಪ್ರಾಪ್ತ ವಯಸ್ಕರಾಗಿದ್ದರಿಂದ ಸಾಳವ ನರಸಿಂಹನ ಮಂತ್ರಿಯಾಗಿದ್ದ ತುಳುವ ನರಸನಾಯಕನು ರಾಜಪ್ರತಿನಿಧಿಯಾಗಿ ನೇಮಕಗೊಂಡನು. ಮೊದಲಿಗೆ ಸಾಳುವ ನರಸಿಂಹನ ಹಿರಿಯ ಮಗನಾದ ತಿಮ್ಮನು ಸಿಂಹಾಸನವನ್ನು ಅಲಂಕರಿಸಿದ. ಈತನು ಪಟ್ಟವೇರಿದ ಕೆಲವೇ ದಿನಗಳಲ್ಲಿ ಕೊಲೆಯಾದನು. ಇವನ ನಂತರ ಸಾಳುವ ನರಸಿಂಹನ ಎರಡನೆಯ ಮಗನಾದ ಇಮ್ಮಡಿ ನರಸಿಂಹನು ಪಟ್ಟಕ್ಕೆ ಬಂದನು. ಈತನು ನಾಮ ಮಾತ್ರ ಅರಸನಾಗಿದ್ದನು. ವಾಸ್ತವ ಅಧಿಕಾರವೆಲ್ಲ ತುಳುವ ನರಸನಾಯಕನ ಕೈಯಲ್ಲಿದ್ದವು. ೧೫೦೩ರಲ್ಲಿ ತುಳುವ ನರಸನಾಯಕನು ತೀರಿಹೋದನು. ನಂತರದಲ್ಲಿ ತುಳುವ ನರಸನಾಯಕನ ಮಗನಾದ ವೀರನರಸಿಂಹ ತಂದೆಯ ಸ್ಥಾನದಲ್ಲಿ ತಾನೇ ನಿಂತು ರಾಜ ಪ್ರತಿನಿಧಿಯಾದನು. ಕ್ರಿ.ಶ.೧೫೦೫ರಲ್ಲಿ ಇಮ್ಮಡಿ ನರಸಿಂಹನು ವೈಕುಂಟವಾಸಿಯಾದನು. ಪರಿಸ್ಥಿತಿಯ ಲಾಭ ಪಡೆದು ೧೫೦೫ರಲ್ಲಿ ತುಳುವ ವೀರನರಸಿಂಹನು ಸಿಂಹಾಸನಾರೂಢನಾದನು.

## ೨.೩. ತುಳುವ ವಂಶ

ತುಳುವ ಮನೆತನವು ವಿಜಯನಗರವನ್ನಾಳಿದ ಮೂರನೆಯ ಪ್ರತಿಷ್ಠಿತ ರಾಜವಂಶವಾಗಿದೆ. ಇವರು ತಮ್ಮನ್ನು ತುಳವರೆಂದು ಶಾಸನಗಳಲ್ಲಿ ಕರೆದುಕೊಂಡಿದ್ದಾರೆ. ತುಳುವ ಅರಸರನ್ನು ಶಾಸನಗಳು

ಚಂದ್ರವಂಶದ ಕ್ಷತ್ರಿಯರು ಎಂದು ಕರೆದಿವೆ.[೨೩] ಆದರೆ ನರಸನಾಯಕನ ತಂದೆ ಈಶ್ವರ ನಾಯಕನೆ ಪ್ರಕಾರ ಇದುವರೆಗೆ ತಿಳಿದಿರುವ ಮೊದಲ ಅರಸನಾಗಿದ್ದಾನೆ.[೨೪] ಈಶ್ವರ ನಾಯಕನು ಸಾಳುವ ನರಸಿಂಹನ ಕೈಯಲ್ಲಿ ಒಬ್ಬ ಸೇನಾ ದಂಡನಾಯಕನಾಗಿದ್ದನು.[೨೫] ಮೂಲತಃವಾಗಿ ಇವರು ತುಳುನಾಡಿನವರಾಗಿರ ಬೇಕೆಂಬುದು ಈಚೆಗೆ ಬೆಳಕಿಗೆ ಬಂದಿದೆ.[೨೬] ಅಲ್ಲದೆ ಕೃಷ್ಣದೇವರಾಯನು ಬರೆದ 'ಆಮುಕ್ತ ಮಾಲ್ಯ'ದಲ್ಲಿ ಅನೇಕ ಕನ್ನಡ ಶಬ್ದಗಳು ಮತ್ತು ಕೆಲವು ತುಳುಶಬ್ದಗಳು ಕಂಡುಬರುವುದರಿಂದ ಈ ವಂಶಜರು ಮೂಲ ತುಳುವರೆಂಬುದನ್ನು ಖಚಿತಪಡಿಸುತ್ತವೆ.[೨೭] ಕ್ರಿ.ಶ.೧೪೯೧ರಲ್ಲಿ ನಡೆದ ರಾಜಕೀಯದ ತಿರುವು ಪ್ರಮುಖವಾದುದು. ಈ ಕಾಲದಲ್ಲಿ ದೈವಾಧೀನನಾದ ರಾಜ ಸಾಳುವ ನರಸಿಂಹನು ತನ್ನ ಮಕ್ಕಳು ಇನ್ನೂ ಚಿಕ್ಕವರಿರುವ ಪ್ರಯುಕ್ತ ತುಳುವ ನರಸನಾಯಕನಿಗೆ 'ರಾಜಪ್ರತಿನಿಧಿ' ಪಟ್ಟ ವಹಿಸಿಕೊಟ್ಟಿದ್ದನು.[೨೮] ಕ್ರಿ.ಶ.೧೫೦೩ರಲ್ಲಿ ರಾಜಪ್ರತಿನಿಧಿಯಾದ ತುಳುವ ನರಸನಾಯಕನು ತೀರಿಕೊಂಡನು. ಈಗ ತುಳುವ ನರಸನಾಯಕರ ಹಿರಿಯ ಮಗನಾದ ತುಳವ ವೀರನರಸಿಂಹನು ರಾಜಪ್ರತಿನಿಧಿಯಾದನು.[೨೯] ಕ್ರಿ.ಶ.೧೫೦೫ರಲ್ಲಿ ರಾಜನಾಗಿದ್ದ ಸಾಳವ ಇಮ್ಮಡಿ ನರಸಿಂಹನೂ ಕೊಲೆಗೀಡಾದಾಗ ರಾಜ ಪ್ರತಿನಿಧಿಯಾಗಿದ್ದ ತುಳುವ ವೀರನರಸಿಂಹನು ಪಟ್ಟಕ್ಕೆ ಬಂದನು.[೩೦]

## ವೀರನರಸಿಂಹ

ಕ್ರಿ.ಶ.೧೫೦೩ರಲ್ಲಿ ವೀರನರಸಿಂಹನು ರಾಜಪ್ರತಿನಿಧಿಯಾಗಿ ತಂದೆಯ ಮರಣಾನಂತರದಲ್ಲಿ ಕಾರ್ಯನಿರ್ವಹಿಸಿದ್ದನು. ಕ್ರಿ.ಶ.೧೫೦೫ರಲ್ಲಿ ರಾಜ ಸಾಳುವ ಇಮ್ಮಡಿ ನರಸಿಂಹನು ಕೊಲೆಗೀಡಾದ ನಂತರದಲ್ಲಿ ತುಳುವ ವೀರನರಸಿಂಹನು ತಾನೇ ಸಾಮ್ರಾಜ್ಯದ ಚಕ್ರವರ್ತಿ ಎಂದು ಘೋಷಿಸಿಕೊಂಡನು. ಆದ್ದರಿಂದ ಈತನೇ ತುಳುವ ವಂಶದ ಮೊದಲ ಸ್ವತಂತ್ರ ದೊರೆ ಎಂಬ ಹೆಗ್ಗಳಿಕೆಗೆ ಪಾತ್ರನಾದನು. ವೀರನರಸಿಂಹನು ಕ್ರಿ.ಶ.೧೫೦೫ರಿಂದ ಕ್ರಿ.ಶ.೧೫೦೯ರವರೆಗೆ ಕೇವಲ ನಾಲ್ಕು ವರ್ಷಗಳವರೆಗೆ ಆಳ್ವಿಕೆ ನಡೆಸಿದನು.[೩೧] ವಿಜಯನಗರದ ಮೊದಲಿಗೆ ಇದ್ದ ಗಡಿಗಳನ್ನು ಮತ್ತೆ ಮರಳಿ ಸ್ಥಾಪಿಸಿದ ಕೀರ್ತಿ ಈ ವೀರನರಸಿಂಹನಿಗೆ ಸಲ್ಲುತ್ತದೆ. ಈತನ ಸಾಮ್ರಾಜ್ಯದಲ್ಲಿ ಸುತ್ತ-ಮುತ್ತಲ ಅರಸರ ದಾಳಿಗಳನ್ನು ಸಾಮಂತರ ಅನೇಕ ಕಿರುಕುಳಗಳನ್ನು ಎದುರಿಸಿದನು. ಸೇನಾ ನಾಯಕರಲ್ಲಿ ಮತ್ತು ಸೈನಿಕರಲ್ಲಿ ಉತ್ಸಾಹ, ಮತ್ತು ನವಚೈತನ್ಯಗಳನ್ನು ತುಂಬಿ ಅವರಲ್ಲಿ ಮನೋಸ್ಥೈರ್ಯವನ್ನು ಹೆಚ್ಚಿಸಿದನು. ಈತನಿಗೆ ಭುಜ ಬಲರಾಯನೆಂಬ ಹೆಸರೂ ಇದ್ದಿತು.[೩೨] ತನ್ನ ಆಳ್ವಿಕೆಯ ಕೊನೆಯ ಅವಧಿಯಲ್ಲಿ ಅನಾರೋಗ್ಯಕ್ಕೆ ಒಳಗಾದನು. ಇದರಿಂದ ಸಾಮ್ರಾಜ್ಯದಲ್ಲಿ ಅರಸನ ವಿರುದ್ಧ ಪಟ್ಟಕ್ಕಾಗಿ ಅನೇಕ ಒಳಸಂಚುಗಳು ನಡೆದವು. ಕೊನೆಯಲ್ಲಿ ಶ್ರೀ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದನು.

ವೀರನರಸಿಂಹನು ತುಳುವಂಶದಲ್ಲಿ ಪ್ರಥಮದೊರೆ. ಇತನು ಕೈಗೊಂಡ ಜನಹಿತ ಕಾರ್ಯಗಳು ಈತನನ್ನು ರಾಜನನ್ನಾಗಿಸಿದವು. ಅಂತಹುದರಲ್ಲಿ ರಾಜನು ತನ್ನ ರಾಜ್ಯದಲ್ಲಿ ಅದುವರೆಗೂ ವಿಧಿಸುತ್ತಿದ್ದ ಮದುವೆಯ ಮೇಲಿನ ತೆರಿಗೆಯನ್ನು ರದ್ದುಗೊಳಿಸಿದನು. ಇದು ಈತನ ಜನಹಿತ ಕಾರ್ಯದಲ್ಲಿ ಅತ್ಯಂತ ಮುಖ್ಯವಾದುದು.[೮೩] ಪ್ರೋರ್ಚುಗೀಸರೊಂದಿಗೆ ಸ್ನೇಹ ಮಾಡಿಕೊಂಡು ಉತ್ತಮ ದರ್ಜೆಯ ಕುದುರೆಗಳನ್ನು ಅಲ್ಲಿಂದ ಆಮದು ಮಾಡಿಕೊಂಡನು.[೮೪]

## ಕೃಷ್ಣದೇವರಾಯ

ವಿಜಯನಗರ ಸಾಮ್ರಾಜ್ಯದಲ್ಲಿ ಅತ್ಯಂತ ಶ್ರೇಷ್ಠನೂ, ಸಮರ್ಥನೂ ಆದ ದೊರೆ ಕೃಷ್ಣದೇವರಾಯ. ಈತನ ಆಳ್ವಿಕೆಯು ತುಳುವ ವಂಶದಲ್ಲಿಯೇ ಸಮರ್ಥವಾದುದು. ಎರಡನೆಯ ದೇವರಾಯನ ಕಾಲದ ರಾಜ್ಯದ ಉನ್ನತಿಯನ್ನು ಈತನು ಮತ್ತಷ್ಟು ಹೆಚ್ಚಿಸಿದನು. ಕೃಷ್ಣದೇವರಾಯನು ಕ್ರಿ.ಶ. ೧೫೦೯ ರಿಂದ ಕ್ರಿ.ಶ.೧೫೨೯ರವರೆಗೆ ಆಳ್ವಿಕೆಯನ್ನು ನಡೆಸಿದನು. ಈತನು ಒಟ್ಟು ಎರೆಡು ದಶಕಗಳ ಕಾಲ ವಿಜಯನಗರ ಸಾಮ್ರಾಜ್ಯದ ವಿಜಯ ಪತಾಕೆಯನ್ನು ಹಾರಿಸಿದನು. ಕೃಷ್ಣದೇವರಾಯನ ಆಳ್ವಿಕೆಯ ಕಾಲವು ಹಲವಾರು ದೃಷ್ಟಿಗಳಿಂದ ದಕ್ಷಿಣ ಭಾರತದ ಇತಿಹಾಸದ ಏಕೈಕ ಸುವರ್ಣಯುಗವಾಗಿರುತ್ತದೆ. ತನ್ನ ಆಳ್ವಿಕೆಯ ಬಹುಕಾಲ ಯುದ್ಧರಂಗದಲ್ಲಿ ಕಳೆದ ಕೃಷ್ಣದೇವರಾಯನು ಒಮ್ಮೆಯೂ ಸೋಲನ್ನು ಅನುಭವಿಸಲಿಲ್ಲ. ಸ್ವತಃ ಕವಿ ಸೌರ್ವಭೌಮನಾಗಿದ್ದ ಅವನು ಕವಿಗಳ, ಕಲೆಗಳ ಆಶ್ರಯದಾತನಾಗಿದ್ದನು. ಇವನು ಪಟ್ಟಕ್ಕೆ ಬರುವುದಕ್ಕಿಂತ ಮುಂಚೆ ಸಾಮ್ರಾಜ್ಯವು ಹಲವಾರು ಒಳಜಗಳಗಳಿಂದ ಕೂಡಿತ್ತು. ಇಂತಹ ಕಠಿಣ ಪರಿಸ್ಥಿತಿಯಲ್ಲಿ ವಿಜಯನಗರದ ಸಾಮ್ರಾಜ್ಯದ ವಿಜಯಲಕ್ಷ್ಮಿಯನ್ನು ವಿಜಯದತ್ತ ಕೊಂಡೊಯ್ಯುವ ಸಾಹಸವನ್ನು ಈತನು ಮಾಡಿದನು. ರಾಯರ ಜನನದ ಕಾಲವನ್ನು ಕ್ರಿ.ಶ.೧೪೬೫ ರಿಂದ ಕ್ರಿ.ಶ.೧೪೭೧ ಒಳಗೆ ಇರಬಹುದು ಎಂದು ಇತ್ತೀಚಿನ ಶೋಧನೆಗಳು ಹೇಳುತ್ತಿವೆ.[೮೫] ನ್ಯೂನಿಚ್ ವರದಿಯಲ್ಲಿ ಬರುವ "ರಾಜ್ಯ ಪಟ್ಟಕ್ಕೆ ಬಂದಾಗ ಇಪ್ಪತ್ತು ವರ್ಷಗಳಿಗಿಂತ ಹೆಚ್ಚು ವಯಸ್ಸಾಗಿತ್ತು[೮೬] ಎಂಬ ವರದಿಯನ್ನು ಶೋಧನೆಗಳು ಅಲ್ಲಗಳೆಯುತ್ತವೆ. ಇದೇ ನ್ಯೂನಿಚ್‌ನ " ಕ್ರಿ.ಶ.೧೫೨೪ರ ವೇಳೆಗೆ ರಾಯನಿಗೆ ತುಂಬ ವಯಸ್ಸಾಗಿದ್ದು, ಮುಪ್ಪಿನಲ್ಲಿ ವಿಶ್ರಾಂತಿಯನ್ನು ಪಡೆಯಬೇಕೆಂಬ ಇಚ್ಛೆಯಿತ್ತು[೮೭] ಎಂಬ ಹೇಳಿಕೆಯನ್ನು ಆಧರಿಸಿ ಈ ಮೇಲಿನ ಕಾಲನಿರ್ಣಯವನ್ನು ಮಾಡಿರುತ್ತಾರೆ. ಇದನ್ನು ಕೃಷ್ಣದೇವರಾಯನ ಮಗಳು ಮೋಹನಾಂಗಿಯು ಬರೆದಿರುವ "ಮಾರೀಚಿಪರಿಣಯಂ" ಎಂಬ ಕಾವ್ಯ ಪುಷ್ಠಿಕೊಡುತ್ತದೆ.[೮೮]

ಈತನು ಪಟ್ಟಕ್ಕೆ ಬಂದಾಗ ರಾಜ್ಯದ ಸ್ಥಿತಿ ಅಂತಃಕಲಹಗಳ ಪರಿಣಾಮದಿಂದ ಅಭದ್ರವಾಗಿತ್ತು. ಇಂತಹ ಸ್ಥಿತಿಯಲ್ಲಿ ಕೃಷ್ಣದೇವರಾಯನಿಗೆ, ಕ್ರಿ.ಶ.೧೫೦೯ನೇ ಇಸ್ವಿಯಲ್ಲಿ ಪಟ್ಟಾಭಿಷೇಕವಾಯಿತು ಎನ್ನಬಹುದು. ಇದನ್ನು ಕೃಷ್ಣದೇವರಾಯರ ಹೆಸರಿನ ಮೊದಲ ಶಾಸನವಾದ 'ಗುಳ್ಯಂ' ಶಾಸನ

ಹೇಳುತ್ತದೆ.[೮೯] ಕ್ರಿ.ಶ.೧೫೦೯ರಲ್ಲೇ ಕೃಷ್ಣದೇವರಾಯನ್ನು ಪಟ್ಟಾಭಿಷೇಕವಾಯಿತು ಎನ್ನುವುದನ್ನು ಎಪಿಗ್ರಾಫಿಯ ಕರ್ನಾಟಿಕ, ಕರ್ಣಾಟಕ ಪರಂಪರೆ ಗ್ರಂಥಗಳು ಸಮರ್ಥಿಸುತ್ತವೆ.[೯೦]

ಒಟ್ಟಾರೆಯಾಗಿ ಕೃಷ್ಣದೇವರಾಯನು ಎರಡು ದಶಕಗಳ ಕಾಲ ರಾಜ್ಯಭಾರ ಮಾಡಿದನು. ಈತನು ಮುಸ್ಲಿಂ ರಾಷ್ಟ್ರಗಳನ್ನು ರಾಯಚೂರು ಯುದ್ಧದಲ್ಲಿ ಕ್ರಿ.ಶ.೧೫೧೦ರಲ್ಲಿ ಪೂರ್ತಿಯಾಗಿ ಸೋಲಿಸಿದನು.[೯೧] ದಂಗೆಯೆದ್ದ ಉಮ್ಮತ್ತೂರಿನ ಪಾಳೆಗಾರನಾದ ಗಂಗರಾಜನು ಸಂಪೂರ್ಣವಾಗಿ ಸೋಲಿಸಿ ಶರಣಾಗುವಂತೆ ಮಾಡಿದನು. ಅಲ್ಲಿಯವರೆಗೆ ಸ್ವತಂತ್ರವಾಗಿದ್ದ ಮಂಗಳೂರು ಪ್ರದೇಶವು ಕ್ರಿ.ಶ.೧೫೧೨ರಲ್ಲಿ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಪುನಃ ಸಾಮ್ರಾಜ್ಯದ ಒಂದು ಭಾಗವಾಯಿತು.[೯೨] ಒರಿಸ್ಸಾದ ಗಜಪತಿ ಪ್ರತಾಪರುದ್ರನ ಮೇಲೆ ರಾಯನು ಯುದ್ಧವನ್ನು ಮಾಡಿದನು. ಉದಯಗಿರಿಯನ್ನು ವಶಪಡಿಸಿಕೊಳ್ಳುವುದಕ್ಕಾಗಿ ಕಳಿಂಗ ರಾಜನ ಮೇಲೆ ರಾಯನು ಯುದ್ಧವನ್ನು ಕೈಗೊಂಡಿದ್ದನು. ಕ್ರಿ.ಶ.೧೫೧೩, ೧೪ರಲ್ಲಿ ನಡೆದ ಈ ಯುದ್ಧದ ವರ್ಣನೆಯನ್ನು ನ್ಯೂನಿಚ್ ನೀಡಿದ್ದಾನೆ.[೯೩] ಈ ದಾಳಿಯ ಬಗೆಗೆ ವಿವರವಾದ ಮಾಹಿತಿಯನ್ನು "ಕೃಷ್ಣದೇವರಾಯ ವಿಜಯ" ಎಂಬ ಮಹಾಕಾವ್ಯವು ನೀಡುತ್ತದೆ.[೯೪] ಈ ದಂಡೆಯಾತ್ರೆಯಲ್ಲಿ ವಿಜಯಿಯಾಗಿ ರಾಯರು ಹಿಂದಿರುವಾಗ ಕ್ರಿ.ಶ.೧೫೧೪ರಲ್ಲಿ ತಿರುಪತಿಗೆ ಭೇಟಿ ನೀಡಿದರು.[೯೫] ಈ ಸಮಯದಲ್ಲಿ ರಾಯರು ವೆಂಕಟೇಶ್ವರ ದೇವರಿಗೆ ಮೂವತ್ತು ಸಾವಿರ ವರಹಗಳಿಂದ ಕನಕಾಭೀಷೇಕವನ್ನು ನಡೆಸಿದನು. ಜೊತೆಯಲ್ಲಿ ದೇವರಿಗೆ ಅನೇಕ ಆಭರಣಗಳನ್ನು ಅರ್ಪಿಸಿದನು.[೯೬]

ರಾಯನು ಉದಯಗಿರಿಯನ್ನು ಜಯಿಸಿದುದರ ನೆನಪಿಗಾಗಿ ಅಲ್ಲಿನ ದೇವಾಲಯವೊಂದರಲ್ಲಿದ್ದ ಬಾಲಕೃಷ್ಣನ ವಿಗ್ರಹವನ್ನು ರಾಜಧಾನಿಗೆ ತಂದು, ಒಂದು ಭವ್ಯವಾದ ದೇವಾಲಯವನ್ನು ನಿರ್ಮಿಸಿ, ಅಲ್ಲಿ ಆ ವಿಗ್ರಹವನ್ನು ಪ್ರತಿಷ್ಠಾಪಿಸಿದರು.[೯೭] ಇದರ ಪ್ರಸ್ತಾಪವನ್ನು ವ್ಯಾಸರಾಯರು ತಮ್ಮ ಕೀರ್ತನೆಯಲ್ಲಿ ಹಾಡಿ ಹೊಗಳಿದ್ದಾರೆ.[೯೮]

ಮುಂದೆ ರಾಯರು ಆಂಧ್ರ ಪ್ರದೇಶದ ಕೊಂಡಪಲ್ಲಿಯನ್ನು ಗುರಿಯಾಗಿರಿಸಿಕೊಂಡು ದಂಡಯಾತ್ರೆ ಕೈಗೊಂಡರು. ಈ ದಂಡಯಾತ್ರೆಯ ಸಮಯದಲ್ಲೇ ರಾಯರಿಗೆ "ಶ್ರೀಕಾಕುಳಂ"ದಲ್ಲಿ ಮಧುಸೂಧನ ದೇವಾಲಯದಲ್ಲಿ ರಾಯರಿಗೆ ಕನಸಿನಲ್ಲಿ ಕಾಣಿಸಿಕೊಂಡು "ಆಮುಕ್ತ ಮೌಲ್ಯದ" ಮಹಾಕಾವ್ಯದ ರಚನೆಯನ್ನು ತೆಲುಗಿನಲ್ಲಿ ಮಾಡಬೇಕೆಂದು ಆದೇಶ ನೀಡಿದನೆಂದು ಹೇಳಲಾಗುತ್ತದೆ.[೯೯] ಕ್ರಿ.ಶ.೧೫೧೯ರಲ್ಲಿ ಶ್ರೀಕಾಕುಳದ ಮಧುಮಥನ ದೇವಾಲಯಕ್ಕೆ ಭೇಟಿ ನೀಡಿ ಲಂಕಪಲ್ಲಿ ಎಂಬ ಹಳ್ಳಿಯನ್ನು ದತ್ತಿ ಬಿಟ್ಟರು.[೧೦೦] ಕ್ರಿ.ಶ.೧೫೧೬ ರಾಯರು ವಿಜಯದಿಂದ ಕೊಂಡಪಲ್ಲಿ,[೧೦೧] ದಂಡಯಾತ್ರೆಯನ್ನು ಮುಂದುವರಿಸಿ ಆಂಧ್ರದ ಬಹುಭಾಗವನ್ನು ತಮ್ಮ ವಶಕ್ಕೆ ತೆಗೆದುಕೊಂಡು, ಒರಿಸ್ಸಾದ ರಾಜನ ಮೇಲೆ ಮತ್ತೊಮ್ಮೆ

ದಂಡೆಯಾತ್ರೆ ಕೈಗೊಂಡು ಕಟಕನ್ನು ಮುತ್ತಿದರು. ಆಗ ಒರಿಸ್ಸಾದ ಗಜಪತಿಗಳು ಮತ್ತು ರಾಯನ ನಡುವೆ ಶಾಂತಿ ಒಪ್ಪಂದವೇರ್ಪಟ್ಟಿತು. ದಂಡಯಾತ್ರೆ ಕೊನೆಗೊಂಡಿತು.

ಕೊಂಡಪಳ್ಳಿ ಮತ್ತು ಕಳಿಂಗ ದಂಡೆಯಾತ್ರೆಯು ವಿಜಯದ ನೆನಪಿಗಾಗಿ ರಾಯನು ಹಲವಾರು ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಿದನು ಪ್ರಮುಖವಾಗಿ ರಾಯನುತಿರುಪತಿ ತಿಮ್ಮಪ್ಪನಿಗೆ ಷೋಡಶ ಮಹಾದಾನವನ್ನು ನೀಡಿದನು. ಕಾಳಹಸ್ತಿ, ಶ್ರೀರಂಗ, ನಂದಿಕೇಶ್ವರ, ಮಧುರೆ, ಶ್ರೀರಂಗಪಟ್ಟಣ, ಗೋಕರ್ಣ ಇತ್ಯಾದಿ ಸ್ಥಳಗಳಿಗೆ ರಾಯನು ಭೇಟಿ ನೀಡಿದರು.

ಕೃಷ್ಣದೇವರಾಯ ಮಹಾರಾಯರು ಇಡೀ ಭಾರತದಲ್ಲೆಲ್ಲಾ ಕೀರ್ತಿವಂತ ದೊರೆಯಾಗಿದ್ದನು. ದಕ್ಷಿಣ ಭಾರತವು ಸಂಪೂರ್ಣವಾಗಿ ಈತನ ಆಳ್ವಿಕೆಗೆ ಒಳಪಟ್ಟಿತ್ತು. ಉತ್ತರದ ಒರಿಸ್ಸಾದ ಕೆಲವುಭಾಗಗಳವರೆಗೆ ಕೃಷ್ಣದೇವರಾಯನು ದಂಡಯಾತ್ರೆ ಮಾಡಿದನು. ಉತ್ತರ ಭಾರತದ ಸಮಕಾಲೀನ ಅರಸನಾದ ಬಾಬರನು ತನ್ನ ದಿನಚರಿಯಲ್ಲಿ "ವಿಜಯನಗರದ ರಾಜನು ಅತ್ಯಂತ ಬಲಾಢ್ಯನೆಂದು" ಹೊಗಳಿದ್ದಾನೆ.[೧೦೨] ಕೃಷ್ಣದೇವರಾಯನ ಉದಯಾಂಬಕಂನಲ್ಲಿರುವ ಶಾಸನದಲ್ಲಿ ಸಾಮ್ರಾಜ್ಯವು ಗಂಗಾತೀರದಿಂದ ಲಂಕೆಯ ವರೆಗೂ ಹೆಸರುವಾಸಿ"ಯಾಗಿತ್ತೆಂದು ಹೇಳುತ್ತದೆ.

ಈ ಎಲ್ಲಾ ಕೀರ್ತಿಗೆ ಪಾತ್ರರಾದ ಕೃಷ್ಣದೇವರಾಯನು ಹಲವಾರು ಬಿರುದುಗಳನ್ನು ಹೊಂದಿದ್ದಾನೆ. ಶಾಸನಗಳು ಮತ್ತು ಸಾಹಿತ್ಯ ಕೃತಿಗಳು ರಾಯರನ್ನು, ರಾಯರ ಬಿರುದುಗಳನ್ನು ಹಾಡಿ ಹೊಗಳಿವೆ. ಹಂಪೆಯ ಒಂದು ಶಾಸನವು "ಅರಿರಾಯ ವಿಭಾಡ, ಭಾಷೆಗೆ ತಪ್ಪದ ರಾಯರಗಂಡ, ಮೂರು ಕಾಯಕಗಂಡ, ಪೂರ್ವ ದಕ್ಷಿಣ ಪಶ್ಚಿಮೋತ್ತರ ಚತುಃಸಮುದ್ರಾಧಿಪತಿ"[೧೦೩] ಎಂಬ ಬಿರುದುಗಳನ್ನು ಹೆಸರಿಸುತ್ತದೆ. ಅಲ್ಲಿನ ಶಾಸನಗಳೇ "ಸಂಗೀತ ಸಾಹಿತ್ಯ ಸಮರಾಂಗಣ ಸೌರ್ಮಭೌಮ"[೧೦೪] ಸಕಲ ದೇಶಾಧೀಶ್ವರ, ಮಣಿಮುಕಟ ಚರಣಾರವಿಂದ, ಪರಕ್ರಮಣಾಧಾರ, ಸಕಲದೇವಾಧೀಶ್ವರ,[೧೦೫] ಅಷ್ಟದಿಕ್ಕುರಾಯ, ಮನೋಭಯಂಕರ, ಯವನ ರಾಜ್ಯ ಸ್ಥಾಪನಾಚಾರ್ಯ,[೧೦೬] ಗಜಪತಿ ದಳವಿಭಾಡ[೧೦೭] ಹೀಗೆ ಹಲವಾರು ಬಿರುದುಗಳನ್ನು ಕೃಷ್ಣದೇವರಾಯನುಹೊಂದಿದ್ದನು. ಇದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಕೃಷ್ಣದೇವರಾಯನು ಇಡೀ ದಕ್ಷಿಣ ಭಾರತವನ್ನೆ ತನ್ನಾಡಳಿತದಲ್ಲಿ ತೆಗೆದುಕೊಂಡು ಆಳ್ವಿಕೆ ನಡೆಸಿದ ಪ್ರಸಿದ್ಧ ದೊರೆ. ಪ್ರಜಾಹಿತ ಚಿಂತನೆಯನ್ನೇ ತನ್ನ ಆದರ್ಶವಾಗಿಟ್ಟುಕೊಂಡು ಹಗಲಿರುಳೂ ಶ್ರಮಿಸಿದ ಶ್ರೇಷ್ಠ ದೊರೆಯಾಗಿದ್ದಾನೆ. ದೇವಸ್ಥಾನಗಳ ಜೀರ್ಣೋದ್ಧಾರ, ನೂತನ ದೇವಾಲಯಗಳ ನಿರ್ಮಾಣ, ನಿರ್ವಹಣೆ ಮೊದಲಾದವುಗಳಿಗೆ ಅಪಾರ ಪ್ರೋತ್ಸಾಹ ನೀಡಿದ ಸಾಂಸ್ಕೃತಿಕ ದೊರೆ ಕೃಷ್ಣದೇವರಾಯನಾಗಿದ್ದಾರೆ.

**ಅಚ್ಯುತರಾಯ**

ಕೃಷ್ಣದೇವರಾಯನ ಉತ್ತರಾಧಿಕಾರಿಯಾಗಿ ಅಚ್ಯುತರಾಯನು ಅಧಿಕಾರಕ್ಕೆ ಬಂದನು. ಈತನ ಬಗೆಗೆ ಕೃಷ್ಣರಾಜಪೇಟೆ,[೧೦೮] ನಾಗಮಂಗಲ[೧೦೯] ಶಾಸನಗಳು ಮಾಹಿತಿ ನೀಡುತ್ತವೆ. ಪ್ರಾರಂಭದಲ್ಲಿ ಅಚ್ಯುತದೇವರಾಯನು ಹಲವಾರು ಸೈನಿಕ ಸಮಸ್ಯೆಗಳನ್ನು ಧೈರ್ಯವಾಗಿ ಎದುರಿಸಲು ಅಧಿಕಾರಕ್ಕಾಗಿ ರಾಮರಾಯನಿಗೂ, ಅಚ್ಯುತರಾಯರಿಗೂ ಪೈಪೋಟಿ ಪ್ರಾರಂಭವಾಗಿತ್ತು. ಅಚ್ಯುತರಾಯನು ತಿರುಪತಿ ತೀರ್ಥಯಾತ್ರೆಗೆ ಹೋದ ಸಮಯವನ್ನು ಸದ್ಬಳಕೆ ಮಾಡಿಕೊಂಡ ರಾಮರಾಯನು ಸದಾಶಿವರಾಯನನ್ನು ಪಟ್ಟಕ್ಕೆ ತಂದನು.

ಕ್ರಿ.ಶ.೧೫೨೯ರಲ್ಲಿ ಪಟ್ಟಕ್ಕೆ ಬಂದ ಮೊದಲ ವರ್ಷದಲ್ಲೇ ಸದಾಶಿವರಾಯನು ಹೊಸಪೇಟೆ ತಾಲ್ಲೂಕು ಕಂಪಲಿಯ ಮಲ್ಲಿಕಾರ್ಜುನ ದೇವರಿಗೆ ದಾನ ನೀಡಿದ್ದಾನೆ.[೧೧೦] ಕ್ರಿ.ಶ.೧೫೩೧ರಲ್ಲಿ ಹೊಸಪೇಟೆಯ ಗೌರೇಶ್ವರ ದೇವಸ್ಥಾನಕ್ಕೆ ದಾನವನ್ನು ನೀಡಿದ್ದನು.[೧೧೧] ಕ್ರಿ.ಶ.೧೫೩೨ರಲ್ಲಿ ಈತನು ಬಳ್ಳಾರಿ ಜಿಲ್ಲಾ ಬಳ್ಳಾರಿ ತಾಲ್ಲೂಕು ಕುಡತಿನಿಯ ವೀರಭದ್ರದೇವರ ಜೀರ್ಣೋದ್ಧಾರಕ್ಕೆ ನೈವೇದಕ್ಕೆ ದಾನ ನೀಡಿದನೆಂದು ಶಾಸನವು ಉಲ್ಲೇಖಿಸಿದೆ.[೧೧೨] ಕ್ರಿ.ಶ.೧೫೩೪ರಲ್ಲಿ ಅಚ್ಯುತದೇವರಾಯನ ಕಾಲದಲ್ಲಿ ಹಾವಿನಾಳು ವೀರಾಪುರದ ಬುಕ್ಕೇಶ್ವರ ದೇವರಿಗೆ ಪ್ರತಿಷ್ಠಾಪನೆ ಮಾಡಿದ್ದನ್ನು ಶಾಸನವು ಉಲ್ಲೇಖಿಸಿದೆ.[೧೧೩] ಕ್ರಿ.ಶ.೧೫೩೯ರಲ್ಲಿ ಅಚ್ಯುತ ದೇವರಾಯನ ಮಂತ್ರಿ ಬಯಕಾರ ರಾಮಪ್ಪನು ಹೊಸಪೇಟೆ ತಾಲ್ಲೂಕು ತಿಮ್ಮಲಾಪುರದಲ್ಲಿ ಶಿವದೇವಾಲಯವನ್ನು ನಿರ್ಮಿಸಿದನು.[೧೧೪] ಹೀಗೆ ಹಲವಾರು ದೇವಸ್ಥಾನಗಳಿಗೆ ಅಚ್ಯುತದೇವರಾಯ ದತ್ತಿಗಳನ್ನು ನೀಡಿ ಅವುಗಳನ್ನು ಪೋಷಿಸಿದ್ದಾನೆ.

**ಸದಾಶಿವರಾಯ**

ಅಚ್ಯುತ ರಾಯನ ತರುವಾಯದಲ್ಲಿ ಸದಾಶಿವರಾಯನು ಅಧಿಕಾರದ ಚುಕ್ಕಾಣಿ ಹಿಡಿದನು. ಈತನು ಮಹಾರಾಜನಾದ ರಂಗರಾಯನ ಮಗನೆಂದು ಭಟ್ಕಳದ ಶಾಸನವು ತಿಳಿಸುತ್ತದೆ.[೧೧೫] ಸದಾಶಿವರಾಯನು ಹೆಸರಿಗೆ ಮಾತ್ರ ಅರಸನಾಗಿದ್ದನು. ರಾಜ್ಯದ ಆಡಳಿತ ಸೂತ್ರವೆಲ್ಲ ಕ್ರಮೇಣವಾಗಿ ರಾಮರಾಯನಿಗೆ ಹಸ್ತಾಂತರವಾಯಿತು.

ಸದಾಶಿವರಾಯನು ಕ್ರಿ.ಶ.೧೫೩೪ರಲ್ಲಿ ಇವರ ಕಾರ್ಯಕರ್ತರಾದ ಗುಂಡಮಹಾರಾಯರ ಅಳಿಯ ಲಿಂಗರಾಜ, ಸದಾಶಿವರಾಯರು, ಕುರುಗೋಡಿನ ಸಂಗಮೇಶ್ವರ ದೇವರಿಗೆ ಚೆನಕುಂಟೆ ಗ್ರಾಮವನ್ನು ದತ್ತಿಯಾಗಿ ನೀಡಿದ್ದಾರೆ.[೧೧೬]

ಕ್ರಿ.ಶ.೧೫೪೬ರಲ್ಲಿ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಬಾರಕೂರಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಯಕದಳಖಾನನು ಕೋಟೇಶ್ವರ ದೇವರಿಗೆ ದಾನ ನೀಡಿದನೆಂದು ಕೋಟೇಶ್ವರದ ಶಾಸನವು ತಿಳಿಸುತ್ತದೆ.[೧೧೭]

ಕ್ರಿ.ಶ.೧೫೪೭ರಲ್ಲಿ ಈತನ ಆಳ್ವಿಕೆಯ ಕಾಲದಲ್ಲೇ ಸೊಂಡೂರು ತಾಲ್ಲೂಕಿನ ಅಂತಾಪುರ ಗ್ರಾಮದಲ್ಲಿ ಜೀರ್ಣಾವಸ್ಥೆಯ ಸ್ಥಿತಿಯಲ್ಲಿದ್ದ ಮಲ್ಲಿಕಾರ್ಜುನ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಶ್ರೀ ಮಲ್ಲಿಕಾರ್ಜುನ ದೇವರ ಮೂರ್ತಿಯನ್ನು ಹೊಸದಾಗಿ ಪ್ರತಿಷ್ಠಾಪಿಸಲಾಯಿತು ಎಂದು ಅಂತಾಪುರದ ಶಾಸನವು ತಿಳಿಸುತ್ತದೆ.[೧೮] ಕ್ರಿ.ಶ.೧೫೫೨ರಲ್ಲಿ ಕಂಪ್ಲಿಯಲ್ಲಿ ಪಂಪಾಪತಿ ದೇವಸ್ಥಾನದಲ್ಲಿ ಹಂಪಾದೇವಿಯನ್ನು ಪ್ರತಿಷ್ಠಾಪಿಸಲಾಯಿತು ಎಂದು ಕಂಪ್ಲಿಯ ಶಾಸನವು ತಿಳಿಸುತ್ತದೆ.[೧೯]

ಕ್ರಿ.ಶ.೧೫೬೨ರಲ್ಲಿ ಶಂಕರನಾರಾಯಣ ಗ್ರಾಮದ ಶಂಕರ ನಾರಾಯಣ ದೇವರ ಸನ್ನಿಧಿಯಲ್ಲಿ ವಿರೂಪಾಕ್ಷದೇವನಿಗಾಗಿ ಮಂಟಪವನ್ನು ಸದಾಶಿವರಾಯನ ಅಧಿಕಾರಿಗಳು ನಿರ್ಮಿಸಿದರು ಎಂದು ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ತಾಲ್ಲೂಕು ಶಂಕರನಾರಾಯಣದ ಶಾಸನವು ತಿಳಿಸುತ್ತದೆ.[೨೦]

**ಅಡಿಟಿಪ್ಪಣಿಗಳು**

೧. ನಾಯಕ ಹಾ.ಮಾ.(ಸಂ), ವಿದ್ಯಾರಣ್ಯರು ಮತ್ತು ಅವರ ಕಾಲ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೪, ಪು.೨೪೧

೨. ವಿಜಯನಗರದ ಕಲೆ ಮತ್ತು ಸಾಹಿತ್ಯ, ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು, ಪು.೧

೩. ದೇಸಾಯಿ ಪಿ.ಬಿ. ಮತ್ತು ಸಾಲತೊರೆ, ಕನ್ನಡ ನಾಡಿನ ಚರಿತ್ರೆ ಭಾಗ ೧, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೦, ಪು.೬೩

೪. ಅದೇ, ಪು.೬೩

೫. ಅದೇ, ಪು.೬೩

೬. ಗೋಪಾಲ್ ಬಾ.ರಾ., ಕರ್ನಾಟಕದ ಇತಿಹಾಸ, ೧೯೮೬, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೭೭

೭. ಅದೇ, ಪು.೨೭೭

೮. ವಸುಂಧರಾ ಫಿಲಿಯೋಜ, ಅಳಿದುಳಿದ ಹಂಪೆ, ಪು.೩

೯. EC VI, ಶೃಂಗೇರಿ, ಕ್ರಿ.ಶ.೧೩೪೬

೧೦. ಗೋಪಾಲ್ ಬಾ.ರಾ., ಪೂರ್ವೋಕ್ತ, ಪು.೨೭೫

೧೧. ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸ, ಪು.೧೧೭

೧೨. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನದ ಚಿತ್ರಗಳು, ಗೀತಾಬುಕ್ ಹೌಸ್, ಮೈಸೂರು, ಪು.೩೬

೧೩. ಅದೇ, ಪು.೩೬

೧೪. EC VI, SG I

೧೫. ರಮೇಶ್ ಕೆ.ವಿ., ತುಳುನಾಡಿನ ಇತಿಹಾಸ, ಗೀತಾಬುಕ್‌ಹೌಸ್, ಮೈಸೂರು, ಪು.೮೩

೧೬. EC III, ML No.22

೧೭. EC IV, CH, No.113

೧೮. ಗೋಪಾಲ ಬಾ.ರಾ., ಪೂರ್ವೋಕ್ತ, ಪು.೨೮೦

೧೯. ದೀಕ್ಷಿತ್ ಜಿ.ಎಸ್., ಪೂರ್ವೋಕ್ತ, ಪು.೧೭೭

೨೦. A.E.VI, No.33, ಕ್ರಿ.ಶ.೧೩೭೧

೨೧. ವಸುಂಧರಾ ಫಿಲಿಯೋಜ, ಪೂರ್ವೋಕ್ತ, ಪು.೧೭

೨೨. ARSIE, 1919, No.267

೨೩. AE II, No.344 ಕ್ರಿ.ಶ.೧೩೬೮

೨೪. Venkata Rao N., Southern School in Telugu Literature, University of Madras, 1954, P.4

೨೫. ನಂಜುಂಡಸ್ವಾಮಿ ಎ.ಎಸ್., ವಿಜಯನಗರದ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೬, ಪು.೨೬

೨೬. ಕರ್ನಾಟಕ ಪರಂಪರೆ, ಭಾಗ ೨, ಪು.೨೦

೨೭. ಸೂರ್ಯನಾಥ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟೆಯರ್, ೧೯೮೪, ಬೆಂಗಳೂರು, ಪು.೨೨೪

೨೮. ಅದೇ, ಪು.೨೨೪

೨೯. ಕರ್ನಾಟಕದ ಪರಂಪರೆ, ಭಾಗ ೨, ಪು.೨೦

೩೦. EC X, ಯಳಂದೂರು, ಸಂಖ್ಯೆ.೪೬

೩೧. ರಮೇಶ ಕೆ.ವಿ., ತುಳುನಾಡಿನ ಇತಿಹಾಸ, ಗೀತಾಬುಕ್ ಹೌಸ್, ಮೈಸೂರು, ೧೯೬೯, ಪು.೮೩

೩೨. ಕರ್ನಾಟಕದ ಪರಂಪರೆ, ಪೂರ್ವೋಕ್ತ, ಪು.೨೦

೩೩. EC ಗೌರಿಬಿದನೂರು, ಸಂಖ್ಯೆ.೪೬

೩೪. ಮುಜುಂದಾರ ಆರ್.ಸಿ.(ಸಂ), ಹಿಸ್ಟರಿ ಅಂಡ್ ಕಲ್ಚರ್ ಆಫ್ ದಿ ಇಂಡಿಯನ್ ಪೀಪಲ್ಸ, ಸಂಪುಟ೬, ದೆಹಲಿಯ ಸುಲ್ತಾನರು, ಭಾರತೀಯ ವಿದ್ಯಾಭವನ ಪು.೨೮೨

೩೫. ಕರ್ನಾಟಕ ಪರಂಪರೆ, ಪೂರ್ವೋಕ್ತ, ಪು.೨೧

೩೬. ಕವಿಶಾಸಂ ೩, ಹಂಪಿ ಸಂಖ್ಯೆ.೩೫೦

೩೭. ಕವಿಶಾಸಂ ೩, ಹಂಪಿ ಸಂಖ್ಯೆ.೩೬೫

೩೮. ಕರ್ನಾಟಕದ ಪರಂಪರೆ, ಪೂರ್ವೋಕ್ತ, ಪು.೨೧

೩೯. EC V, HN No.133

೪೦. SII, Vol.VII, No.349

೪೧. ರಮೇಶ ಕೆ.ವಿ., ಪೂರ್ವೋಕ್ತ, ಪು.೮೭

೪೨. EC X, GD, No.59

೪೩. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೧೨

೪೪. EC VII, SK, No.24

೪೫. EC VII, ST, No.47

೪೬. EC XIV, SR, No.280

೪೭. ಕರ್ನಾಟಕದ ಪರಂಪರೆ, ಪೂರ್ವೋಕ್ತ, ಪು.೨೪

೪೮. ಸೂರ್ಯನಾಥ ಕಾಮತ್(ಸಂ), ರಾಜ್ಯ ಗ್ಯಾಸೆಟಿಯರ್, ಪು.೨೨೬

೪೯. ಅದೇ, ಪು.೨೨೭

೫೦. ಸದಾನಂದ ಕನವಳ್ಳಿ(ಅನು), ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, ಪು.೭೭

೫೧. Mysore GaZ II, Part III, P.1574

೫೨. ಕರ್ನಾಟಕ ಪರಂಪರೆ, ಪೂರ್ವೋಕ್ತ, ಪು.೨೮

೫೩. ಶಿವತತ್ವ ಚಿಂತಾಮಣಿ, ಪು.೨೫೧

೫೪. E.C., VOl.X, No.104, P.31

೫೫. ಶಿವತತ್ವ ಚಿಂತಾಮಣಿ, ಪು.೧೧೪

೫೬. Tirumala Tirupathi Devasthanam Incription, Vol.I, No.192

೫೭. Mysore Arochological Report, 1916, P.60-61

೫೮. ರಮೇಶ್ ಕೆ.ವಿ., ಪೂರ್ವೋಕ್ತ, ಪು.೧೦೩

೫೯. SII, Vol.VII, No.296

೬೦. SII, IX, No.453

೬೧. SII, IX(ii), No.453, ಕ್ರಿ.ಶ.೧೪೫೦

೬೨. SII, IX(ii), No.455, ಕ್ರಿ.ಶ.೧೪೫೧

೬೩. SII, IX(ii), No.456, ಕ್ರಿ.ಶ.೧೪೫೧

೬೪. SII, IX(ii), No.459, ಕ್ರಿ.ಶ.೧೪೬೫

೬೫. SII, IX(ii), No.461, ಕ್ರಿ.ಶ.೧೪೬೭

೬೬. SII, IX(ii), No.464, ಕ್ರಿ.ಶ.೧೪೭೨

೬೭. SII, IX(ii), No.465, ಕ್ರಿ.ಶ.೧೪೭೨

೬೮. ಕರ್ನಾಟಕದ ಪರಂಪರೆ, ಪೂರ್ವೋಕ್ತ, ಪು.೩೧

೬೯. ಷೇಕ್ ಅಲಿ(ಸಂ), ಕರ್ನಾಟಕ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೫

೭೦. ಕರ್ನಾಟಕದ ಪರಂಪರೆ, ಪೂರ್ವೋಕ್ತ, ಪು.೩೧

೭೧. ಮಹೇಶ್ ಕೆ., ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೮

೭೨. ಸೂರ್ಯನಾಥ ಕಾಮತ್, ಕರ್ನಾಟಕದ ಇತಿಹಾಸ, ಪು.೧೨೨

೭೩. ಕವಿಶಾಸ ೩, ಹಂಪಿ, ಸಂ.೩೭, ಕ್ರಿ.ಶ.೧೫೧೦

೭೪. ಕರ್ನಾಟಕ ರಾಜ್ಯ ಗ್ಯಾಸೆಟಿಯರ್

೭೫. ಕರ್ನಾಟಕದ ಪರಂಪರೆ, ಪೂರ್ವೋಕ್ತ, ಪು.೩೨

೭೬. ಮಹೇಶ್ ಕೆ., ಪೂರ್ವೋಕ್ತ, ಪು.೧೯

೭೭. ಶ್ರೀಕೃಷ್ಣದೇವರಾಯನ ಕಾಲದ ಕರ್ನಾಟಕಾಂಧ್ರ ಸಾಹಿತ್ಯ ಸಮೀಕ್ಷೆ, ಪು.೭೦, ೭೧

೭೮. ರಮೇಶ್ ಕೆ.ವಿ., ಪೂರ್ವೋಕ್ತ, ಪು.೧೦೨

೭೯. ಬಸವರಾಜ ಕೆ.ಆರ್., ಹಿಸ್ಟರಿ ಅಂಡ್ ಕಲ್ಚರ್ ಆಫ್ ಕರ್ನಾಟಕ, ಪು.೧೫೫

೮೦. ಕನ್ನಡ ನಾಡಿನ ಚರಿತ್ರೆ, ಭಾಗ ೧, ಪು.೬೮

೮೧. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪು.೧೨೧

೮೨. Basavaraju K.R., History and Cultural of Karnataka, P.155

೮೩. ಕರ್ನಾಟಕ ರಾಜ್ಯ ಗ್ಯಾಜೆಟಿಯರ್ ಪು.೨೨೮

೮೪. ಸೂರ್ಯನಾಥ ಕಾಮತ್ ಪೂರ್ವೋಕ್ತ, ಪು.೧೨೨

೮೫. ಮಹೇಶ್ ಕೆ., ಪೂರ್ವೋಕ್ತ, ಪು.೨೧

೮೬. ಸದಾನಂದ ಕನವಳ್ಳಿ, ಪೂರ್ವೋಕ್ತ, ಪು.೨೦೧

೮೭. F.E.P. 340

೮೮. ಮಾರೀಚಿಪರಿಣಯಂ ಪೀಠಿಕೆ, ಪು.xxviii ಅವತಾರಿಕ ಪದ್ಯ ೬೬

೮೯. ಎ.ಕ.ಸಂ.೩(ಪ), ಮುನ್ನುಡಿ, ಪು.೧೧೬, ೧೧೭

೯೦. ಕರ್ಣಾಟಕ ಪರಂಪರೆ ಪೂರ್ವೋಕ್ತ, ಪು.೩೨

೯೧. ರಾಯವಾಚಕಮು ಪು.೫೮, ಪಂಕ್ತಿ ೧೬-೨೨

೯೨. ರಮೇಶ್ ಕೆ.ವಿ., ಪೂರ್ವೋಕ್ತ, ಪು.೮೦

೯೩. Report on the Incriptions of the T.T.D., by S.Subramanya Sastri, Madras 1930, P.172

೯೪. ಕೃಷ್ಣದೇವರಾಯ ವಿಜಯಂ, ಅಶ್ವಾಸ ೨, ಪದ್ಯಗಳು ೫೬-೬೮

೯೫. T.D.E.R., P.157-58, Subramanya Sastri

೯೬. Incriptions of Krishnadevaraya Time Vol.iii, No.67,72, 75

೯೭. SII, Vo.IV, No.254, 255

೯೮. E.I, Vol.XII, P.156

೯೯. ದೀಕ್ಷಿತ್ ಮತ್ತು ಇತರರು, ಕೃಷ್ಣದೇವರಾಯರ ಜೀವನ ಮತ್ತು ಸಾಧನೆಗಳು, ಪು.೩೯

೧೦೦. SII, IX, ii, No.80

೧೦೧. ದೀಕ್ಷಿತ್ ಮತ್ತು ಇತರರು, ಪೂರ್ವೋಕ್ತ, ಪು.೩೯

೧೦೨. Memories of BABAR, P.199

೧೦೩. ಕವಿಶಾಸಂ ೩, ಹಂಪಿ, ಸಂಖ್ಯೆ.೩೨೧, ಕ್ರಿ.ಶ.೧೫೧೦

೧೦೪. ಕವಿಶಾಸಂ ೩, ಹಂಪಿ, ಸಂಖ್ಯೆ.೮೧, ಕ್ರಿ.ಶ.೧೫೨೯

೧೦೫. EC.೩, ನಂಗೊ, ಸಂಖ್ಯೆ.೧೯೫, ರಂಗಾಪುರ, ಕ್ರಿ.ಶ.೧೫೧೩

೧೦೬. EC.೩, ನಂಗೊ, ಸಂಖ್ಯೆ ೨೪೮, ಕಾಹಳ್ಳಿ, ಕ್ರಿ.ಶ.೧೫೧೪

೧೦೭. SII XVI, No.53, ಕ್ರಿ.ಶ.೧೫೧೫

೧೦೮. EC IV, KP.11

೧೦೯. EC IV, NG.58

೧೧೦. SII IX(ii), No.530, ಕ್ರಿ.ಶ.೧೫೨೯

೧೧೧. SII IX(ii), No.539, ಕ್ರಿ.ಶ.೧೫೩೧

೧೧೨. SII IX(ii), No.553, ಕ್ರಿ.ಶ.೧೫೩೨

೧೧೩. SII IX(ii), No.565, ಕ್ರಿ.ಶ.೧೫೩೪

೧೧೪. SII IX(ii), No.593, ಕ್ರಿ.ಶ.೧೫೩೯

೧೧೫. K.I., Vol.III, No.77

೧೧೬. SII IX(ii), No.606, ಕ್ರಿ.ಶ.೧೫೩೪

೧೧೭. SII IX(ii), No.621, ಕ್ರಿ.ಶ.೧೫೪೬

೧೧೮. SII IX(ii), No.623, ಕ್ರಿ.ಶ.೧೫೪೭

೧೧೯. SII IX(ii), No.648, ಕ್ರಿ.ಶ.೧೫೫೨

೧೨೦. SII IX(ii), No.674, ಕ್ರಿ.ಶ.೧೫೬೨

# ವಿಜಯನಗರ ಕಾಲದ ಧಾರ್ಮಿಕ ಪರಿಸರ

## ಕರ್ನಾಟಕದ ಧರ್ಮಗಳು

ಚಿಂತನಾ ಪರವಾದ ಧರ್ಮವು ನಿರಂತರ ಅಧ್ಯಯನ ಶೀಲವಾದದ್ದು. ಧರ್ಮಕ್ಕೆ ಆದಿ ಅಂತ್ಯಗಳೆಂಬ ಮಿತಿ ಇಲ್ಲ. ಕಾಲದಿಂದ ಕಾಲಕ್ಕೆ ಜೀವನದ ವಿಕಾಸಗಳಿಗನುಗುಣವಾಗಿ ಧರ್ಮದ ಬಗೆಗಿನ ಅನಿಸಿಕೆಗಳು, ಕ್ರಿಯೆಗಳು ಬದಲಾಗುತ್ತಾ ಹೋಗುತ್ತವೆ. ಅದೇ ತೆರನಾಗಿ ಪ್ರದೇಶದಿಂದ ಪ್ರದೇಶಕ್ಕೆ ಧರ್ಮದ ಪರಿಕಲ್ಪನೆ ಬದಲಾವಣೆ ಹೊಂದುತ್ತದೆ. ವಿಶ್ವದ ಎಲ್ಲಾ ಕಡೆಯಲ್ಲೂ ಧರ್ಮವು ಒಂದೇ ತೆರನಾಗಿರುವುದಿಲ್ಲ. ಆಯಾ ಕಾಲ, ದೇಶಗಳಿಗನುಗುಣವಾಗಿ ಅದು ವಿವಿಧ ರೂಪಗಳನ್ನು ತಾಳುತ್ತದೆ. ಒಂದು ಪ್ರದೇಶದಲ್ಲಿ ಹುಟ್ಟಿದ ಧರ್ಮ ಕಾಲಾಂತರದಲ್ಲಿ ವಿಶ್ವದ ತುಂಬಾ ಪಸರಿಸಲೂಬಹುದು. ಯಾವುದು ಸಮಾಜಕ್ಕೆ ಧಾರಣ ಸಾಮರ್ಥವನ್ನು ನೀಡುತ್ತದೋ ಅದು ಧರ್ಮ. ಅಂದರೆ "ಧಾರಣಾದ್ದರ್ಯ ಇತ್ಯಾಹುಃ" ಎಂಬ ಹೇಳಿಕೆ ತುಂಬಾ ಅರ್ಥಪೂರ್ಣವಾದದ್ದು. ಭಾರತೀಯ ಧರ್ಮ ಶಾಸ್ತ್ರಕಾರರು ಧರ್ಮದ ಉಗಮ ಹಾಗೂ ಅಧಿಕಾರವು ಅಪೌರುಷೇಯವಾದ ವೇದಗಳಿಂದ ಸಿದ್ಧಿಸಿದೆ ಎಂದು ಪ್ರತಿಪಾದಿಸುತ್ತಾರೆ.[೧]

ಆದರೆ ಹರಪ್ಪಾ ನಾಗರಿಕತೆಯ ನಗರೀಕರಣದ ಕಾಲಕ್ಕಾಗಲೇ ಮತಧರ್ಮವು ಸಾಕಷ್ಟು ಪ್ರಭಾವ ಶಾಲಿಯಾದ ಸಾಮಾಜಿಕ ಸಂಸ್ಥೆಯಾಗಿದ್ದಿರಬೇಕು. ಆದ್ದರಿಂದ ಆ ಹರಪ್ಪ ನಾಗರೀಕತೆಯ ಜನ ಉತ್ಕೃಷ್ಟವಾದ ಜೀವನವನ್ನು ಹೊಂದಿದ್ದರು ಎಂಬುದಾದರೆ ಅವರು ಒಂದು ಧರ್ಮದ ಚೌಕಟ್ಟನ್ನು ಹೊಂದಿರಲೇಬೇಕು.[೨]

ರಿಲೀಜನ್ ಎಂಬ ಇಂಗ್ಲಿಶ್ ಪದಕ್ಕೆ ನಾವು ಧರ್ಮ ಎಂಬ ಪದವನ್ನು ಸಮಾನವಾಗಿ ಬಳಸುತ್ತೇವೆ. ರಿಲೀಜನ್ ಎಂಬ ಇಂಗ್ಲಿಶ್ ಪದ "ರಿಲಿಗೊ" ಎಂಬ "ಲ್ಯಾಟಿನ್ " ಶಬ್ದದಿಂದ ಬಂದಾಗಿದೆ. ಈ ಪದದ ಅರ್ಥ ಪೂಜ್ಯ ಅಥವಾ ಪವಿತ್ರವಾದದ್ದು. ಹೀಗೆ ಧರ್ಮ ಎಂಬ ಶಬ್ದ ಲ್ಯಾಟೀನ್ ನಿಂದ ಇಂಗ್ಲಿಷಿಗೆ ಬಂದಿದೆ. ಇಂಗ್ಲಿಷಿನ 'ರಿಲೀಜನ್ ' ಎಂಬ ಪದಕ್ಕೆ ಸಮನಾಗಿ ಸಂಸ್ಕೃತದಲ್ಲಿ "ಧರ್ಮ" ಎಂಬ ಶಬ್ದವನ್ನು ಬಳಸುತ್ತೇವೆ. ಧರ್ಮ ಎಂಬ ಪದವು ಸಂಸ್ಕೃತದ ಮೂಲ ಧಾತು. "ಧೃ" ದಿಂದ ಬಂದಿರುವುದು "ಧೃ" ಎಂದರೆ ಸಂಸ್ಕೃತದಲ್ಲಿ 'ಧರಿಸು' 'ಧಾರಣೆ ಮಾಡು' 'ಎತ್ತಿಹಿಡಿ' ಎಂಬ ಅರ್ಥವನ್ನು ನೀಡುತ್ತದೆ.[೩]

ಮಾನವನು ತನ್ನ ಸ್ವೇಚ್ಛಾಜೀವನವನ್ನು ಬದಿಗಿರಿಸಿ ತನ್ನ ಜೀವನಕ್ಕೆ ವ್ಯವಸ್ಥಿತವಾದ ಬದುಕು ಬೇಕು ಎಂದು ಅನಿಸಿತೋ ಆಗ ಅವನು ತನ್ನ ಜೀವನಕ್ಕೆ ಒಂದು ಚೌಕಟ್ಟನ್ನು ಹಾಕ ಬಯಸಿದನು. ಮಾನವ ತಾನು ನಿರ್ಮಿಸಿಕೊಂಡ ಆ ಚೌಕಟ್ಟೇ ಧರ್ಮವಾಯಿತು. ಪ್ರಾಚೀನ ಭಾರತವನ್ನು ಗಮನಿಸಿದಾಗ ಧರ್ಮ ಎಂಬುದು ಒಂದು ಜೀವನವಿಧಾನವೇ ಆಗಿದೆ. ಮನುಷ್ಯನ ಬದುಕಿನ ಮುಖ್ಯ ಕೇಂದ್ರವೇ ಧರ್ಮವಾಗಿತ್ತು. ಒಟ್ಟಿನಲ್ಲಿ ಮಾನವನ ಜೀವನದ ಅಗತ್ಯ ಮತ್ತು ವಿಕಸಿತ ಮಾನವನ ಬುದ್ಧಿಶಕ್ತಿಯ ಫಲವೇ ಧರ್ಮದ ಹುಟ್ಟಿಗೆ ಕಾರಣ.

ಆದುದರಿಂದ ಮನುಷ್ಯ ತಾನೇ ರೂಪಿಸಿಕೊಂಡ ಚೌಕಟ್ಟೇ ಧರ್ಮ. ಹಿಂದೂಗಳ ಚಿಂತನೆಯಲ್ಲಿ ಕಾನೂನು ಮತ್ತು ಧರ್ಮ ಎಂಬ ಎರಡು ಪದಗಳ ವಿಂಗಡನೆ ಇಲ್ಲ. ಈ ಎರಡೂ ಧರ್ಮ ಎಂಬ ಶಬ್ದದಲ್ಲೇ ಅಡಕವಾಗಿವೆ.[೪] ನ್ಯಾಯಕ್ಕೆ ಧರ್ಮವೇ ಆಧಾರ, ಆದರ್ಶ, ನೈತಿಕತೆ, ನ್ಯಾಯಗಳ ತಳಹದಿಯ ಮೇಲೆಯೇ ಮಾನವನು ತನ್ನ ಧರ್ಮವನ್ನು ರೂಪಿಸಿಕೊಂಡನು. ನಾಗರಿಕ ಸಮಾಜವು ಪ್ರಾರಂಭವಾದಾಗಿನಿಂದ ಅದರ ಆಗುಹೋಗುಗಳನ್ನು ನಿರ್ಧರಿಸುತ್ತಿದ್ದುದ್ದು ಧರ್ಮ. ಧರ್ಮದ ಮುಖ್ಯವಾದ ಕಲ್ಪನೆಯೆಂದರೆ ಒಟ್ಟಾಗಿ ಹಿಡಿಯುವುದೇ ಆಗಿದೆ. ಭಾರತೀಯ ಪ್ರಾಚೀನ ಧರ್ಮಗ್ರಂಥಗಳು ಇದೇ ಅರ್ಥದಲ್ಲಿ ಧರ್ಮ ಎಂಬ ಶಬ್ದ ಬಳಸಿದವು. ಆದ್ದರಿಂದಲೇ ಧರ್ಮ ಎಂದರೆ ವಿವಿಧ ಸಮಾಜ ವರ್ಗಗಳು ಸಮರಸದಿಂದ ಜೀವನ ನಿರ್ವಹಿಸಲು ಅನುವಾಗುವಂತಿದ್ದ ಕರ್ತವ್ಯ ಸಂಹಿತೆ.

ಭೂ ಪ್ರಪಂಚದಲ್ಲಿ ಜನಿಸಿದ ಒಬ್ಬೊಬ್ಬ ಮಾನವನ ಅಭಿರುಚಿಗಳು, ಸ್ವಾಭಾವ, ಜೀವನ, ರಚನೆ ಎಲ್ಲವೂ ಬೇರೆ ಬೇರೆಯಾದವುಗಳೇ. ಇದೇ ರೀತಿ ಮಾನವನ ಧರ್ಮಗಳು ಕೂಡ ಭಿನ್ನ ವಿಭಿನ್ನವಾಗಿರುವುದನ್ನು ನಾವು ಇಂದಿನ ಮತ್ತು ಹಿಂದಿನ ಸಮಾಜದಲ್ಲಿ ಕಾಣಬಹುದು. ಧರ್ಮದ ರೂಪಗಳು, ಆಚರಣೆಗಳು ವಿಭಿನ್ನವಾದರೂ ಇಡೀ ಪ್ರಪಂಚದಲ್ಲಿರುವ ಎಲ್ಲಾ ಧರ್ಮಗಳ ತಿರುಳು ಒಂದೇಯಾಗಿರುವುದಂತೂ ಸತ್ಯ.

ಭಾರತವು ಹಲವಾರು ಧರ್ಮಗಳ ನೆಲೆವೀಡು. ಇಲ್ಲಿ ಕಂಡುಬರುವ ಭಕ್ತಿ ದೇವತೋಪಾಸನೆ, ನೃತ್ಯ, ಸಂಗೀತ, ಶಿಲ್ಪಕಲೆ, ಚಿತ್ರ, ಸಾಹಿತ್ಯ, ಎಲ್ಲದಕ್ಕೂ ಉಗಮ ಸ್ಥಾನವಾಗಿರುವುದು ಧರ್ಮವೇ. ಧರ್ಮವು ಸಂಸ್ಕೃತಿಯ ವಾಹಕವೂ ಆಗಿರುವುದರಿಂದ ಅದರ ಮೂಲಕ ಜನ ಜೀವನದ ಬದುಕಿಗೆ ಸುಸಂಬದ್ಧವಾದ ನೆಲೆಗಟ್ಟನ್ನು ಧರ್ಮವು ಒದಗಿಸಿಕೊಡುತ್ತದೆ. ಧರ್ಮದ ಹಾದಿಯನ್ನು ಹಿಡಿದು ಹೊರಟ ಭಾರತದಲ್ಲಿ ಮೊದಲಿಗೆ ಆಧಾರ ದೊರೆಯುವುದು ಕ್ರಿಸ್ತಪೂರ್ವದ ಶಿಲಾಯುಗದ ಜನತೆಯಲ್ಲಿ. ಈ ಶಿಲಾಯುಗದ ಜನತೆಯಲ್ಲಿ ಧರ್ಮದ ಕಲ್ಪನೆಗಳು ಸ್ವಲ್ಪ ಮಟ್ಟಿಗೆ ನೆಲೆಗೊಂಡಿದ್ದನ್ನು ಇತಿಹಾಸದಿಂದ ತಿಳಿಯಬಹುದು.

ಉತ್ಖನನದಲ್ಲಿ ಕೆಲವು ಮೂರ್ತಿಗಳಿಂದ ಶಿಲಾಯುಗದ ಜನತೆಯಲ್ಲಿ ಧಾರ್ಮಿಕ ಕಲ್ಪನೆಗಳು ನೆಲೆಗೊಂಡಿದ್ದವು ಎಂಬುದಕ್ಕೆ ಸಾಕ್ಷಿಗಳು ದೊರಕುತ್ತವೆ. ಸಾವಳದ ಸಂಸ್ಕೃತಿಯಲ್ಲಿ ದೊರೆತ ಸುಮಾರು

ಮೂರು ಸೆಂಟಿಮೀಟರ್ ಎತ್ತರದ ವರ್ತುಲಾಕಾರದ ಧಾರ್ಮಿಕವೆನ್ನಬಹುದಾದ ಲಿಂಗಾಕೃತಿಯು ಅಂದಿನ ಧಾರ್ಮಿಕ ಪರಿಸರವನ್ನು ಸಾಕ್ಷೀಕರಿಸುತ್ತದೆ. ಅಲ್ಲದೆ ಸುಮಾರು ಕ್ರಿಸ್ತಪೂರ್ವ ೩೨೫೦-೨೭೫೦ರ ಮೊಹೆಂಜೊದಾರೋಗಳ ಸಂಸ್ಕೃತಿಯಲ್ಲಿ ದೊರೆತ ಮಣ್ಣಿನ ಪ್ರಣಾಳಪೀಠ ಸಹಿತವಾದ ಶಿವಲಿಂಗ ಮತ್ತು ಕೊಂಬುಗಳುಳ್ಳ ಮೂರ್ತಿ ದೊರೆತಿದೆ. ಕೊಂಬುಗಳುಳ್ಳ ಮೂರ್ತಿಯನ್ನು 'ಪಶು ಪತಿಯ' ವಿಗ್ರಹವಿರಬಹುದೆಂದು ಸರ್ ಜಾನ್ ಮಾರ್ಷಲ್ ಅಭಿಪ್ರಾಯಪಡುತ್ತಾರೆ.[೫] ಅಂದರೆ ಹರಪ್ಪಾ ಸಂಸ್ಕೃತಿಯಲ್ಲಿ ಶಿವನನ್ನು ಆರಾಧಿಸುವ ಜನ ಸಮುದಾಯಅಸ್ತಿತ್ವದಲ್ಲಿತ್ತು ಎಂಬುದನ್ನು ಇದು ಸಾಬೀತು ಪಡಿಸುತ್ತದೆ.

ನಂತರದಲ್ಲಿ ಆರ್ಯರು ಭಾರತವನ್ನು ಪ್ರವೇಶಿಸಿದರು. ಇವರು ಮೊದಲಿಗೆ ಪ್ರಕೃತಿಯನ್ನು ದೇವರುಗಳನ್ನು ಆರಾಧಿಸುತ್ತಿದ್ದರು. ಇವರ ಕಾಲದಲ್ಲೇ ವೇದಗಳು ಹುಟ್ಟಿದವು ಎಂದು ತಿಳಿದುಬರುವುದು. ಆದ್ದರಿಂದ ಹಿಂದೂ ಧರ್ಮದ ಉಗಮವನ್ನು ವೇದಗಳಲ್ಲಿ ಕಾಣಬಹುದು.[೬]

ವೇದಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಿಲ್ಲವಾದರೂ ಅದು ಕ್ರಿ.ಪೂ.ಸುಮಾರು ಹದಿನೈದುನೂರರ ಸುಮಾರಿನಲ್ಲಿ ರಚನೆಗೊಂಡಿರಬಹುದೆಂದು ಪ್ರಾಚ್ಯಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ವೇದಗಳಲ್ಲೇ ಅತೀ ಪ್ರಾಚೀನವಾದದ್ದು ಋಗ್ವೇದ. ಋಗ್ವೇದ ಸಂಹಿತೆಯು ಆರ್ಯರ ಮೊಟ್ಟಮೊದಲ ಸಾಹಿತ್ಯಕ ರಚನೆ. ಆದುದರಿಂದಲೇ ಅದು ಪ್ರಾಚೀನವಾದ ವೈದಿಕ ಸಂಸ್ಕೃತಿಯ ಪ್ರಮುಖ ಆಧಾರ ಸಾಮಾಗ್ರಿ.[೭] ವೇದಗಳಲ್ಲಿ ಮೊದಲಿಗೆ ಇಂದ್ರ, ವರುಣ, ಅಗ್ನಿ ಮೊದಲಾದ ಮುವತ್ತೂರು ದೇವತೆಗಳನ್ನು ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ. ಇದರಲ್ಲಿ ಸ್ವರ್ಗದ ದೇವತೆಗಳು, ಆಕಾಶದ ದೇವತೆಗಳು, ಮತ್ತು ಭೂಮಿಯ ದೇವತೆಗಳು ಎಂದು ಮೂರು ಗುಂಪುಗಳನ್ನು ಮಾಡಲಾಗುವುದು. ಪೃಥ್ವಿ, ಅಗ್ನಿ, ಸೋಮಗಳು ಭೂಲೋಕದ ದೇವರುಗಳು. ಇಂದ್ರ, ವಾಯು, ಮತ್ತು ಪರ್ಜನ್ಯ ದೇವರುಗಳು ಆಕಾಶದ ದೇವರುಗಳು. ವರುಣ, ಮಿತ್ರ, ಸವಿತೃಗಳು ಸ್ವರ್ಗದ ದೇವರುಗಳು ಎಂದು ವಿಭಾಗಿಸಿ ಪೂಜಿಸಲಾಗುತಿತ್ತು. ಇದನ್ನು ಗಮನಿಸಿದರೆ ಪುರುಷ ಪ್ರಧಾನವಾದ ಸಾಮಾಜಿಕ ವ್ಯವಸ್ಥೆ ಅಂದಿನ ಸಮಾಜದಲ್ಲಿತ್ತು. ಪುರುಷ ದೇವರುಗಳಿಗೆ ದೊರೆತ ಪ್ರಾಧಾನ್ಯತೆ ಹೆಣ್ಣು ದೇವತೆಗಳಿಗೆ ದೊರೆಯಲಿಲ್ಲ.[೮] ಆದರೆ ಋಗ್ವೇದದ ಜನರು ಪ್ರಕೃತಿಯಲ್ಲಿನ ಶಕ್ತಿಯನ್ನು ದೈವತ್ವದ ಕಲ್ಪನೆಯಲ್ಲಿ ಕಂಡರು. ಉತ್ತರ ವೇದಗಳ ಕಾಲದಲ್ಲಿ ಕ್ಲಿಷ್ಟವಾದ ಆಚರಣೆಯಿಂದ ಕೂಡಿದಾಗಿತ್ತು. ಇದು ವಿಸ್ತಾರವಾದ ಯಜ್ಞ ಯಾಗಾದಿಗಳಿಗೆ ಎಡೆ ಮಾಡಿಕೊಟ್ಟಿತ್ತು. ಆಗ ಋಗ್ವೇದ ಯುಗದ ಪ್ರಕೃತಿ ದೇವರುಗಳು ಪ್ರಾಮುಖ್ಯತೆಯನ್ನು ಕಳೆದುಕೊಂಡವು. ಋಗ್ವೇದ ನಂತರ ಕಾಲವಾದ ಉತ್ತರ ವೇದಗಳ ಕಾಲದಲ್ಲಿ ಹೊಸ ದೇವರುಗಳಾದ ರುದ್ರ, ವಿಷ್ಣುವಿನಂತಹ ಹೊಸ ದೇವರುಗಳು ಪ್ರಾಧಾನ್ಯತೆ ಪಡೆದುಕೊಂಡವು. ಉತ್ತರ ವೇದಗಳ ಕಾಲದ ಸಂಹಿತೆಗಳಲ್ಲಿ ಬ್ರಾಹ್ಮಣ ಸಾಹಿತ್ಯದಲ್ಲಿ ಯಜ್ಞಗಳು ಪ್ರಬಲ ಸ್ಥಾನಗಳಿಸಿದವು. ಉತ್ತರ ವೇದಗಳ ಕಾಲದಲ್ಲೇ ಹಿಂದೂ ಧರ್ಮದ

ಮೂಲ ತತ್ವಗಳೆಂದು ಒಪ್ಪಿಕೊಳ್ಳಲಾದ ಕರ್ಮ ಮಾಯೆ, ಉಪನಿಷತ್ ಎಂಬ ಸಾಹಿತ್ಯಗಳು ಮೊದಲ ಬಾರಿಗೆ ಕಾಣಿಸಿಕೊಂಡವು.

ಕರ್ನಾಟಕ ಅನೇಕ ಧರ್ಮಗಳ ನೆಲೆವೀಡು. ಕರ್ನಾಟಕದ ಸಂಸ್ಕೃತಿಯು ಎಲ್ಲಾ ಮುಖಗಳಲ್ಲೂ ಧರ್ಮವನ್ನು ಅಳವಡಿಸಿಕೊಂಡಿತು. ವೇದ, ಉಪನಿಷತ್ತುಗಳು, ಆಗಮಗಳು, ಸ್ಮೃತಿಗಳು, ಇತಿಹಾಸ, ಪುರಾಣಗಳು ನಿರೂಪಿಸಿದ ಮತ್ತು ರೂಪಿಸಿದ ಭಾರತೀಯ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿ ಕರ್ನಾಟಕ ಬೆಳೆದುಬಂದಿತು. ಭಾರತದಂತೆಯೇ ಕರ್ನಾಟಕವೂ ಕೂಡ ಧಾರ್ಮಿಕ ಸಂಸ್ಕೃತಿಯ ಹಿನ್ನೆಲೆಯಲ್ಲೇ ರೂಪಗೊಂಡಿತು. ಕರ್ನಾಟಕದ ಜನಜೀವನವನ್ನು ರೂಪಿಸುವಲ್ಲಿ ಪ್ರತಿಯೊಂದು ಧರ್ಮವು ತನ್ನದೇ ಆದ ರೀತಿಯಲ್ಲಿ ನೆರವಾಗಿದೆ.

ಕರ್ನಾಟಕದಲ್ಲಿ ಕಾಣುವ ಅತ್ಯಂತ ಪ್ರಾಚೀನವಾದ ಧರ್ಮವೆಂದರೆ ನಾಗಗಳ ಪೂಜೆ.[೯] ಇದು ಭಾರತದ ಎಲ್ಲಾ ಹಳ್ಳಿ ಪಟ್ಟಣಗಳಲ್ಲೂ ಕಂಡುಬರುತ್ತದೆ. ನಾಗಬಂಧ ಅಥವಾ ನಾಗರಕಲ್ಲು ಇಲ್ಲದಿರುವ ಹಳ್ಳಿ, ಪಟ್ಟಣ, ಕರ್ನಾಟಕದಲ್ಲಿ ಸಿಗುವುದೇ ಇಲ್ಲ. ಇಲ್ಲಿ ನಾಗಪೂಜೆ ಅಂದಿನಿಂದ ಇಂದಿಗೂ ಪ್ರಚಲಿತದಲ್ಲಿದೆ. ಈ ಹಿನ್ನೆಲೆಯಲ್ಲೇ ಪ್ರತಿಯೊಂದು ದೇವಸ್ಥಾನಗಳಲ್ಲೂ ನಾಗಶಿಲ್ಪ, ನಾಗರಕಲ್ಲುಗಳನ್ನು ಕರ್ನಾಟಕದಾದ್ಯಂತ ಕಾಣಬಹುದು. ನಾಗಗಳು ಒಂದು ಕಾಲದಲ್ಲಿ ಫಲವತ್ತತೆಯ ಸಂಕೇತವಾಗಿ ಕಾಣಿಸಿಕೊಂಡವು. ಈ ಪದ್ಧತಿ ಇಂದಿನವರೆಗೂ ಮುಂದುವರೆದುಕೊಂಡು ಬಂದಿದೆ. ಇಂದು ಕೂಡ ಈ ನಾಡಿನಲ್ಲಿ ನಾಗಗಳನ್ನು ಆರಾಧಿಸುವ "ನಾಗರಪಂಚಮಿ" ಎಂಬ ದೊಡ್ಡ ಹಬ್ಬವನ್ನೇ ಜನತೆ ಆಚರಿಸುತ್ತಾರೆ. ನಾಗಪೂಜೆಯ ಕರ್ನಾಟಕದ ಪುರಾತನ ಕಾಲದಿಂದ ಇಂದಿನವರೆಗೆ ತನ್ನ ಮಹತ್ವವನ್ನು ಉಳಿಸಿಕೊಂಡು ಬಂದಿದೆ. ಆದರೆ ನಾಗಪೂಜೆಯ ಒಂದು ವಿಶೇಷವೆಂದರೆ ಯಾವುದೇ ಒಂದು ಪಂಥಕ್ಕೆ ನಾಗಪೂಜೆ ಸೀಮಿತಗೊಂಡಿಲ್ಲ. ಇದು ಇಲ್ಲಿನ ಎಲ್ಲಾ ವರ್ಗದ ಎಲ್ಲಾ ಜನಾಂಗಗಳ ಆರಾಧ್ಯ ದೈವವಾಗಿ ಇಂದಿಗೂ ಕೂಡ ಉಳಿದುಕೊಂಡು ಬಂದಿದೆ.

ಲಿಖಿತ ದಾಖಲೆಗಳ ಇತಿಹಾಸ ಯುಗವು ಕರ್ನಾಟಕದಲ್ಲಿ ಮೌರ್ಯರೊಂದಿಗೆ ಆರಂಭವಾಗುತ್ತದೆ. ಚಂದ್ರಗುಪ್ತ ಮೌರ್ಯನು ಸಿಂಹಾಸನ ತ್ಯಜಿಸಿ ಗುರು ಭದ್ರಬಾಹುವಿನೊಂದಿಗೆ ಶ್ರವಣಬೆಳಗೊಳಕ್ಕೆ ಬಂದುದನ್ನು ಶ್ರವಣಬೆಳಗೊಳದ ಶಾಸನವು ನಿರೂಪಿಸುತ್ತದೆ.[೧೦] ಅಶೋಕನ ಕಾಲದ ಹತ್ತು ಶಾಸನಗಳು ಕರ್ನಾಟಕದಲ್ಲಿ ದೊರೆಯುತ್ತವೆ. ಇವು ಹೆಚ್ಚಾಗಿ ಮಧ್ಯಕರ್ನಾಟಕ ಮತ್ತು ಉತ್ತರಕರ್ನಾಟಕದಲ್ಲಿ ಕಂಡುಬರುತ್ತವೆ. ಅಂದರೆ ಕರ್ನಾಟಕವು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದನ್ನು ಶಾಸನಗಳಿಂದ ಊಹಿಸಬಹುದಾಗಿದೆ.[೧೧] ಅಶೋಕನ ಶಾಸನಗಳು ಬೌದ್ಧ ಧರ್ಮವನ್ನು ಕರ್ನಾಟಕದಲ್ಲಿ ಪ್ರಚಾರ ಮಾಡಿದ್ದನ್ನು ಕಾಣಬಹುದು.

ಶಾತವಾಹನರು ವೈದಿಕ ಧರ್ಮ ಅನುಯಾಯಿಗಳಾಗಿದ್ದರು. ಇವರು ಇಂದ್ರ, ಸೂರ್ಯ, ಬುದ್ಧ, ವಿಷ್ಣು, ವಾಸುದೇವ ಮತ್ತು ಗಣೇಶನ ಆರಾಧನೆಯನ್ನು ಮಾಡುತ್ತಿದ್ದರು. ಕರ್ನಾಟಕದ ಅತೀ ಪ್ರಾಚೀನವಾದ ತಾಳಗುಂದದ ಪ್ರಣವೇಶ್ವರ ದೇವಾಲಯವು ಶಾತವಾಹನರ ಕಾಲದ ರಚನೆಯಾಗಿದೆ.[೧೨] ಜೈನ, ಬೌದ್ಧ ಮತಗಳಿಗೂ ಇವರು ದಾನವನ್ನು ನೀಡಿದ್ದಾರೆ.

ಗಂಗರು ಕರ್ನಾಟಕದಲ್ಲಿ ಆಳ್ವಿಕೆ ಮಾಡುವಾಗ ಬೌದ್ಧ, ಜೈನ, ಶೈವ ಮೊದಲಾದ ಧರ್ಮಗಳು ಪ್ರಚಲಿತದಲ್ಲಿದ್ದವು. ತಲಕಾಡು ಮತ್ತು ಮಣ್ಣೆಗಳಲ್ಲಿ ಗಂಗರು ಅನೇಕ ಶಿವಾಲಯಗಳನ್ನು ಕಟ್ಟಿಸಿದರು. ಜೈನ ಸಂಪ್ರದಾಯಕ್ಕೂ ಗಂಗರೂ ಹೆಚ್ಚಿನ ಕೊಡುಗೆಯನ್ನು ಕೊಟ್ಟಿದ್ದಾರೆ. ಮಣ್ಣೆ, ಶ್ರವಣಬೆಳಗೊಳ, ಕಂಬದಹಳ್ಳಿಗಳಲ್ಲಿ ಜೈನ ಪೂಜಾಲಯಗಳು ಗಂಗರಿಂದ ದಾನ-ದತ್ತಿಗಳನ್ನು ಸ್ವೀಕರಿಸಿವೆ.[೧೩]

ಕ್ರಿ.ಶ.ಸು.೫೪೦ ರಿಂದ ವಿಶಾಲ ಕರ್ನಾಟಕದಲ್ಲಿ ಪರಮಾಧಿಕಾರಿಗಳಾಗಿ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರು. ಕರ್ನಾಟಕವನ್ನು ಮೊದಲ ಬಾರಿಗೆ ಏಕ ಆಡಳಿತದ ತೆಕ್ಕೆಗೆ ತಂದ ಶ್ರೇಯಸ್ಸು ಬಾದಾಮಿಯ ಚಾಲುಕ್ಯರಿಗೆ ಸಲ್ಲುತ್ತದೆ. ಯಜ್ಞ ಯಾಗಾದಿಗಳಲ್ಲಿ ನಂಬಿಕೆಯಿಟ್ಟಿದ್ದ ಚಾಳುಕ್ಯರು ವೈದಿಕ ಮತಸ್ಥರು. ವಿಷ್ಣು, ಶಿವ, ಕಾರ್ತಿಕೇಯ, ಗಣಪತಿ, ಶಕ್ತಿ, ಸೂರ್ಯ, ಸಪ್ತಮಾತೃಕೆಯರನ್ನು ಆರಾಧಿಸುತ್ತಿದ್ದರು. ಮೊದಲಿಗೆ ಚಾಳುಕ್ಯ ಅರಸರು ವೈಷ್ಣವ ಧರ್ಮ ಅನುಯಾಯಿಗಳಾಗಿದ್ದರು.[೧೪] ಮುಂದೆ ಶೈವಧರ್ಮಕ್ಕೆ ಹೆಚ್ಚು ಒಲವು ತೋರಿಸಿದರು.[೧೫] ದೇವಾಲಯಗಳ ನಿರ್ಮಾಣ ದೃಷ್ಟಿಯಿಂದ ಬಾದಾಮಿಯ ಚಾಲುಕ್ಯಯುಗ ಅತ್ಯಂತ ಶ್ರೇಷ್ಠವಾದದ್ದು, ಬಹು ರಚನಾತ್ಮಕ, ಕಲಾತ್ಮಕ ದೇವಾಲಯದ ರಚನೆ ಈ ಕಾಲದಲ್ಲಿ ಪ್ರಾರಂಭವಾಯಿತು. ಈ ಕಾಲದಲ್ಲಿ ಹೆಚ್ಚು ಪ್ರಚಲಿತವಿದ್ದ ಇನ್ನೊಂದು ಶೈವಶಾಖೆ ಎಂದರೆ ಲಾಕುಲ ಶೈವರದು. ಇವರು ಬಾದಾಮಿ ಚಾಲುಕ್ಯರ ಕಾಲದಲ್ಲಿ ಹೆಚ್ಚು ಕ್ರಿಯಾ ಶೀಲರಾಗಿದ್ದರು. ಈ ಕಾಲದ ಅನೇಕ ದೇವಾಲಯಗಳಲ್ಲಿ ಲಾಕುಲೇಶನ ಶಿಲ್ಪಗಳಿವೆ. ಒಂದಲ್ಲಾ ಒಂದು ರೂಪದಲ್ಲಿ ಲಾಕುಲ, ಕಾಳಾಮುಖ, ಮಹಾವ್ರತ, ಶೈವ, ಮೊದಲಾದ ಹಲವು ಶೈವ ಪಂಥಗಳು ಈ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು.[೧೬]

ಕ್ರೈಸ್ತ ಶಕ ಎಂಟನೆಯ ಶತಮಾನದ ಮಧ್ಯಭಾಗದಿಂದ ಆಳ್ವಿಕೆಗೆ ಬಂದ ರಾಷ್ಟ್ರಕೂಟರು ಇಡೀ ದಕ್ಷಿಣ ಭಾರತದ ಚಕ್ರವರ್ತಿಗಳಾಗಿದ್ದರು. ರಾಷ್ಟ್ರಕೂಟರ ಕಾಲದಲ್ಲೂ ವೈದಿಕ ಧರ್ಮ ಹೆಚ್ಚು ಪ್ರಚಲಿತದಲ್ಲಿತ್ತು. ಇವರು ಬಹುತೇಕ ಶಾಸನಗಳು ಶಿವ ಮತ್ತು ವಿಷ್ಣು ಸ್ತುತಿಯಿಂದ ಆರಂಭವಾಗುತ್ತವೆ. ವಾಸ್ತವವಾಗಿ ಸಾಂಸ್ಕೃತಿಕ ಕ್ಷೇತ್ರದಲ್ಲೂ ಜೈನರ ಉತ್ಕರ್ಷಗೊಂಡ ಕಾಲ ರಾಷ್ಟ್ರಕೂಟರದಾಗಿತ್ತು.

ಈ ಕಾಲದಲ್ಲಿ ಮುಸ್ಲಿಮರು ಭಾರತಕ್ಕೆ ಆಗಮಿಸಿ ಹಲವು ಭಾಗಗಳಲ್ಲಿ ನೆಲೆಗೊಂಡರು. ರಾಷ್ಟ್ರಕೂಟರು ಮುಸ್ಲಿಮರ ಪ್ರಾರ್ಥನಾ ಮಂದಿರಗಳನ್ನು ಕಟ್ಟಿಕೊಳ್ಳಲು ಅಪ್ಪಣೆ ಕೊಟ್ಟರು. ಮುಸ್ಲಿಂ ಧರ್ಮದವರಿಗೆ ನ್ಯಾಯ ವಿತರಣೆ ಮಾಡಲು ಮುಸ್ಲಿಂ ನ್ಯಾಯಾಧೀಶರನ್ನು ನೇಮಕ ಮಾಡಿಕೊಂಡರು.[೧೭] ಇದು

ರಾಷ್ಟ್ರಕೂಟ ದೊರೆಗಳ ಉದಾರತೆಯ ಪ್ರತೀಕವಾಗಿದೆ. ದೇವಸ್ಥಾನಗಳು. ರಾಷ್ಟ್ರಕೂಟರ ಕಾಲದಲ್ಲಿ ಆರಾಧನೆಯ ಕೇಂದ್ರಸ್ಥಾನವಾಗಿ ಪರಿಗಣಿಸಲ್ಪಟ್ಟವು. ಇದರಿಂದ ದೇವಸ್ಥಾನಗಳು ಸಾಕಷ್ಟು ಸಂಪತ್ತುಗಳಿಸಲು ಅವಕಾಶ ದೊರೆಯಿತು. ರಾಜರು ಮತ್ತು ಶ್ರೀಮಂತ ವರ್ಗವು ದೇವಸ್ಥಾನಕ್ಕೆ ದಾನದತ್ತಿಗಳನ್ನು ಹೇರಳವಾಗಿ ಸಲ್ಲಿಸುತ್ತಿದ್ದರು. ಹಾಗಾಗಿ ದೇವಸ್ಥಾನಗಳು ಆ ಕಾಲದಲ್ಲಿ ಸಂಪತ್ತಿನ ಆಗರಗಳಾಗಿ ಹೊರಹೊಮ್ಮಿದವು.

ಹತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಆಳ್ವಿಕೆಗೆ ಬಂದ ಕಲ್ಯಾಣಿ ಚಾಲುಕ್ಯರು ಮತ್ತು ಕಲಚುರಿಗಳು ವೈದಿಕ ಸಂಸ್ಕೃತಿಯ ಪೋಷಕರಾಗಿದ್ದರು. ಈ ಕಾಲದಲ್ಲಿ ಕಾಳಾಮುಖ ಪಾಶುಪತ ಎಂಬ ಶೈವಪಂಥವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಬಳ್ಳಿಗಾವೆಯ ಕೋಡಿಮಠವು ಕಾಳಾಮುಖರ ಮುಖ್ಯ ಕೇಂದ್ರವಾಗಿತ್ತು. ಚಾಳುಕ್ಯ ಅರಸರ ಆನಂತರದ ಕಳಚುರಿಗಳು ಬಹುಪಾಲು ಶೈವರೇ ಆಗಿದ್ದರು.[೧೭] ಈ ಕಾಲದಲ್ಲೇ ಶೈವಕ್ಕೆ ಶೀಘ್ರವೇ ವೀರಶೈವದ ಸವಾಲು ಎದುರಾಗಿ ಬಹಳಷ್ಟು ಶೈವರು ವೀರಶೈವರಾಗಿ ಮಾರ್ಪಟ್ಟರು.

ರಾಷ್ಟ್ರಕೂಟರ ಕಾಲದಲ್ಲಿ ಮೊದಲಿಗೆ ಜೈನದ ಪ್ರಭಾವವು ಹೆಚ್ಚಾಗಿತ್ತು. ನಂತರದಲ್ಲಿ ಜೈನರು ವೀರಶೈವರ ಸವಾಲನ್ನು ಎದುರಿಸಬೇಕಾಗಿತ್ತು. ಈ ಸಂದರ್ಭದಲ್ಲೆ 'ಜೈನ ಕೆಟ್ಟು ಬಣಜಿಗನಾದ' ಎಂಬ ಮಾತು ಹೆಚ್ಚು ಅನ್ವಯವಾದಂತೆ ತೋರುತ್ತದೆ.[೧೮] ಕಲಚುರಿಗಳ ಕಾಲದಲ್ಲಿ ವೀರಶೈವ ಪರಂಪರೆಗೆ ಸ್ಪಷ್ಟ ಕುರುಹುಗಳು ದೊರಕುತ್ತವೆ.

ಪಾಶುಪತ ಪ್ರಚಾರ ಮತ್ತು ಕಾಳಾಮುಖರ ವಿದ್ಯಾಪ್ರಚಾರ ಸಮ್ಮಿಳಿತ ಚಟುವಟಿಕೆಗಳು ವೀರಶೈವ ಮತದ ಉತ್ಕರ್ಷಕ್ಕೆ ತಕ್ಕವಾದ ಭೂಮಿಕೆಯನ್ನು ಸಿದ್ಧಪಡಿಸಿದವು. ಬಸವಣ್ಣನವರ ಭಗವದರ್ಪಿತ ಜೀವನ ಮತ್ತು ಸರಳ ಆಚರಣೆಗಳು ಎಲ್ಲಾ ಪಂಗಡಗಳ ಜನರನ್ನೂ ವೀರಶೈವ ಮತದ ಕಡೆಗೆ ವಾಲುವಂತೆ ಮಾಡಿದವು. ಕ್ರಿ.ಶ.೧೧೨೯ರ ಬಳ್ಳಿಗಾವಿ ಶಾಸನವು ಹೇಳುವಂತೆ ಹರಿ, ಹರ, ಬ್ರಹ್ಮ, ಜಿನ, ಬುದ್ಧ ಎಂಬ ಮತಗಳು ಸಾಮ್ರಾಜ್ಯದಲ್ಲಿ ಶೋಭಿಸುತ್ತಿದ್ದವು ಎಂದು ವರ್ಣಿಸಿದೆ. ಆ ಕಾಲದ ಧಾರ್ಮಿಕ ಸಾಮರಸ್ಯದ ಹೆಗ್ಗುರುತಾಗಿದೆ.[೧೯]

ಹನ್ನೆರಡನೆಯ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಹೊಯ್ಸಳರು ಬಹುಧರ್ಮೀಯ ಸಂಸ್ಕೃತಿಯ ಪೋಷಕರಾಗಿದ್ದರು. ಇವರು ಚಾಲುಕ್ಯ ಮತ್ತು ರಾಷ್ಟ್ರಕೂಟರಂತೆ ಹಲವಾರು ದೇವರುಗಳ ಆರಾಧಕರಾಗಿದ್ದರು. ಕ್ರಿ.ಶ.೧೧೦೨ರಲ್ಲಿ ಸಿಂಹಾಸನವೇರಿದ ಒಂದನೆಯ ಬಲ್ಲಾಳನು ಸೋವೂರಿಗೆ ಹೋಗುವ ಹಾದಿಯಲ್ಲಿ ಒಂದು ಶಿವಾಲಯಕ್ಕೆ ದಾನವನ್ನು ಹಾಕಿಕೊಟ್ಟಿದ್ದಾನೆ.[೨೦] ಕರ್ನಾಟಕದಲ್ಲಿ ವೇದ ಪ್ರಾಮಾಣ್ಯ ವನ್ನಂಗೀಕರಿಸಿದ ಸಂಪ್ರದಾಯಬದ್ದ ಶೈವವು, ಆಗಮಕ್ಕೆ ಮಾನ್ಯತೆಯಿತ್ತು, ಪಾಶುಪತ ಶೈವವೂ ಇದ್ದಿತ್ತು. ಸಕಲ

ಮಾನವರೂ ಸಮಾನರು ಎಂಬುದನ್ನು ಶರಣರು ಎತ್ತಿಹಿಡಿದಿದ್ದ ವೀರಶೈವ ಧರ್ಮವೂ ಈ ಕಾಲದಲ್ಲಿ ವಸಂತಮಾಸ ಕಂಡಿತ್ತು. ಜೈನಧರ್ಮ ಈ ಕಾಲದಲ್ಲಿ ಸುಸ್ಥಿತಿಯಲ್ಲಿತ್ತು. ವಿಷ್ಣುವರ್ಧನನು ಈ ಜೈನ ಧರ್ಮದಲ್ಲಿ ಮೊದಲಿಗೆ ಒಲವುಳ್ಳವನಾಗಿದ್ದನು. ತಮಿಳುನಾಡಿನಿಂದ ರಾಮಾನುಜರು ಕ್ರಿ.ಶ.೧೦೯೮ ರಿಂದ ೧೧೨೨ವರೆಗೆ ಕರ್ನಾಟಕದಲ್ಲಿದ್ದರು.[೨೧] ಇವರು ಹೊಯ್ಸಳ ವಿಷ್ಣುವರ್ಧನನನ್ನು ಶ್ರೀವೈಷ್ಣವ ಧರ್ಮಕ್ಕೆ ಒಲವು ಉಂಟಾಗುವಂತೆ ಮಾಡಿದ್ದರು.[೨೨] ಹೀಗೆ ಹೊಯ್ಸಳ ಸಾಮ್ರಾಜ್ಯ ಸರ್ವಧರ್ಮಗಳ ಬೀಡಾಯಿತು.

## ವಿಜಯನಗರ ಕಾಲದ ಧರ್ಮಗಳು

ವಿಜಯನಗರವು ಭಾರತದ ಎಲ್ಲಾ ರಾಜ್ಯವಂಶಗಳಂತೆ ಧಾರ್ಮಿಕ ಸಾಮಾರಸ್ಯಕ್ಕೆ ಹೆಸರಾದ ಸಾಮ್ರಾಜ್ಯ. ಈ ಹಿಂದೆ ಕರ್ನಾಟಕದ ಎಲ್ಲಾ ರಾಜವಂಶಗಳು ತೋರಿದ ಧಾರ್ಮಿಕ ಉದಾರತೆಯನ್ನು ವಿಜಯನಗರದ ಅರಸರು ಮುಂದುವರಿಸಿದರು. ಆ ಕಾರಣದಿಂದಲೇ ವಿಜಯನಗರ ಕಾಲದ ಧಾರ್ಮಿಕ ಪರಿಸರವನ್ನು ''ಕರ್ನಾಟಕ ಧರ್ಮ' ಎಂದು ಕರೆಯಲಾಗಿದೆ. ವಿಜಯನಗರ ಕಾಲದಲ್ಲಿ ಜೈನ, ಅದ್ವೈತ, ವಿಶಿಷ್ಟಾದ್ವೈತ, ಧರ್ಮ, ಪಂಥಗಳ ಜೊತೆಯಲ್ಲೇ ಶೈವ ಪಂಗಡಗಳಾದ ಅದ್ವೈತ, ಪಾಶುಪತ, ವೀರಶೈವ ಮತ ಪಂಗಡಗಳು ಅಸ್ತಿತ್ವದಲ್ಲಿದ್ದವು. ಇವು ಒಂದಕ್ಕೊಂದು ಹೊಂದಿಕೊಂಡು ಸಮಾಜದಲ್ಲಿ ಸಮರಸವಾಗಿ ಜನರು ಜೀವನ ನಡೆಸುವಂತೆ ಪೂರಕವಾಗಿ ಕೆಲಸ ಮಾಡುತ್ತಿದ್ದವು. ಭಾರತದಲ್ಲಿ ಕಂಡುಬರುವ ಅನೇಕ ಶೈವಕ್ಷೇತ್ರಗಳಲ್ಲಿ ಪಂಪಾಕ್ಷೇತ್ರವು ಒಂದು.[೨೩] ಶೈವಪಂಥದಲ್ಲಿ ವೀರಶೈವ ಪಂಥದ ಬೆಳವಣಿಗೆ ಈ ಕಾಲದಲ್ಲಿ ಪ್ರಾರಂಭವಾಯಿತು. ವೈಷ್ಣವ ಪಂಥದಲ್ಲಿ ಅತ್ಯುನ್ನತ ಸಾಹಿತ್ಯ ರಚನೆಗಳಾದ ದಾಸಸಾಹಿತ್ಯದ ಬೆಳವಣಿಗೆಯನ್ನು ಈ ಕಾಲದಲ್ಲಿ ಕಾಣಬಹುದು. ಹೀಗೆ, ವೀರಶೈವರಿಂದ ಶೈವ ಸಂಪ್ರದಾಯವೂ, ದಾಸರಿಂದ 'ದಾಸ ಸಾಹಿತ್ಯ' ಮತ್ತು ವೈಷ್ಣವ ಪರಂಪರೆಯು ಉತ್ಕೃಷ್ಟವಾಗಿ ಬೆಳವಣಿಗೆ ಹೊಂದಿದವು. ಈ ಎರಡೂ ಧರ್ಮಗಳ ಸಂಘರ್ಷ ನಡೆದುದು ವಿರಳವಾಗಿತ್ತು.

ಜೈನ ಧರ್ಮವು ಭಾರತದ ಇತಿಹಾಸದಲ್ಲಿ ತನ್ನದೇ ಆದ ಇತಿಹಾಸವನ್ನು ಹೊಂದಿದೆ, ವಿಜಯನಗರ ಕಾಲದಲ್ಲಿ ಜೈನ ಧರ್ಮವೂ ಒಂದು ಪ್ರಮುಖವಾದ ಧರ್ಮವಾಗಿತ್ತು. ಈ ಜೈನ ಧರ್ಮವು ಭಾರತದಲ್ಲಿ ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. ಆತ್ಮವು ತನ್ನ ಸಹಜ ಶುದ್ಧತೆಯನ್ನು ಮರಳಿ ಪಡೆದುಕೊಂಡು ಸೌಮ್ಯಜ್ಞಾನವನ್ನು ಪಡೆಯುವುದೇ ಜೀವನದ ಮುಖ್ಯ ಗುರಿ ಎಂದು ಜೈನ ಧರ್ಮವು ಹೇಳುತ್ತದೆ. ಆತ್ಮವು ಮೋಕ್ಷವನ್ನು ಪಡೆಯಬೇಕಾದರೆ ಪುಣ್ಯ-ಪಾಪಗಳೆರಡನ್ನೂ ಮೀರಿ ನಿಲ್ಲಬೇಕು. ಈ ಸ್ಥಿತಿಯನ್ನು ತಲುಪಬೇಕಾದರೆ ಮನುಷ್ಯನಿಗೆ ಕಠಿಣವಾದ ಸಾಧನೆ ಅವಶ್ಯ. ಜಿನನು ಮೋಕ್ಷವನ್ನು ಪಡೆಯಬೇಕಾದರೆ ಸಮ್ಯಾಗ್‌ಜ್ಞಾನ, ಸಮ್ಯಾಗ್‌ದರ್ಶನ್, ಸಮ್ಯಾಗ್‌ಚಾರಿತ್ರಗಳು ಪೋಷಕಗಳಾಗಿ ಬಂದಾಗ ಮೋಕ್ಷ ಅಥವಾ ನಿರ್ವಾಣವು ಲಭಿಸುತ್ತದೆ. ಈ ಮೂರನ್ನೂ ತ್ರಿರತ್ನಗಳೆಂದು ಕರೆಯುತ್ತಾರೆ. ಜೈನ

ಧರ್ಮದಲ್ಲಿ ಯೋಗಕ್ಕೆ ಪ್ರಮುಖ ಸ್ಥಾನವಿದೆ. ಈ ರೀತಿಯ ತತ್ವವನ್ನು ಹೊಂದಿದ ಜೈನಧರ್ಮ ಭಾರತದಲ್ಲಿ ಅಸ್ತಿತ್ವದಲ್ಲಿತ್ತು. ದಕ್ಷಿಣ ಭಾರತದಲ್ಲೂ ಜೈನಧರ್ಮ ಅಸ್ಥಿತ್ವದಲ್ಲಿತ್ತು. ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ.[೨೪] ಜೈನ ಧರ್ಮದಲ್ಲಿ ಇಪ್ಪತ್ತುನಾಲ್ಕು ತೀರ್ಥಂಕರರನ್ನು ಪೂಜಿಸುತ್ತಿದ್ದರು. ಇವರಲ್ಲಿ ಕೊನೆಯ ತೀರ್ಥಂಕರ ಮಹಾವೀರ, ಈತನು ಬುದ್ಧನ ಸಮಕಾಲೀನ. ಮಹಾವೀರನಿಗಿಂತಲೂ ಹಿಂದೆ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನು ಕ್ರಿಸ್ತಪೂರ್ವ ಎಂಟನೆಯ ಶತಮಾನದಲ್ಲಿ ಬಾಳಿ ಬದುಕಿದನು.[೨೫] ಮಹಾವೀರನ ನಂತರ ಈ ಧರ್ಮವು ದಿಗಂಬರ, ಶ್ವೇತಾಂಬರ ಎಂದು ಎರಡು ಪಂಗಡಗಳು ಉದಯಿಸಿದವು. ಮುಂದೆ ಕರ್ನಾಟಕದಲ್ಲಿ ಯಾಪನೀಯ ಪಂಥ ಉದಯಿಸಿತು.

ಕರ್ನಾಟಕದಲ್ಲಿ ಜೈನಧರ್ಮವು ಕ್ರಿ.ಪೂ.ಸು. ೩೦೦ರ ವೇಳೆಗೆ ನೆಲೆಗೊಂಡಿತು.[೨೬] ಭದ್ರಬಾಹು ಹಾಗೂ ಚಂದ್ರಗುಪ್ತ ಮೌರ್ಯರೊಡಗೂಡಿ ದಕ್ಷಿಣದ ಶ್ರವಣ ಬೆಳಗೊಳದಲ್ಲಿ ನೆಲೆಸಿದ ವಿಷಯವನ್ನೂ ಶ್ರವಣ ಬೆಳಗೊಳದ ಶಾಸನವು ತಿಳಿಸುತ್ತದೆ.[೨೭] ಕರ್ನಾಟಕದಲ್ಲಿ ಜೈನಧರ್ಮವೆಂದರೆ ಮುಖ್ಯವಾಗಿ ದಿಗಂಬರ ಸಂಪ್ರದಾಯದ ಜೈನಧರ್ಮವೆಂದೇ ಅರ್ಥ. ಶ್ವೇತಾಂಬರ ಪಂಥವು ಪ್ರಾಚೀನ ಕರ್ನಾಟಕದಲ್ಲಿ ಅಲ್ಪ ಸಂಖ್ಯೆಯಲ್ಲಿ ಇದ್ದರು. ಕ್ರಮೇಣವಾಗಿ ಶ್ವೇತಾಂಬರ ಪಂಥವು ಕರ್ನಾಟಕದಲ್ಲಿ ತನ್ನ ಅಸ್ತಿತ್ವವವನ್ನು ಕಳೆದುಕೊಂಡಿತು. ಜೈನಧರ್ಮವು ಶ್ರವಣಬೆಳಗೊಳ ಮತ್ತು ಕೊಪ್ಪಳಗಳಲ್ಲಿ ಹೆಚ್ಚಾಗಿ ನೆಲೆನಿಂತಿತು. ಕ್ರಿ.ಶ.ನಾಲ್ಕನೆಯ ಶತಮಾನದ ವೇಳೆಗೆ ಪಾಂಡ್ಯ, ಗಂಗ, ಚೋಳ, ಚೇರ ಮೊದಲಾದ ಅರಸರ ಅವಧಿಯಲ್ಲಿ ಜೈನಧರ್ಮ ಜನಪ್ರಿಯ ಧರ್ಮವಾಗಿತ್ತು.[೨೮] ಗಂಗರ ಕಾಲದಲ್ಲಿ ಚಾವುಂಡರಾಯನು ಕ್ರಿ.ಶ.೧೦೮೬ರಲ್ಲಿ ೫೮ ಅಡಿ ಎತ್ತರದ ಏಕಶಿಲಾ ಗೊಮ್ಮಟೇಶ್ವರ ವಿಗ್ರಹವನ್ನು ನಿರ್ಮಿಸಲಾಯಿತು. ಇದು ಜೈನಧರ್ಮಕ್ಕೆ ಅಂದಿನ ರಾಜರು ನೀಡಿದ ಉದಾರ ಪ್ರೋತ್ಸಾಹದ ಫಲವಾಗಿದೆ.

ಕ್ರಿ.ಪೂ.ದಿಂದ ಹಿಡಿದು ಕ್ರಿ.ಶ.ಹನ್ನೊಂದನೆಯ ಶತಮಾನದವರೆಗಿನ ಕಾಲವನ್ನು ಜೈನಧರ್ಮದ ಸಮೃದ್ಧಿಯ ಸುವರ್ಣಯುಗವೆನ್ನಬಹುದು. ಕ್ರಿ.ಶ. ಹನ್ನೊಂದನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಆಗಿ ಹೋದ ಧಾರ್ಮಿಕ ಬದಲಾವಣೆಯಿಂದ ಜೈನಧರ್ಮದ ಬೆಳವಣಿಗೆಗೆ ಸ್ವಲ್ಪ ಮಟ್ಟಿನ ಕುಂದುಂಟಾಯಿತು. ಇದರಿಂದ ರಾಜಕೀಯವಾಗಿ ಕರ್ನಾಟಕದಲ್ಲಿ ಹಲವಾರು ಏರು ಪೇರುಗಳು ಉಂಟಾದವು ಹನ್ನೊಂದನೆಯ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರು ಆಳ್ವಿಕೆ ನಡೆಸುತ್ತಿದ್ದರು. ಕಲ್ಯಾಣಿ ಚಾಲುಕ್ಯರು ಶೈವಧರ್ಮದ ಅನುಯಾಯಿಗಳಾದ ಕಾರಣ ಜೈನಧರ್ಮಕ್ಕೆ ದೊರೆಯುತ್ತಿದ್ದ ಪ್ರೋತ್ಸಾಹ ಕಡಿಮೆಯಾಯಿತು. ಹೊಯ್ಸಳರ ಕಾಲದಲ್ಲಿ ಮೊದಲಿಗೆ ಜೈನಧರ್ಮಕ್ಕೆ ಪ್ರೋತ್ಸಾಹ ನಂತರದ ದಿನಗಳಲ್ಲಿ ಕಂಡುಬರಲಿಲ್ಲ. ಮುಂಚೆ ಸಾಕಷ್ಟು ಪ್ರಚಲಿತದಲ್ಲಿದ್ದ ಜೈನಧರ್ಮವು ಹನ್ನೆರಡನೆಯ ಶತಮಾನದ ಹೊತ್ತಿಗೆ ತನ್ನ ಜನಪ್ರಿಯತೆಯನ್ನು ಕಳೆದುಕೊಂಡಿತು. ಆದರೆ ಜೈನರು ಕನ್ನಡ ಸಾಹಿತ್ಯಕ್ಕೆ ಮತ್ತು ಕರ್ನಾಟಕದ ಸಂಸ್ಕೃತಿಗೆ ಅಪಾರವಾದ ಕೊಡುಗೆ ನೀಡಿದ್ದಾರೆ. ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಕ್ಕೆ ಜೈನಧರ್ಮೀಯರ ಕೊಡುಗೆ ಅಪಾರ.

ವಿಜಯನಗರ ಕಾಲದಲ್ಲಿ ಜೈನಧರ್ಮದ ಜನಸಂಖ್ಯೆ ಕ್ಷೀಣಿಸಿತ್ತು. ಧರ್ಮದ ಚೌಕಟ್ಟಿಗೆ ಒಳಪಟ್ಟ ಜೈನ ಧರ್ಮೀಯರು ಜೈನ ಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಲು ಪ್ರಯತ್ನಿಸಿದರು. ವಿಜಯನಗರದ ಪ್ರಭುತ್ವವು ಎಲ್ಲಾ ಧರ್ಮೀಯರನ್ನು ಸಮಾನವಾಗಿ ಕಂಡರು. ಜೈನ ಧರ್ಮಕ್ಕೂ ಉದಾರವಾದ ಪ್ರೋತ್ಸಾಹವನ್ನು ದಾನ ದತ್ತಿಗಳನ್ನು ವಿಜಯನಗರದ ಅರಸರು ಒದಗಿಸಿದರು. ಈ ಕಾಲದಲ್ಲಿ ಉದ್ದಾಮ ಪಂಡಿತರು, ಸಾಹಿತಿಗಳು ದಂಡನಾಯಕರುಗಳು, ಜೈನ ಧರ್ಮೀಯರಾಗಿದ್ದರು. ಇರುಗಪ್ಪ, ದಂಡಿನಾಥ, ಮಧುರ, ನೇಮಿಚಂದ್ರ ಮತ್ತು ವಿದ್ಯಾನಂದ ಎಂಬ ಪ್ರಮುಖ ಜೈನ ಕವಿಗಳು ಆಗಿ ಹೋಗಿದ್ದಾರೆ.[೩೦] ಇವರು ಜೈನ ಸಾಹಿತ್ಯವನ್ನು ಮುಂದಿನ ತಲೆಮಾರಿಗೆ ಹೊತ್ತು ಒಯ್ದರು. ರತ್ನಾಕರವರ್ಣಿಯಂತೂ "ಭರತೇಶ ವೈಭವ" ಎಂಬ ಬೃಹತ್ ಕೃತಿಯನ್ನೇ ತನ್ನ ಮುಂದಿನ ತಲೆಮಾರಿಗೆ ನೀಡಿದ್ದನು. ಇದರಿಂದ ಜೈನಧರ್ಮ ಮತ್ತು ಸಾಹಿತ್ಯ ಹೆಚ್ಚು ಪುಷ್ಠಿಯಾಗಿ ಬೆಳೆಯಿತು.

ವಿಜಯನಗರ ಕಾಲದಲ್ಲಿ ಅನೇಕ ಸಾಮಂತರು ಅರಸರು ಜೈನ ಧರ್ಮವನ್ನು ಪ್ರೋತ್ಸಾಹಿಸಿ ಬೆಳೆಸಿದರು. ಈ ಸಾಮಂತ ಅರಸರು ಸ್ವತಃ ಜೈನ ಧರ್ಮೀಯರಾಗಿದ್ದರಲ್ಲದೇ ಜೈನ ಧರ್ಮಕ್ಕೆ ಉದಾರ ದಾನಗಳನ್ನು ನೀಡುವುದರ ಮುಖೇನ ಜೈನ ಧರ್ಮವನ್ನು ಬೆಳೆಸಿದರು. ಈ ಕಾಲದ ಪ್ರಮುಖ ಜೈನ ಮಾಂಡಲಿಕರೆಂದರೆ, ಕಾರ್ಕಳದ ಬೈರರಸರು, ಅಚೀಲರು, ಚೌಟರು, ಜೈನ ಧರ್ಮಕ್ಕೆ ಉದಾರ ಆಶ್ರಯ ದಾತರಾಗಿದ್ದರು.

ಒಂದನೆಯ ಬುಕ್ಕರಾಯನ ಕಾಲದಲ್ಲಿ ಜೈನಧರ್ಮಕ್ಕೆ ಉದಾರ ಆಶ್ರಯ ದೊರೆಯಿತು. ಈ ವಿಷಯಕ್ಕೆ ಕಲ್ಯ ಮತ್ತು ಶ್ರವಣಬೆಳಗೊಳದ ಶಾಸನಗಳೇ ಸಾಕ್ಷಿಯಾಗಿದೆ. ಕ್ರಿ.ಶ.೧೩೬೦ರಲ್ಲಿ ಹುಟ್ಟಿದ ಕಲ್ಯಾ ಶಾಸನ[೩೧] ಮತ್ತು ಸ್ವಲ್ಪ ಹೆಚ್ಚು ಕಡಿಮೆ ಇದೇ ಅವಧಿಯಲ್ಲಿ ಹುಟ್ಟಿದ ಶ್ರವಣಬೆಳಗೊಳದ[೩೨] ಶಾಸನಗಳು ಜೈನ ಮತ್ತು ಶ್ರೀವೈಷ್ಣವರ ನಡುವಿನ ಸಂಘರ್ಷವನ್ನು ತಿಳಿಸುತ್ತವೆ. ಈ ವಿಷಯವು ಗಂಭೀರ ಸ್ವರೂಪವನ್ನು ತಾಳಿದಾಗ ಬುಕ್ಕನು ಅವರಿಬ್ಬರ ನಾಯಕರನ್ನು ಕರೆಯಿಸಿ ಇಬ್ಬರನ್ನು ಪರಸ್ಪರ ರಾಜಿ ಮಾಡಿಸಿ ಜೈನ ಮತ್ತು ಶ್ರೀ ವೈಷ್ಣವ ಮತಗಳಲ್ಲಿ ಯಾವುದೇ ಭೇದವಿಲ್ಲವೆಂದು ಘೋಷಿಸಿದನು. ಈ ವಿಷಯವನ್ನು ಮೊದಲಿಗೆ ಕಲ್ಯಾ ಶಾಸನವು ತಿಳಿಸಿದರೆ ನಂತರ ಶ್ರವಣಬೆಳಗೊಳದ ಶಾಸನವು ತಿಳಿಸುತ್ತದೆ.[೩೩] ಈ ಶಾಸನವು ಜಾತ್ಯಾತೀತ ವಿಜಯನಗರದ ಅರಸರ ಗುಣವನ್ನು ತಿಳಿಸುತ್ತದೆ. ಇದು ಬಹುಸಂಖ್ಯಾತರು, ಅಲ್ಪಸಂಖ್ಯಾತರಾದ ನಾಗರಿಕರ ಹಿತ ಸಂಬಂಧಗಳ ಮೇಲೆ ಆಕ್ರಮಣ ನಡೆಸುವುದನ್ನು ನಿರ್ಬಂಧಿಸುವ ಒಂದು ಅತ್ಯಮೂಲ್ಯ ಶಾಸನವಾಗಿದೆ. ಇಲ್ಲಿ ವಿಜಯನಗರ ರಾಜರ ಧಾರ್ಮಿಕ ಸಮಾನತೆ ಅಭಿವ್ಯಕ್ತಗೊಳ್ಳುತ್ತದೆ.

ಎರಡನೆಯ ಹರಿಹರನು ತನ್ನ ರಾಜಧಾನಿಯಲ್ಲಿ ಕ್ರಿ.ಶ.೧೩೮೫ರಲ್ಲಿ ಜಿನಾಲಯವನ್ನು ನಿರ್ಮಿಸಿದನು.[೩೪] ಮೊದಲನೆಯ ದೇವರಾಯನು ಹಿಂದೂ ಧರ್ಮದವನಾದರೂ ಸರ್ವಧರ್ಮಗಳನ್ನು ಸಮಾನತೆಯಿಂದ

ಕಂಡನು. ಈತನು ಜೈನಧರ್ಮಕ್ಕೂ ಪ್ರೋತ್ಸಾಹ ನೀಡಿದನು. ಈತನ ಹೆಂಡತಿಯಾದ ಭೀಮಾದೇವಿಯು ಅಭಿನವ ಚಾರುಕೀರ್ತಿ ಪಂಡಿತಾರ್ಯರರ ಶಿಷ್ಯೆಯಾಗಿದ್ದಳು. ಈಕೆ ಮಾಗಾಯಿ ಎಂಬ ಬಸದಿಯನ್ನು ಶ್ರವಣ ಬೆಳಗೊಳದಲ್ಲಿ ನಿರ್ಮಿಸಿದಳು.[೩೫]

ಪ್ರೌಢದೇವರಾಯನೆಂದು ಪ್ರಸಿದ್ಧಿಯಾದ ಎರಡನೆಯ ದೇವರಾಯನು ತನ್ನ ರಾಜಧಾನಿಯಾದ ವಿಜಯನಗರದ ಪಾನ್ ಸುಪಾರಿ ಬಜಾರದಲ್ಲಿ ಸುಂದರವಾದ ಪಾರ್ಶ್ವನಾಥ ಜಿನಾಲಯವನ್ನು ನಿರ್ಮಿಸಿದನು. ಇದೇ ಕಾಲದಲ್ಲಿ ಉತ್ತಮ ಶೆಟ್ಟಿ ಎಂಬುವನು ಮೂಡಬಿದರಿಯ ಪಾರ್ಶ್ವನಾಥ ಬಸದಿಯ ದೀಪೋತ್ಸವಕ್ಕೆ ಉಂಬಳಿ ಹಾಕಿ ಕೊಟ್ಟನು.[೩೬] ಕಳಸದ ಪ್ರೌಢದೇವರಾಯನ ಸಾಮಂತ ಅಧಿಕಾರಿಯಾದ ವೀರಪಾಂಡ್ಯನು ಕಾರ್ಕಳದ ಸುಪ್ರಸಿದ್ಧ ಗೊಮ್ಮಟ ಮೂರ್ತಿಯನ್ನು ಪ್ರತಿಷ್ಠಾಪಿಸಿದನು. ಈತನು ಪ್ರೌಢದೇವರಾಯನನ್ನು ಕಾರ್ಕಳಕ್ಕೆ ಬರಮಾಡಿಕೊಂಡು ಗೊಮ್ಮಟನ ದರ್ಶನ ಮಾಡಿಸಿದನು.[೩೭]

ಮುಂದೆ ಆಳ್ವಿಕೆ ನಡೆಸಿದ ವಿಜಯನಗರದ ಅರಸರು ಇದೇ ತೆರನಾಗಿ ಜೈನಧರ್ಮಕ್ಕೆ ತಮ್ಮ ಸಹಾಯವನ್ನು ಮುಂದುವರೆಸಿದರು. ಇದರಿಂದ ವಿಜಯನಗರದ ಅರಸರ ಕಾಲದಲ್ಲಿ ಜೈನಧರ್ಮವು ಒಂದು ಗಟ್ಟಿ ನೆಲೆಯನ್ನು ಪಡೆದುಕೊಂಡಿತು. ಡಾ.ಶ್ರೀಕಂಠಯ್ಯನವರು ಅಭಿಪ್ರಾಯಪಟ್ಟಂತೆ "ನಾಲ್ಕು ವರ್ಣಗಳ ಒಂದು ಹಳೆಯ ಚೌಕಟ್ಟಿನ ಹೊರಗಿದ್ದರೂ ವಿಜಯನಗರದ ಇತಿಹಾಸದಲ್ಲಿ ಧರ್ಮ ಮತ್ತು ವ್ಯಾಪಾರಿ ಕ್ಷೇತ್ರದಲ್ಲಿ ಗಣನೀಯ ಪಾತ್ರವಹಿಸಿದ ಮತ್ತೊಂದು ವರ್ಗವೆಂದರೆ ಜೈನರದು. ವಿಜಯನಗರದ ಕಾಲದಲ್ಲಿ ಕರಾವಳಿ ಭಾಗದಲ್ಲಿ ೧೮೦ ಜೈನ ಧರ್ಮದ ಬಸದಿಗಳು ನಿರ್ಮಾಣಗೊಂಡವು.[೩೮]

ಇದರಲ್ಲಿ ಪ್ರಮುಖ ಬಸದಿಗಳು ಈ ಕೆಳಗಿನಂತೆ ಇವೆ.

೧. ಕಾರ್ಕಳದ ಆನೆ ಕೆರೆ ಬಸದಿ ಕ್ರಿ.ಶ.೧೫೪೫ರಲ್ಲಿ ನಿರ್ಮಾಣ.

೨. ಮುಂಜೇಶ್ವರದ ಚತುರ್ಮುಖಿ ಬಸದಿ

೩. ಮೂಡಬಿದರಿಯ ತ್ರಿಭುವನ ಚುಡಾಮಣಿ ಬಸದಿ ಕ್ರಿ.ಶ.೧೪೩೦ರಲ್ಲಿ ನಿರ್ಮಾಣ.

೪. ವೇಣೂರಿನ ಶಾಂತಿನಾಥ ಬಸದಿ ಕ್ರಿ.ಶ.೧೫೩೭ರಲ್ಲಿ ನಿರ್ಮಾಣ.

೫. ಮಲ್ಕಿಯ ಅನಂತನಾಥ ಬಸದಿ ಕ್ರಿ.ಶ.೧೪೫೨

೬. ಭಟ್ಕಳದ ಚಂದ್ರನಾಥನ ಬಸದಿ, ಕ್ರಿ.ಶ.೧೫೫೬

೭. ಹಾಡುವಳ್ಳಿಯ ಚಂದ್ರನಾಥ ಬಸದಿ, ಕ್ರಿ.ಶ.೧೪೮೪.

ಹೀಗೆ ಈ ಪ್ರಮುಖ ದಾಖಲೆಗಳು ವಿಜಯನಗರ ಅರಸರ ಧಾರ್ಮಿಕ ಸಹಿಷ್ಣುತಾ ಭಾವನೆಗಳನ್ನು ಪ್ರತಿಬಿಂಬಿಸುತ್ತವೆ.

ದ್ವೈತವು ಶ್ರೀವೈಷ್ಣವ ಮತ್ತು ವಿಶಿಷ್ಟಾದ್ವೈತದಂತೆ ವಿಷ್ಣು ಸರ್ವೋತ್ತಮತ್ವವನ್ನು ಬೋಧಿಸುತ್ತದೆ. ಕ್ರಿ.ಶ.೧೩ನೇ ಶತಮಾನದಲ್ಲಿ ಉಡುಪಿಯ ಹತ್ತಿರದ ಪಾಜಕ ಗ್ರಾಮದಲ್ಲಿ ಜನಿಸಿದ ಮದ್ವಾಚಾರ್ಯರು ದ್ವೈತ ಸಂಪ್ರದಾಯದ ಸ್ಥಾಪಕರು. ಶಂಕರನ ಮಾಯಾವಾದವನ್ನು ಇವರು ಖಂಡಿಸಿದರು. ಈ ವಿಶ್ವವು ಸತ್ಯವೆಂದು ಮಧ್ವಾಚಾರ್ಯರು ವಾದಿಸಿದರು. ದ್ವೈತ ತತ್ವವು ಕೂಡ ಅದ್ವೈತ್ಯ, ವಿಶಿಷ್ಟಾದ್ವೈತದಂತೆ ವೇದಾಂತ ದರ್ಶನವನ್ನೇ ಅವಲಂಬಿಸಿದೆ. ಬ್ರಹ್ಮನ ಜಿಜ್ಞಾಸೆ, ಮುಕ್ತಿಯ ಸಾಧನೆಗಾಗಿ ಹುಡುಕಾಟ ಇವು ದ್ವೈತ ಸಿದ್ಧಾಂತದ ತತ್ವಗಳು, ಅದ್ವೈತ, ವಿಶಿಷ್ಟಾದ್ವೈತಗಳಂತೆ ಒಂದೇ ಮೂಲದಿಂದ ಒಂದೇ ಗುರಿ ಯತ್ತ ಹೊರಟ ಈ ಪಂಥಗಳ ಮಾರ್ಗಗಳು ಬೇರೆ ಬೇರೆ ಈ ಮೂರು ತತ್ವಗಳು ಪ್ರಾಚೀನ ದರ್ಶನ ಶಾಸ್ತ್ರದಲ್ಲಿ ಬೀಜರೂಪದಲ್ಲಿದ್ದವು. ಶಂಕರ, ರಾಮಾನುಜ, ಮಧ್ವಾಚಾರ್ಯರು ತಮ್ಮ ಜ್ಞಾನ, ಪ್ರತಿಭೆಗಳಿಗೆ ತಕ್ಕಂತೆ ಇವುಗಳಿಗೆ ಜನಪ್ರಿಯತೆಯನ್ನು ತಂದುಕೊಟ್ಟರು.

ಪರಮಾತ್ಮನು ಸ್ವತಂತ್ರನು ಮತ್ತು ವಿಶ್ವವು ಪರತಂತ್ರವಾದದು, ಅದು ಬ್ರಹ್ಮ ನಿರ್ಮಿತವಾದದು. ಬ್ರಹ್ಮನೇ ಜನ್ಮ, ಜೀವನ ಸ್ಥಾನಮಾನ, ಜ್ಞಾನ, ಬಂಧನ, ಮುಕ್ತಿಗಳನ್ನು ನೀಡತಕ್ಕವನು. ಮಧ್ವರು ಪಂಚಭೇದಗಳ ತತ್ವಗಳನ್ನು ಮುಂದಿಟ್ಟರು. ಅವುಗಳೆಂದರೆ

೧. ಪರಮಾತ್ಮ ಹಾಗೂ ಜೀವಾತ್ಮರು ಬೇರೆ

೨. ಪರಮಾತ್ಮ ಮತ್ತು ಜಡವಸ್ತುಗಳು ಬೇರೆ.

೩. ಜೀವಾತ್ಮ ಮತ್ತು ಜಡವಸ್ತುಗಳು

೪. ಒಬ್ಬ ಜೀವ ಇನ್ನೊಬ್ಬ ದೇವರು

೫. ಒಂದು ಜಡ ಮತ್ತು ಇನ್ನೊಂದು ಚಲನೆ

ಇವುಗಳೆಲ್ಲದರಲ್ಲಿ ಭೇದವಿದೆ ಎಂಬುದೇ ಪಂಚಭೇದಗಳ ಕಲ್ಪನೆ.[೩೯]

ಮದ್ವರು ವಿಷ್ಣುವೇ ಸರ್ವೋತ್ತಮ ಎಂದು ಪ್ರಕಟಿಸಿದರು. ಅನ್ಯ ದೇವರುಗಳ ಆರಾಧನೆಯನ್ನು ಇವರು ವಿವರಿಸಲಿಲ್ಲ. ಇತರ ದೇವರುಗಳು ವಿಷ್ಣುವಿನ ಕೆಳಗಿನ ಹಂತದ ದೇವರು ಎಂದಷ್ಟೇ ಹೇಳಿದರು. ಭಕ್ತಿಯಿಂದ ಜೀವಾತ್ಮನು ಆತ್ಮೋನ್ನತಿಯನ್ನು ಸಾಧಿಸಿಕೊಳ್ಳಬೇಕೆಂದು ಮಧ್ವಾಚಾರ್ಯರರು ಹೇಳಿದ್ದಾರೆ. ಪ್ರಾಣವಾಯುವು ಜೀವಾತ್ಮರಲ್ಲಿ ಶ್ರೇಷ್ಠವಾದದ್ದು. ಪ್ರಾಣ ವಾಯುವಿನ ಮೂಲಕವೇ ಜೀವಾತ್ಮರು ಮುಕ್ತಿಯನ್ನು ಸಾಧಿಸಿಕೊಳ್ಳುವರೆಂದು ಮದ್ವರು ಹೇಳಿದ್ದಾರೆ.

ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ.[೪೦] ಆದುದರಿಂದ ಈ ಕಾಲಕ್ಕಾಗಲೇ ವೈಷ್ಣವ ಮತವು ಕರ್ನಾಟಕದಲ್ಲಿ ಬೇರು

ಬಿಟ್ಟಿರಬೇಕು. ಕ್ರಿ.ಶ.೫ನೇ ಶತಮಾನದ ಗುಡ್ನಾಪುರದ ಕದಂಬ ಶಾಸನವು ಕೂಡ ವಿಷ್ಣು ಸ್ತುತಿಯಿಂದ ಆರಂಭವಾಗಿದೆ.

ಈ ಶಾಸನಗಳನ್ನು ಗಮನಿಸಿದರೆ ಗಂಗವಾಡಿಯ ಮುಂಚಿನ ಕೆಲವು ಅರಸರು ವೈಷ್ಣವರೇ ಆಗಿದ್ದರೆಂದು ಹೇಳಬಹುದು. ಬಾದಾಮಿ ಚಾಲುಕ್ಯರ ಅರಸರಾದ ಮಂಗಳೇಶ್ವನು ಕ್ರಿ.ಶ.೫೭೮ರಲ್ಲಿ ಬಾದಾಮಿಯಲ್ಲಿ ವೈಷ್ಣವ ಗುಹಾಂತರ ದೇವಾಲಯವನ್ನು ನಿರ್ಮಿಸಿದನು. ಇದು ದಕ್ಷಿಣ ಭಾರತದ ಪ್ರಾಚೀನ ವೈಷ್ಣವ ಮಂದಿರ.[೪೧] ಹೀಗೆ ಕರ್ನಾಟಕದಲ್ಲಿ ಬೆಳೆದು ಬಂದ ಮಾಧ್ವಮತ ವಿಜಯನಗರ ಕಾಲದಲ್ಲಿ ಮುಂದುವರೆಯಿತು. ವಿಜಯನಗರದ ಸಂಗಮ ರಾಜವಂಶದ ಆಳ್ವಿಕೆಯಿಂದ ಹಿಡಿದು ಅರವೀಡು ವಂಶದವರೆಗೆ ವೈಷ್ಣವ ಧರ್ಮಕ್ಕೆ ಮತ್ತು ವೈಷ್ಣವ ದೇವಾಲಯಗಳಿಗೆ ದತ್ತಿ ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸಿವೆ.

ವಿಜಯನಗರದ ಆಳ್ವಿಕೆ ವೇಳೆಗಾಗಲೇ ಮಧ್ವಾಚಾರ್ಯರು ಈ ಸಂಪ್ರದಾಯಕ್ಕೆ ಹೊಸ ಚೇತನವನ್ನು ನೀಡಿದ್ದರು. ಮಧ್ವಾಚಾರ್ಯರರ ನಂತರ ದ್ವೈತಮತ ಪ್ರಸಾರ ಕಾರ್ಯವನ್ನು ಭರದಿಂದ ಮುಂದುವರಿಸಲಾಯಿತು. ಶ್ರೀ ಮಧ್ವಾಚಾರ್ಯರ ಶಿಷ್ಯರಾದ ಪದ್ಮನಾಭ ತೀರ್ಥ, ನರಹರಿ ತೀರ್ಥ, ಮಾಧವ ತೀರ್ಥ, ಅಕ್ಷೋಭ್ಯ ತೀರ್ಥರು ದ್ವೈತ ಮತವನ್ನು ಪ್ರಸಾರ ಮಾಡಿದರು. ನಂತರದಲ್ಲಿ ಅಕ್ಷೋಭ್ಯತೀರ್ಥರ ಶಿಷ್ಯರಾದ ಜಯತೀರ್ಥರು ಮಧ್ವರ ಸಿದ್ಧಾಂತವನ್ನು ಶಾಸ್ತ್ರೀಯವಾಗಿ ವ್ಯಾಖ್ಯಾನಿಸಿದರು.

ವಿಜಯನಗರದ ಪ್ರಥಮ ರಾಜವಂಶವು ಶೈವಸಂಪ್ರದಾಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಆದರೆ ಇವರು ದ್ವೈತ ಸಂಪ್ರದಾಯವನ್ನು ಕಡೆಗಣಿಸಲಿಲ್ಲ. ಸಂಗಮ ವಂಶದ ನಂತರ ಬಂದ ಸಾಳ್ವ, ತುಳುವ ಮತ್ತು ಅರವೀಡು ವಂಶದವರು ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದರು. ಇದರಿಂದಾಗಿ ವೈಷ್ಣವ ಧರ್ಮವು ಇಡೀ ಸಾಮ್ರಾಜ್ಯದ ತುಂಬೆಲ್ಲಾ ಪ್ರಸರಿಸಿತು.

ಕ್ರಿ.ಶ.೧೪೪೭ರಿಂದ ೧೫೩೯ರವರೆಗೆ ಜೀವಿಸಿದ್ದ ಶ್ರೀ ವ್ಯಾಸತೀರ್ಥರು ಸಾಳ್ವನರಸಿಂಹ, ವೀರ ನರಸಿಂಹ, ಕೃಷ್ಣದೇವರಾಯ ಹಾಗೂ ಅಚ್ಯುತದೇವರಾಯರಿಗೆ ರಾಜ ಗುರುಗಳಾಗಿದ್ದರು. ಶ್ರೀ ವ್ಯಾಸತೀರ್ಥರು ಉತ್ತರಪ್ರದೇಶ, ಬಂಗಾಳದವರೆಗೆ ದ್ವೈತಸಿದ್ಧಾಂತವನ್ನು ಪ್ರಚಾರಪಡಿಸಿದರು.[೪೨] ವ್ಯಾಸರಾಯರು ವಿಜಯನಗರದಲ್ಲಿ ದ್ವೈತ ಸಿದ್ಧಾಂತವನ್ನು ಪ್ರಚಾರ ಪಡಿಸಿದರು. ವ್ಯಾಸರಾಯರು ವಿಜಯನಗರದಲ್ಲಿ ಧರ್ಮಪ್ರಸಾರಕ್ಕಾಗಿ ಒಂದು ಶಿಷ್ಯ ಪರಂಪರೆಯನ್ನೇ ಸ್ಥಾಪಿಸಿದರು. ವಿಜಯೇಂದ್ರ ವಾದಿರಾಜ ಮತ್ತು ಪುರಂದರದಾಸರು ಬಹು ಪ್ರಖ್ಯಾತರಾದ ದ್ವೈತ ಪ್ರತಿಪಾದಕರಾಗಿದ್ದರು. ವ್ಯಾಸತೀರ್ಥರ ಮಠವು ವಿಜಯನಗರದ ದ್ವೈತ ಸಂಪ್ರದಾಯದ ವಿಶ್ವವಿದ್ಯಾನಿಲಯದಂತಿತ್ತು. ದೇಶದ ನಾನಾ ಭಾಗಗಳಿಂದ ಅಸಂಖ್ಯಾತ ಜ್ಞಾನಾರ್ಥಿಗಳು ಈ ಮಠಕ್ಕೆ ಭೇಟಿ ನೀಡುತ್ತಿದ್ದರು. ಮಧ್ವಾಚಾರ್ಯರರ ಶಿಷ್ಯರಾದ ನರಹರಿ

ತೀರ್ಥರು ಒರಿಸ್ಸಾದಲ್ಲಿ ಮಂತ್ರಿಯಾಗಿದ್ದರು. ಅಕ್ಷೋಭ್ಯತೀರ್ಥರು ಮತ್ತು ಪದ್ಮನಾಭ ತೀರ್ಥರು ಮಧ್ವ ಮಠಗಳ ಅಧಿಪತಿಗಳಾಗಿದ್ದರು. ಈ ಮೂರು ಮಾಧ್ವಯತಿಗಳ ವೃಂದಾವನಗಳು ಹಂಪೆಯಲ್ಲೇ ಇರುವುದೊಂದು ವಿಶೇಷ.

ವಿಜಯನಗರದಲ್ಲಿ ದಾಸಕೂಟ ಹಾಗೂ ವ್ಯಾಸಕೂಟ ಎಂಬ ಎರಡು ಪಂಥಗಳು ಬೆಳವಣಿಗೆ ಹೊಂದಿದವು. ಶ್ರೀ ಪಾದರಾಯರು, ವ್ಯಾಸರಾಯರು, ವಾದಿರಾಜರು, ರಾಘವೇಂದ್ರರಾಯರನ್ನೊಳಗೊಂಡ ಮಾಧ್ವಪಂಥದ ಈ ಅನುಯಾಯಿಗಳನ್ನು ವ್ಯಾಸಕೂಟವೆಂದು ಕರೆಯಲಾಗಿದೆ. ಪುರಂದರದಾಸ, ಕನಕದಾಸ, ವಿಜಯದಾಸ, ಜಗನ್ನಾಥದಾಸರೆಂಬ ಹರಿಭಕ್ತರಾದ ಇವರನ್ನು ದಾಸಕೂಟವೆಂದು ಕರೆಯಲಾಗಿದೆ.

ಸಂಗಮ ಮನೆತನದ ನಂತರದ ಅರಸು ಮನೆತನಗಳು ವಿಷ್ಣುವಿನ ಪಾರಮ್ಯ ಭಕ್ತರಾಗಿದ್ದರು. ಹರಿದಾಸ ಪರಂಪರೆಯ ಹುಟ್ಟು ವಿಜಯನಗರದ ಕಾಲದಲ್ಲಿನ ಸಮಾಜದಲ್ಲಿ ಸಾಮಂತ ಶಕ್ತಿಗಳು ಪ್ರಾಧಾನ್ಯ ಪಡೆದಿದ್ದ ಸಮಯಕ್ಕೆ ಹೊಂದಿಕೊಂಡಿತ್ತು. ವಿಜಯನಗರವು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ಪುರಂದರದಾಸರು ಉತ್ತಮ ಆಡಳಿತದ ಪೊಳ್ಳು ಹೇಳಿಕೆಯ ಬಗ್ಗೆ ಮಾತನಾಡಿದರು, ಕನಕದಾಸರು ರಾಜಭೋಗಗಳನ್ನು ಧಿಕ್ಕರಿಸಿದರು, ಯುದ್ಧಮತ್ತ ಪರಿಸ್ಥಿತಿಯಲ್ಲಿ ಮಾನವೀಯ ಮೌಲ್ಯಗಳ ಸಂದೇಶಗಳನ್ನು ಜನತೆಗೆ ಕೊಂಡೊಯ್ದರು.

ಈ ದಾಸಸಾಹಿತ್ಯದ ಪ್ರವಾಹಕ್ಕೆ ಮಾಧ್ವಸಿದ್ಧಾಂತ ತಲಕಾವೇರಿ ಇದ್ದಂತೆ. ಅಂದರೆ ಶ್ರೀ ಹರಿಯೇ ಸರ್ವೋತ್ತಮ, ಜಗತ್ತು ಪರಮಾರ್ಥಿಕ ಸತ್ಯ ಮತ್ತು ನಿತ್ಯ ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಸಾಧನೆ ಎಂಬ ಅಭಿಪ್ರಾಯವು ವಿಜಯನಗರದ ಮಾಧ್ವ ಸಂಪ್ರದಾಯದ ಪ್ರಮುಖ ಸಿದ್ಧಾಂತಗಳಾಗಿದ್ದವು.

ತಮಿಳುನಾಡಿನ ಶ್ರೀ ಪೆಂಬದೂರಿನಲ್ಲಿ ಜನಿಸಿದ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತ ಸಂಪ್ರದಾಯದ ಆದ್ಯಪ್ರವರ್ತಕರು. ಹನ್ನೆರಡನೆಯ ಶತಮಾನದ ಆದಿಯಲ್ಲಿ ರಾಮಾನುಜರು ಜನಿಸಿದ್ದರು. ಇವರು ಕೇರಳದ ಕುಲೋತ್ತುಂಗ ಚೋಳನ ಅಸಹಕಾರದಿಂದ ಕರ್ನಾಟಕದ ಹೊಯ್ಸಳ ಸಾಮ್ರಾಜ್ಯಕ್ಕೆ ಬಂದರು. ವಿಷ್ಣುವರ್ಧನು ರಾಮಾನುಜರಿಗೆ ಆಶ್ರಯ ನೀಡಿದನು. ರಾಮಾನುಜರು ಮೇಲುಕೋಟೆಯಲ್ಲಿ ಚಲುವ ನಾರಾಯಣಸ್ವಾಮಿ ದೇವಾಲಯ ನಿರ್ಮಾಣಕ್ಕೆ ಕಾರಣೀಭೂತರಾದರು. ಹೀಗೆ ಕರ್ನಾಟಕವನ್ನು ಪ್ರವೇಶಿಸಿದ ಶ್ರೀ ವೈಷ್ಣವ ಧರ್ಮವು ವಿಜಯನಗರ ಸಾಮ್ರಾಜ್ಯದಲ್ಲೂ ತನ್ನ ಅಸ್ಥಿತ್ವವನ್ನು ಪಡೆದುಕೊಂಡಿತ್ತು. ಮೊದಲಿಗೆ ಇದು ತಮಿಳು ನಾಡಿನ ಪನ್ನೀರಾಳ್ವರುಗಳ ಬೋಧನೆಗಳು ಶ್ರೀವೈಷ್ಣವ ಧರ್ಮದ ಮೇಲೆ ಪ್ರಭಾವ ಬೀರಿದ್ದವು. ವಿಷ್ಣುವಿನ ವಿವಿಧ ಅವತಾರಗಳನ್ನು ಶ್ರೀವೈಷ್ಣವರು ಪೂಜಿಸುತ್ತಾರೆ. ಮುಖ್ಯವಾಗಿ ಶ್ರೀದೇವಿ ಸಮೇತವಾದ ವಿಷ್ಣುವನ್ನು ಇವರು ಪೂಜಿಸುತ್ತಾರೆ.[೪೩] ಇದು ಇವರ ಸ್ತ್ರೀ ಪ್ರಾಮುಖ್ಯತೆಯ ಪ್ರತೀಕವಾಗಿದೆ. ವಿಜಯನಗರ ಕಾಲದಲ್ಲಿ ಶ್ರೀ ವೈಷ್ಣವ ಧರ್ಮವು ಹೆಚ್ಚಾಗಿ ಬೆಳೆಯಿತು. ವಿಜಯನಗರದ

ಮೊದಲ ರಾಜವಂಶವಾದ ಸಂಗಮವಂಶದಲ್ಲೇ ಶ್ರೀ ವೈಷ್ಣವ ಪಂಥದ ಬೇರುಗಳು ಬಲಗೊಂಡಿದ್ದವು ಮುಂದೆ. ಸಾಳುವ, ತುಳುವ, ಅರವೀಡುವಂಶದಲ್ಲಿ ಈ ಪಂಥ ಹೆಮ್ಮರವಾಗಿ ಬೆಳೆದು ನಿಂತಿತು.[೪೪] ಈ ಕಾಲದಲ್ಲಿ ಮೊದಲಿಗೆ ದೇವಾಲಯದ ಬಾಗಿಲ ಲಲಾಟ ಬಿಂಬದಲ್ಲಿ ಶಂಖಚಕ್ರಗಳಿಂದ ಕೂಡಿದ ಊರ್ಧ್ವ ಪುಂಡ್ರದ ಶಿಲ್ಪಗಳು ಕಂಡುಬರುವವು. ಅಲ್ಲದೆ ಊರ್ಧ್ವಪುಂಡ್ರವು ಶಾಸನಗಳ ಮೇಲ್ಭಾಗದಲ್ಲಿ ಮತ್ತು ದೇವಾಲಯಗಳ ಕಂಬಗಳ ಮೇಲೂ ಅಶ್ವಾರೋಹಿಗಳ ಹಣೆಯ ಮೇಲೂ ಕೂಡು ಇಂತಹ ನಾಮವು ಕಂಡುಬರುವುದು. ಕನಕಗಿರಿಯ ಕನಕಾಚಲ ದೇವಾಲಯ ಕಂಬಗಳ ಮೇಲೆ ತಿಮ್ಮಲಾಪುರದ ಶಿವ, ಗೋಪಾಲಕೃಷ್ಣ ದೇವಾಲಯದ ಕಂಬಗಳ ಮೇಲೆ ಈ ರೀತಿಯ ಊರ್ಧ್ವಪುಂಡ್ರ ರಚನೆಯನ್ನು ಕಾಣಬಹುದು.[೪೫]

ಕ್ರಿ.ಶ.೧೩೬೮ರ ಬುಕ್ಕರಾಯನ ಶಾಸನವು ಶ್ರೀವೈಷ್ಣವ ಧರ್ಮವನ್ನು ತಿಳಿಸುತ್ತದೆ.[೪೬] ಶ್ರೀವೈಷ್ಣವ ಧರ್ಮದ ಮುಖಂಡರು ಬ್ರಾಹ್ಮಣೇತರ ಜನರಿಗೂ ಶ್ರೀವೈಷ್ಣವ ದೀಕ್ಷೆಯನ್ನು ಕೊಡುತ್ತಾ ಈ ಧರ್ಮಕ್ಕೆ ಹೆಚ್ಚು ಜನಪ್ರಿಯತೆಯನ್ನು ತಂದುಕೊಟ್ಟರು. ಆಗ ಈ ಧರ್ಮವು ಹೆಚ್ಚಾಗಿ ಜನಸಾಮಾನ್ಯರ ಬೆಂಬಲವನ್ನು ಗಳಿಸಿತು.[೪೭] ಕೇವಲ ಮೇಲ್ವರ್ಗಕ್ಕಷ್ಟೆ ಸೀಮಿತವಾಗಿದ್ದ ಶ್ರೀವೈಷ್ಣವ ತತ್ವವು ಕೆಳವರ್ಗದ ಜನರನ್ನೂ ತಲುಪಲು ಈ ದೀಕ್ಷೆಯು ಬಹಳ ಸಹಾಯಕವಾಯಿತು. ಇದರಿಂದ ಶ್ರೀ ವೈಷ್ಣವರ ಸಂಖ್ಯೆ ವಿಜಯನಗರದಲ್ಲಿ ಹೆಚ್ಚಾಯಿತು. ಈ ಜನ ಸಂಖ್ಯೆಯ ಹೆಚ್ಚಳವು ಅನೇಕ ಶ್ರೀವೈಷ್ಣವರ ದೇವಾಲಯ ನಿರ್ಮಾಣಕ್ಕೆ ಕಾರಣವಾಯಿತು. ವಿಷ್ಣುವಿನ ನಾನಾ ರೂಪಗಳಾದ ಶ್ರೀರಂಗನಾಥ ವೆಂಕಟೇಶ, ವೇಣುಗೋಪಾಲ ಅನಂತಶಯನ ದೇವರ ದೇವಾಲಯಗಳು ಅತ್ಯಂತ ಜನಪ್ರಿಯವಾದವು. ಶ್ರೀವೈಷ್ಣವರು ವಿಷ್ಣುವಿನ ಆರಾಧನೆಯ ಜೊತೆಯಲ್ಲೇ ವಿಷ್ಣುಭಕ್ತರಾದ ಆಳ್ವಾರುಗಳನ್ನು ಆರಾಧಿಸುವುದು ಈ ಕಾಲದಲ್ಲಿ ಸರ್ವೇಸಾಮಾನ್ಯವಾಗಿತ್ತು. ಆನೆಗುಂದಿಯ ಗವಿರಂಗನಾಥ, ತಿಮ್ಮಲಾಪುರದ ವೇಣುಗೋಪಾಲ ದೇವಾಲಯಗಳಲ್ಲಿ ಆಳ್ವಾರುಗಳ ದುಂಡುಶಿಲ್ಪಗಳನ್ನು ಕಾಣಬಹುದು. ದೇವಾಲಯದ ಕಂಬಗಳ ಮೇಲೆ ಆಳ್ವಾರರ ಮೂರ್ತಿಗಳನ್ನು ಕಾಣಬಹುದು. ಶ್ರೀ ವೈಷ್ಣವ ಸಂಪ್ರದಾಯದ ಬೆಳವಣಿಗೆಗೆ ಆಳ್ವಾರರೇ ಮುಖ್ಯ ಕಾರಣೀಪುರುಷರು, ಮುಖ್ಯವಾಗಿ ತಮಿಳುನಾಡಿನಲ್ಲಿ ೧೨ ಜನ ಆಳ್ವಾರರು ಆಗಿ ಹೋಗಿದ್ದಾರೆ. ಕ್ರಿ.ಶ.೫ನೇ ಶತಮಾನದಿಂದ ೮ನೇ ಶತಮಾನದವರೆಗೆ ಆಳ್ವರರ ಸಂಪ್ರದಾಯವು ತಮಿಳುನಾಡಿನಲ್ಲಿ ಹೆಚ್ಚು ಪ್ರಚಲಿತದಲ್ಲಿತ್ತು.[೪೮] ಆಳ್ವಾರರು ತಮಿಳು ಭಾಷೆಯಲ್ಲಿ ದೇವರ ಮೇಲಿನ ಭಕ್ತಿ ಪೂರ್ಣವಾದ ಪದ್ಯಗಳನ್ನು ಹಾಡಿ ಜನರಲ್ಲಿ ವಿಷ್ಣುಭಕ್ತಿಯನ್ನು ಪ್ರಸಾರ ಮಾಡಿದರು. ಈ ಹಾಡುಗಳಿಗೆ ಪ್ರಬಂಧಗಳು ಎಂದು ಕರೆಯಲಾಗಿದೆ. ಸುಮಾರು ೪೦೦೦ ಪ್ರಬಂಧಗಳು ಆ ಕಾಲದಲ್ಲಿ ರಚನೆಗೊಂಡವು. ಪ್ರಬಂಧಗಳ ಈ ಗ್ರಂಥಕ್ಕೆ ವೈಷ್ಣವವೇದವೆಂಬ ಪರ್ಯಾಯ ಹೆಸರಿದೆ. ಶ್ರೀ ವೈಷ್ಣವ ಸಂಪ್ರದಾಯದ ಬೆಳವಣಿಗೆಗೆ ಆಳ್ವಾರರ ಪ್ರಬಂಧಗಳು ಬಹಳ ಸಹಾಯ ಮಾಡಿದವು. ಶ್ರೀ ವೈಷ್ಣವರ ದೇವಾಲಯಗಳಲ್ಲಿ ಪೂಜಾ

ಸಮಯದಲ್ಲಿ ಈ ಪ್ರಬಂಧಗಳನ್ನು ಹಾಡುವ ಪರಿಪಾಠ ರೂಢಿಯಲ್ಲಿದೆ. ಶ್ರೀವೈಷ್ಣವ ಮತವನ್ನು ಪ್ರಚುರಪಡಿಸಲು ಮುಂಚೂಣಿಯಲ್ಲಿದ್ದ ಈ ಆಳ್ವಾರರ ಪ್ರತಿಮೆಗಳನ್ನು ವಿಜಯನಗರದ ಶ್ರೀವೈಷ್ಣವ ದೇವಾಲಯಗಳಲ್ಲಿ ಇಟ್ಟು ಪೂಜಿಸುವ ಸಂಪ್ರದಾಯವು ಹೆಚ್ಚು ಪ್ರಚಾರ ಪಡೆದುಕೊಂಡಿತು.

ಶ್ರೀರಂಗ ಪಟ್ಟಣದ ಶ್ರೀರಂಗನಾಥದೇವಾಲಯ, ಹಂಪೆಯ ಕೃಷ್ಣ ಮತ್ತು ವಿಜಯವಿಠಲ ದೇವಾಲಯ, ಅನಂತಶಯನ ಗುಡಿಯ ಅನಂತ ಪದ್ಮನಾಭ ದೇವಾಲಯಗಳು ವಿಜಯನಗರ ಕಾಲದಲ್ಲಿ ರಚನೆಗೊಂಡ ಪ್ರಮುಖ ಶ್ರೀವೈಷ್ಣವ ದೇವಾಲಯಗಳಾಗಿವೆ.

049027

## ವಿಜಯನಗರ ಕಾಲದ ಶೈವ ಪರಿಸರ

ವಿಜಯನಗರ ಸಾಮ್ರಾಜ್ಯವು ಭಿನ್ನ ಭಿನ್ನ ಮತಗಳ ಮಹಾ ಸಮ್ಮೇಳನವೇ ಆಗಿತ್ತು. ಧರ್ಮ ಎಂಬ ಪದವನ್ನು ವಿಜಯನಗರದ ಅರಸರು ಬಹು ವಿಶಾಲವಾದ ಅರ್ಥದಲ್ಲಿ ಗ್ರಹಿಸಿರುವುದು ಕಂಡುಬರುತ್ತದೆ. ಈ ಅರಸರು ವರ್ಣಾಶ್ರಮ ಧರ್ಮದ ಪರಿಪಾಲಕರಾಗಿದ್ದರು. ದ್ವೈತ, ಶ್ರೀವೈಷ್ಣವ ಜೈನ ಪಂಥಗಳ ಜೊತೆಯಲ್ಲಿ ಇನ್ನೊಂದು ಪ್ರಭಲವಾದ ಮತವೆಂದರೆ ಶೈವ ಮತ. ಶೈವ ಪರಂಪರೆಯು ವಿಜಯನಗರದ ಸಾಮ್ರಾಜ್ಯದ ತುಂಬ ಪಸರಿಸಿತ್ತು. ಈ ಶೈವ ಪರಂಪರೆಯಲ್ಲಿ ಅದ್ವೈತ, ಪಾಶುಪತ, ಕಾಳಾಮುಖ ವೀರಶೈವ ಸೇರಿಕೊಂಡಿವೆ. ಶಿವಪಾರಮ್ಯವಾದ ಈ ಧರ್ಮಗಳಿಗಾಗಿ ಅನೇಕ ದೇವಾಲಯಗಳು ವಿಜಯನಗರ ಸಾಮ್ರಾಜ್ಯದಲ್ಲಿ ನಿರ್ಮಾಣಗೊಂಡವು.

ಭಾರತದಲ್ಲಿ ಶೈವ ಧರ್ಮವು ಅತೀ ಪ್ರಾಚೀನವಾದ ಧರ್ಮ. ಶಿವನನ್ನು ಆರಾಧಿಸುವ ಈ ಶೈವ ಪಂಥದ ಇತಿಹಾಸವು ವೇದಕ್ಕಿಂತಲೂ ಹಿಂದಕ್ಕೆ ಹೋಗುತ್ತದೆ. ಸುಮಾರು ಕ್ರಿಸ್ತ ಪೂರ್ವ ಮೂರು ಸಾವಿರ ವರ್ಷಗಳ ಹಿಂದಿನ ಹರಪ್ಪಾ ಮೊಹೆಂಜೊಂದಾರೋ ಉತ್ಖನನದಲ್ಲಿ ದೊರೆತ ಪಳೆಯುಳಿಕೆಗಳು ಶೈವ ಧರ್ಮದ ಇತಿಹಾಸವನ್ನು ಮತ್ತಷ್ಟು ಹಿಂದಕ್ಕೆ ತಳ್ಳುತ್ತವೆ. ಇಲ್ಲಿ ಕೊಂಬುಗಳಿರುವ ದೇವತೆಯ ಚಿತ್ರವಿರುವ ಲಿಂಗಗಳೂ ದೊರೆತಿವೆ. ಇವುಗಳು ಶೈವ ಧರ್ಮದ ಕುರುಹುಗಳೆಂದು ಸರ್ ಜಾನ್ ಮಾರ್ಷಲ್ ಅಭಿಪ್ರಾಯಪಡುತ್ತಾರೆ.[೪೯]

'ಹಂಸನಾದ' ಗ್ರಂಥಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹರಪ್ಪಾ ಮೆಹೆಂಜದಾರೋ ಸಂಸ್ಕೃತಿಯಲ್ಲಿ ನಂತರ ಬಂದ ಋಗ್ವೇದದಲ್ಲಿ ಪಶುಪತಿಯು ರುದ್ರನೆಂದು ಪೂಜೆಗೊಳ್ಳುತ್ತಾನೆ. ವೇದದ ಈಚೀನ ಭಾಗಗಳಲ್ಲಿ ರುದ್ರನಿಗೆ "ಶಿವ" ಒಂದು ವಿಶಿಷ್ಟ ವಿಶೇಷಣವಾಗಿ ಪರಿಣಮಿಸಿ ಬಿಡುತ್ತದೆ.[೫೦] ಋಗ್ವೇದದ ಕಾಲದಿಂದ ಈಚೆಗೆ ಯಜುರ್ವೇದ ಕಾಲಕ್ಕೆ ರುದ್ರನೇ ಶಿವನ ರೂಪ ಪಡೆದು ಶೈವರ ಅಧಿದೇವತೆಯಾದನೆಂದು ತಿಳಿಯುತ್ತದೆ. ಯಜುರ್ ವೇದದಲ್ಲಿ ಶಿವನ ಉಲ್ಲೇಖ ಹಲವು ಕಡೆ ಬಂದಿದೆ. ಶಿವನ ಪರ್ಯಾಯ ನಾಮಗಳಾದ ಶಂಕರ, ಮಹಾದೇವ ಎಂಬ ಹೆಸರುಗಳು ಬಂದಿವೆ.[೫೧]

ಮುಂದೆ ಶಿವನ ಹೆಸರೇ ‘ಹರ’ ಎಂದು ರೂಪಾಂತರಗೊಂಡಿತು. ಈ ಶೈವ ಧರ್ಮದ ಇತಿಹಾಸ ತತ್ವಗಳನ್ನು ಇಪ್ಪತ್ತೆಂಟು ಶೈವಾಗಮಗಳು ತಿಳಿಸುತ್ತವೆ. ಇವುಗಳನ್ನು ಶೈವ ಮತದ ಆಧಾರ ಗ್ರಂಥಗಳೆಂದು ಕರೆಯುತ್ತಾರೆ. ಶಿಲ್ಪ, ವಾಸ್ತುಶಿಲ್ಪ, ಕಲೆಗಳ ಉಗಮ ಸ್ಥಾನವೆಂದರೆ ಶಿವಾಗಮಗಳೇ ಆಗಿವೆ.[೫೨] ಶೈವ ಮತದ ಅನುಯಾಯಿಗಳು ಶಿವನನ್ನು ಲಿಂಗ ರೂಪದಿಂದ ಪೂಜಿಸುವುದು ಬಹು ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿದೆ. ಶಿವನನ್ನು ಪೂಜಿಸುವ ಆರಾಧಿಸುವ ಕ್ರಿಯೆಯ ಮೇಲೆ ಈ ಶೈವ ಮತಗಳಲ್ಲಿ ಅನೇಕ ಗುಂಪುಗಳನ್ನು ಮಾಡಲಾಗಿದೆ. ಆದರೆ, ವಿಜಯನಗರ ಕಾಲಕ್ಕೆ ದ್ವೈತ, ಪಾಶುಪತ, ಕಾಳಾಮುಖ, ವೀರಶೈವ, ಸಿದ್ಧಾಂತಗಳು ಪ್ರಚಾರದಲ್ಲಿದ್ದವು. ಇದಕ್ಕೆ ಹಿಂದಿನ ಉಗ್ರ ಆಚರಣೆಯ ಶೈವ ಪಂಥಗಳು ಈ ಕಾಲಕ್ಕಾಗಲೇ ತನ್ನ ಅಸ್ಥಿತ್ವವನ್ನು ಕಳೆದುಕೊಂಡಿದ್ದವು ಅಥವಾ ಸೌಮ್ಯ ರೂಪವನ್ನು ಪಡೆದುಕೊಂಡಿದ್ದವು. ಈ ಮೂರು ಮತಗಳ ಪೂಜಾವಿಧಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಶಿವನೇ ಈ ಮತಗಳಿಗೆ ಪಾರಮ್ಯ ದೇವರು ಈ ಮತಗಳ ಅವಲಂಬಿಗಳು ಶೈವದೇವಾಲಯಗಳನ್ನು ಪ್ರತಿಷ್ಠಾಪಿಸಿ ದತ್ತಿ ನೀಡಿ ಪೋಷಿಸಿದರು.

## ಪಾಶುಪತ

ವಿಜಯನಗರ ಕಾಲದಲ್ಲಿ ಅಸ್ಥಿತ್ವದಲ್ಲಿದ್ದ ಶೈವ ಪಂಥಗಳಲ್ಲಿ ಪಾಶುಪತವೂ ಒಂದು. ಸಂಗಮ ವಂಶದ ಆಳ್ವಿಕೆಯ ಕಾಲದಲ್ಲಿ ಈ ಪಾಶುಪತ ಆಚಾರ್ಯರು ರಾಜಗುರುಗಳಾಗಿದ್ದರು. ವೀರಶೈವ ಧರ್ಮವು ಪ್ರವರ್ಧಮಾನಕ್ಕೆ ಬಂದಂತೆ ಈ ಪಾಶುಪತವು ತನ್ನ ಅಸ್ಥಿತ್ವವನ್ನು ಕಳೆದುಕೊಂಡಿತು.

ಪಾಶುಪತವು ಪುರಾತನ ಶೈವ ಶಾಖೆಯಲ್ಲಿ ಒಂದು, ಪಾಶುಪತದ ಪ್ರಥಮ ಉಲ್ಲೇಖ ಮಹಾಭಾರತದಲ್ಲಿ ಕಂಡುಬರುತ್ತಿದೆ. ಮಹಾಭಾರತದ ಐದು ಸಿದ್ಧಾಂತಗಳಲ್ಲಿ ಇದು ಒಂದು.[೫೩] ಮಹಾಭಾರತದ ಶಾಂತಿ ಪರ್ವದಲ್ಲಿ ಪಾಶುಪತ ಧರ್ಮದ ಉಲ್ಲೇಖವಿದೆ. ಇದಕ್ಕೂ ಪೂರ್ವದಲ್ಲಿ ಹರಪ್ಪಾ ಸಂಸ್ಕೃತಿಯಲ್ಲಿ ಪಶುಪತಿ ಪೂಜೆಯು ಕಂಡುಬರುವುದು.[೫೪] ಕುಶಾಣದ ದೊರೆಗಳು ತಮ್ಮ ನಾಣ್ಯಗಳಲ್ಲಿ ತಮ್ಮನ್ನು ಪಶುಪತ ಮತದ ಅನುಯಾಯಿಗಳೆಂದು ಕರೆದುಕೊಂಡಿದ್ದಾರೆ.[೫೫] ಕ್ರಿ.ಶ.ಏಳನೆಯ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ ಚೀನಾದ ಪ್ರವಾಸಿ ಹ್ಯೂಯನ್‌ತ್ಸಾಂಗ್‌ನು ತನ್ನ ಪುಸ್ತಕದಲ್ಲಿ ಹನ್ನೆರಡು ಬಾರಿ ಪಾಶುಪತ ಎಂಬ ಶಬ್ದವನ್ನು ಉಪಯೋಗಿಸಿದ್ದಾನೆ. ಮಹೇಶ್ವರನ ದೇವಸ್ಥಾನಗಳು ಭಾರತದಲ್ಲಿದ್ದವು. ಅವುಗಳಲ್ಲಿ ಪಾಶುಪತರು ಧ್ಯಾನ ಮಾಡುತ್ತಿದ್ದರೆಂದು ಈತನು ತಿಳಿಸಿದ್ದಾನೆ.[೫೬] ಹೀಗೆ ಪಾಶುಪತವು ಇಡೀ ಭಾರತದಲ್ಲಿ ಹಬ್ಬಿದ್ದ ಶೈವ ಪಂಥವಾಗಿತ್ತು. ಈ ಪಾಶುಪತ ಉಲ್ಲೇಖ ಹೆಚ್ಚಾಗಿ ಉತ್ತರ ಭಾರತದ ಸಾಹಿತ್ಯ ಗ್ರಂಥಗಳಲ್ಲಿ ಕಂಡುಬರುತ್ತದೆ. ಕಾಲಾನಂತರದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಪಾಶುಪತವು ತನ್ನ ಅಸ್ತಿತ್ವವನ್ನು ಚಾಚಿಕೊಂಡಿತು.

ಗಣ ಸಹಸ್ರನಾಮಾವಳಿಯಲ್ಲಿ ಶೈವರನ್ನು ಎಂಟು ವಿಧವಾಗಿ ವರ್ಗೀಕರಿಸಲಾಗಿದೆ. ಅದರಲ್ಲಿ ಪ್ರಮಥರದು ಪ್ರಥಮಗಣ, ರುದ್ರರದು, ಎರಡನೆಯ ಗಣ, ನಂತರದ ಮೂರನೆಯ ಸ್ಥಾನವೇ ಯೋಗಾಚಾರ್ಯರೆಂದು ಕರೆಯಲ್ಪಡುವ ಯೋಗಾಚಾರ್ಯರದು. ಪ್ರಮಥಗಣ, ರುದ್ರಗಣರಿಗೆ ಇತಿಹಾಸದಲ್ಲಿ ಸ್ಥಾನವಿಲ್ಲ. ನಂತರದ ಸ್ಥಾನದವರಾದ ಯೋಗಾಚಾರ್ಯರಿಗೆ ಇತಿಹಾಸದಲ್ಲಿ ಸ್ಥಾನವಿದೆ. ಇವರೇ ನಕುಲೀಶ ಪಾಶುಪತರು.[೫೭] ಉಪನಿಷತ್ತುಗಳಲ್ಲಿ ಬರುವ ನ್ಯಾಯದರ್ಶನ ವೈಶೇಷಿಕ ದರ್ಶನಗಳ ಸೂತ್ರಕಾರರಾದ ಅಕ್ಷಪಾದ ಮತ್ತು ಕಣಾದ ಮಹರ್ಷಿಗಳು ಪಾಶುಪತರಾಗಿದ್ದರು.[೫೮] ಕ್ರಿಸ್ತಶಕದ ಆದಿಯಲ್ಲಿ ಗುಜರಾಥದ ಕಾಯಾವರೋಹಣದಲ್ಲಿ ಅವತಾರವೆತ್ತಿದ ನಕುಲೀಶನಿಂದ ರೂಪಗೊಂಡ ಮತ ನಕುಲೀಶ ಪಾಶುಪತ. ಪ್ರಾಚೀನ ಕಾಲದಲ್ಲೇ ಗುಜರಾತಿನಿಂದ ಕರ್ನಾಟಕಕ್ಕೆ ಆಗಮಿಸಿದೆ.[೫೯]

ಹೀಗೆ ಕರ್ನಾಟಕಕ್ಕೆ ಆಗಮಿಸಿದ ಪಾಶುಪತ ಮತವು ಕರ್ನಾಟಕದಲ್ಲಿ ಹತ್ತನೆಯ ಶತಮಾನದ ಹೊತ್ತಿಗೆ, ಹೆಚ್ಚು ಪ್ರಚಾರವನ್ನು ಪಡೆದುಕೊಂಡಿತು. ಕರ್ನಾಟಕದಲ್ಲಿ ಬಳ್ಳಿಗಾವಿ, ಹೂಲಿ, ಮೊರಗೇರಿ, ಕುರುವತ್ತಿಗಳು ಪಾಶುಪತರ ಪ್ರಮುಖ ಕೇಂದ್ರಗಳಾಗಿದ್ದವು. ಪಾಶುಪತ ಕಾಳಾಮುಖ, ಲಾಕುಳ, ಮಹೇಶ್ವರ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ಪಂಥಗಳು, ಹೆಚ್ಚು ಕಡಿಮೆ ಪ್ರಮಾಣದಿಂದ ಒಂದೇ ಇದ್ದಂತೆ ತೋರುವುವು. ಕರ್ನಾಟಕದ ಶಿಲಾಶಾಸನಗಳು ಕಾಳಾಮುಖರೂ ಪಾಶುಪತರು ಒಂದೇ ಎಂದು ಸಾರುತ್ತವೆ.[೬೦] ಕಾಪಾಲಿಕರೆಂಬ ಉಗ್ರವಾದ ವಾಮಾಚಾರ ಶೈವಪಂಥವನ್ನು ಬಿಟ್ಟರೆ ಉಳಿದ ಶುದ್ಧ ಸಾತ್ವಿಕಾಚಾರಣೆಗಳ ಶೈವಪಂಥಗಳಲ್ಲಿ ವ್ಯತ್ಯಾಸವನ್ನು ಗುರುತಿಸಲು ಶಾಸನಗಳಿಂದ ಸಾಧ್ಯವಾಗದು. ಆದ್ದರಿಂದ ಈ ಶಾಖೆಗಳ ಮಧ್ಯೆ ವ್ಯತ್ಯಾಸಗಳೇನಾದರೂ ಇದ್ದರೆ ಅವು ಅಲ್ಪಮಾತ್ರ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[೬೧] ಕರ್ನಾಟಕದಲ್ಲಿ ಶಾತವಾಹನರು, ಕದಂಬರು, ಗಂಗರು, ಚಾಳುಕ್ಯರು, ರಾಷ್ಟ್ರಕೂಟರು ಹೊಯ್ಸಳರು ವಿಜಯನಗರದ ಅರಸರ ಕಾಲದಲ್ಲಿ ಪಾಶುಪತ ಮಠಗಳಿಗೆ, ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿದರು. ಸ್ಥಾವರ ಲಿಂಗ ಪೂಜೆ ದೇವಾಲಯ ನಿರ್ಮಾಣ, ಲಿಂಗಪ್ರತಿಷ್ಠಾಪನೆಗಳು ಈ ಪಾಶುಪತದ ಕೊಡುಗೆಗಳು.[೬೨] ಇದರಿಂದಾಗಿ ಪಾಶುಪತದ ಹೆಸರಿನಲ್ಲಿ ಸಾವಿರಾರು ಸಂಖ್ಯೆಯ ಶಾಸನಗಳು ಕರ್ನಾಟಕದಲ್ಲಿ ಸೃಷ್ಟಿಗೊಂಡವು. ಇವು ಸಮಾಜದಲ್ಲಿ ವಿದ್ಯಾಪ್ರಸಾರ, ನ್ಯಾಯದಾನ, ಧಾರ್ಮಿಕ ಜಾಗೃತಿಯನ್ನು ಮೂಡಿಸಲು ಸಹಕಾರಿಯಾದವು.

ಎರಡನೆಯ ಹರಿಹರನ ನಂತರ ವೀರಭೂಪತಿ ಕಾಲಕ್ಕೆ ಚಂದ್ರಭೂಷಣ ಕ್ರಿಯಾಶಕ್ತಿ, ರಾಜಗುರುವಾಗಿದ್ದನು.[೬೩] ಪ್ರೌಢದೇವರಾಯನು ಪಟ್ಟಕ್ಕೆ ಬಂದ ಮೊದಲು ದಿನಗಳಲ್ಲಿ ಈ ಚಂದ್ರಭೂಷಣ ಕ್ರಿಯಾ ಶಕ್ತಿ ಗುರುಗಳೇ ರಾಜ ಗುರುಗಳಾಗಿದ್ದಂತೆ ಕಂಡುಬರುವುದು ಪ್ರೌಢದೇವರಾಯನ ಆಸ್ಥಾನದ ಶ್ರೀನಾಥ ಕವಿ ಅವನ ರಾಜಗುರು ಚಂದ್ರಭೂಷಣ ಕ್ರಿಯಾ ಶಕ್ತಿಯತಿರಾಯನ ಕೃಪೆಗೂ ಪಾತ್ರನಾದನೆಂದು ತಿಳಿದುಬರುತ್ತದೆ.[೬೪] ಇವನ ನಂತರದಲ್ಲಿ ಎರಡನೆಯ ದೇವರಾಯನಿಗೆ ಮಲ್ಲಿಕಾರ್ಜುನ ಕ್ರಿಯಾ ಶಕ್ತಿಗಳು

ರಾಜಗುರುಗಳಾಗಿದ್ದರೆಂದು ತಿಳಿಯುತ್ತದೆ. ಲಕ್ಕಣ ದಂಡೇಶ ತನ್ನ ಕೃತಿ "ಶಿವತತ್ವ ಚಿಂತಾಮಣಿಯಲ್ಲಿ" ಗುಣಿಗ್ರಾಹಿ ಮಲ್ಲಿಕಾರ್ಜುನ ಕ್ರಿಯಾಶಕ್ತಿಯನ್ನು ಹೆಸರಿಸಿದ್ದಾನೆ. ಆದ್ದರಿಂದ ಪ್ರೌಢದೇವರಾಯನಿಗೆ ಮೊದಲಿಗೆ ಚಂದ್ರಭೂಷಣ ಕ್ರಿಯಾಶಕ್ತಿಗಳು ಆನಂತರದ ಕಾಲದಲ್ಲಿ ಮಲ್ಲಿಕಾರ್ಜುನ ಕ್ರಿಯಾಶಕ್ತಿ ಪಂಡಿತರೂ ರಾಜಗುರುಗಳಾಗಿದ್ದಂತೆ ತೋರುತ್ತದೆ.

ಕಾಶಿವಿಲಾಸ ಕ್ರಿಯಾ ಶಕ್ತಿ, ಚಂದ್ರಭೂಷಣ ಕ್ರಿಯಾ ಶಕ್ತಿ ಹಾಗೂ ಮಲ್ಲಿಕಾರ್ಜುನ ಕ್ರಿಯಾ ಶಕ್ತಿಯತಿಗಳು ಬೇರೆ ಬೇರೆ ಕಾಲ ಘಟ್ಟಗಳಲ್ಲಿ ಬಂದು ಹೋಗಿದ್ದಾರೆ. ಆದ್ದರಿಂದ ಈ ಎಲ್ಲಾ ರಾಜಗುರುಗಳು ಒಂದೇ ಶೈವ ಪರಂಪರೆಯ ರಾಜಗುರುಗಳಾಗಿದ್ದವರು ಎಂದು ತರ್ಕಿಸಬಹುದು. ಈ ಗುರುಗಳು ಕಾಳಾಮುಖ, ಪಾಶುಪತ ಮತದ ಅನುಯಾಯಿಗಳಾಗಿದ್ದರಿಂದ ಅಂದಿನ ವಿಜಯನಗರವು ಅಸ್ಥಿತ್ವವನ್ನು ಪಡೆದುಕೊಂಡ ವೇಳೆಗಾಗಲೇ ಕಾಳಮುಖ ಪಾಶುಪತ ಮತವು ಕರ್ನಾಟಕದಲ್ಲಿ ತನ್ನ ಬೇರುಗಳನ್ನು ಭದ್ರಪಡಿಸಿಕೊಂಡಿತ್ತು. ಕ್ರಿಯಾಶಕ್ತಿ ಎಂಬ ಹೆಸರಿನ ಪರಂಪರೆಯ ಕಾಳಮುಖ ಪಂಥದ ಗುರುಗಳು ಸಂಗಮವಂಶದವರಿಗೆ ರಾಜಗುರುಗಳಾಗಿದ್ದರು. ಸಂಗಮ ವಂಶದ ಮೊದಲ ರಾಜರಾದ ಹರಿಹರ ಬುಕ್ಕರಿಗೆ ಕಾಳಾಮುಖ ಪಂಥದ 'ಕಾಶೀ ವಿಲಾಸ ಕ್ರಿಯಾಶಕ್ತಿ ಎಂಬ ಯತಿಗಳು ರಾಜಗುರುಗಳಾಗಿಪ್ಪರು ಎಂಬುದು ವಿದ್ವಾಂಸರು ಗುರುತಿಸಿದ್ದಾರೆ.[೬೫] ಇಮ್ಮಡಿ ಹರಿಹರ ಮತ್ತು ಮೊದಲನೆಯ ದೇವರಾಯರಿಗೆ ಕುಮಾರ ಕಂಪಣ ಮಾರಪ್ಪರಿಗೆ ಕ್ರಿಯಾಶಕ್ತಿ ಎಂಬ ಕಾಳಾಮುಖ ಗುರುಗಳು ರಾಜಗುರುಗಳಾಗಿದ್ದರೆಂಬುದನ್ನು 'ವೀರ ಕಂಪಣರಾಯ ಚರಿತೆ'ಯಿಂದ ತಿಳಿದುಬರುತ್ತದೆ.[೬೬] ಮಾಧವ ಮಂತ್ರಿಗೆ ಕ್ರಿಯಾಶಕ್ತಿ ಪಂಡಿತರು ಗುರುಗಳಾಗಿದ್ದನ್ನು ಶಾಸನವೊಂದು ತಿಳಿಸುತ್ತದೆ.[೬೭] ಇದಲ್ಲದೆ ಇವರು ಮಾರಪ್ಪ ಮತ್ತು ಮಾಧವರಿಗೆ ಶೈವಾಗಮ ಸಾರ ಸಂಗ್ರಹವನ್ನು ಬರೆಸಲು ಪ್ರಚೋದನೆ ನೀಡಿದರು. ಎರಡನೆಯ ಬುಕ್ಕರಾಯನಿಗೂ ಕ್ರಿಯಾಶಕ್ತಿ ಪಂಡಿತರೇ ಗುರುಗಳಾಗಿದ್ದರು. ಇವರ ಅಪ್ಪಣೆಯನ್ನು ಪಡೆದು ಇಮ್ಮಡಿಬುಕ್ಕನು ಕೋಲಾರ ಜಿಲ್ಲೆಯ ಮುಳುಬಾಗಿಲಿನ ವಿದ್ಯಾಶಂಕರ ದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಿದ್ದನ್ನು ಅಲ್ಲಿನ ಶಾಸನ ಉಲ್ಲೇಖಿಸಿವೆ. ಈ ಶಾಸನವು ವಿದ್ಯಾಶಂಕರ ದೇವಾಲಯದ ಮುಖ ಮಂಟಪದ ಗೋಡೆಯಲ್ಲಿ ಕೆತ್ತಲಾಗಿದೆ.[೬೮]

ಈ ರೀತಿಯಲ್ಲಿ ಕಾಳಮುಖ ಪಾಶುಪತ ರಾಜಗುರುಗಳು ಸಂಗಮವಂಶದ ದೊರೆಗಳ ಆಸ್ಥಾನದಲ್ಲಿ ತಮ್ಮ ಅಸ್ತಿತ್ವವನ್ನು ಹೊಂದಿದ್ದರು. ರಾಜಗುರು ಎಂಬ ಅಭಿದಾನವನ್ನು ಪಡೆದಿದ್ದ ಇವರು ಸಮಾಜದಲ್ಲಿ ಒಂದು ಗೌರವಯುತವಾದ ಸ್ಥಾನವನ್ನು ಪಡೆದುಕೊಂಡಿದ್ದರು. ಧಾರ್ಮಿಕ ವಿಷಯಗಳಲ್ಲಿ ರಾಜನಿಗೆ ಸಲಹೆ ನೀಡುವ ಅಧಿಕಾರವನ್ನು ಪಡೆದಿದ್ದರು. ರಾಜ್ಯದಲ್ಲಿ ಬಹುಮುಖ್ಯವಾದ ಸ್ಥಾನವನ್ನು ಅಲಂಕರಿಸಿದ ಕಾಳಮುಖ ಪಾಶುಪತರು ಸ್ಥಾವರಲಿಂಗ ಪೂಜಕರಾದ್ದರಿಂದ ಕರ್ನಾಟಕದಲ್ಲಿ ಬಹುದೊಡ್ಡ ದೇವಾಲಯಗಳ ನಿರ್ಮಾಣ ಇವರ ಕಾಲದಲ್ಲಿ ಪ್ರಾರಂಭವಾಯಿತು. ತಾವು ಕಟ್ಟಿಸಿದ ಅಥವಾ ತಮಗಾಗಿ

ಕಟ್ಟಿಸಿದ ದೇವಾಲಯಗಳಲ್ಲಿ ವಾಸಿಸುತ್ತ ಅಲ್ಲಿ ಆಧ್ಯಾತ್ಮಿಕ ಸಾಧನೆಯ ಜೊತೆಯಲ್ಲೇ ವಿದ್ಯಾಪ್ರಸಾರದ ದೊಡ್ಡ ಹೊಣೆಯನ್ನು ಹೊತ್ತರು.

ಕಾಳಾಮುಖ ಪಾಶುಪತ ದೇವಾಲಯಗಳ ಉಸ್ತುವಾರಿಯನ್ನು ನೋಡಿಕೊಳ್ಳಲು ಒಬ್ಬ 'ಸ್ಥಾನಪತಿ' ಎಂಬ ಗುರುವಿರುತ್ತಿದ್ದನು. ಒಂದು ದೇವಸ್ಥಾನದಲ್ಲಿ ಹಲವಾರು ಗುರುಗಳು ವಾಸವಾಗಿದ್ದರೆ ಅವರಲ್ಲಿ ಹಿರಿಯನನ್ನು ಸ್ಥಾನಪತಿ ಎಂದು ಕರೆಯಲಾಗುತ್ತಿತ್ತು.[೧೯]

ಹೀಗೆ ವಿಜಯನಗರ ಕಾಲದವರೆಗೆ ಹೆಚ್ಚು ಜನಪ್ರಿಯತೆಯನ್ನು ಹೊಂದಿದ್ದ ಕಾಳಮುಖ ಪಾಶುಪತ ಧರ್ಮಗಳು ಹದಿನೈದನೆಯ ಶತಮಾನದ ಆದಿಯಲ್ಲಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡವು. ಕಾಳಮುಖ ಗುರುಗಳ ಕೊನೆಯ ಹೆಸರು ಬರುವುದು ಕ್ರಿ.ಶ.೧೪೧೦ರ ಶಾಸನದಲ್ಲಿ.[೨೦] ಆನಂತರದ ಕಾಲದಲ್ಲಿ ಶಾಸನಗಳಲ್ಲಿ ಕಾಳಮುಖ, ಪಾಶುಪತ ಗುರುಗಳ ಹೆಸರುಗಳು ಶಾಸನಗಳಲ್ಲಿ ಕಂಡುಬರುವುದಿಲ್ಲ. ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಈ ಎಲ್ಲಾ ಮತಗಳು ವೀರಶೈವದಲ್ಲಿ ಸಮಾವೇಶವಾಗಿತ್ತು.[೨೧] ೧೨ನೇಯ ಶತಮಾನದಲ್ಲಿ ವೀರಶೈವ ಧರ್ಮ ಸಂಘಟನಾ ಕಾರ್ಯದ ಪ್ರಭಾವದಿಂದ ಈ ಎಲ್ಲಾ ಶೈವ ಧರ್ಮಗಳು ವೀರಶೈವದತ್ತ ವಾಲಿರಬಹುದು.[೨೨] ಹೀಗೆ ದೇವಾಲಯ ಸಂಸ್ಕೃತಿಗೆ ಹೆಸರುವಾಸಿಯಾಗಿದ್ದ ಕಾಳಮುಖ ಪಾಶುಪತ ಧರ್ಮಗಳು ವೀರಶೈವ ಮತದಲ್ಲಿ ವಾಲಿದ್ದರಿಂದ ವೀರಶೈವ ಧರ್ಮದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಕೈಬಿಟ್ಟಿದ್ದ ಸ್ಥಾವರ ಲಿಂಗ ಪ್ರತಿಷ್ಠೆ ದೇವಾಲಯ ನಿರ್ಮಾಣ ಸ್ಥಗಿತಗೊಂಡಿದ್ದವು. ಈ ಹೊಸ ಶೈವ ಮತಗಳು ವೀಗಶೈವದಲ್ಲಿ ಸಮಾವೇಶಗೊಂಡಿದ್ದರಿಂದ ಇವರಿಗೆ, ಸ್ಥಾವರ ಲಿಂಗ, ದೇವಾಲಯಗಳನ್ನು ನಿರಾಕರಿಸುವುದು ಸ್ವಲ್ಪ ಕಷ್ಟವಾಗಿತ್ತು.[೨೩] ಮುಂದೆ ವೀರಶೈವ ಧರ್ಮದಲ್ಲಿ ಹೊಸ ದೇವಸ್ಥಾನವನ್ನು ಕಟ್ಟುವ ಮತ್ತು ದೇವಾಲಯಗಳನ್ನು ನಿರ್ಮಿಸುವ ಪದ್ಧತಿ ವಿಜಯನಗರದ ಸಾಮ್ರಾಜ್ಯ ಕೊನೆಯವರೆಗೂ ನಡೆಯಿತು. ಇದರಿಂದ ಕರ್ನಾಟಕದಲ್ಲಿ ಒಟ್ಟು ಸುಮಾರು ಎರೆಡು ನೂರಕ್ಕಿಂತ ಹೆಚ್ಚು ಶೈವ ದೇವಾಲಯಗಳು ಈ ಕಾಲದಲ್ಲಿ ನಿರ್ಮಾಣಗೊಂಡವು ಅಥವಾ ದಾನದತ್ತಿಗಳನ್ನು ಸ್ವೀಕರಿಸಿದವು.

## ಅದ್ವೈತ

ವಿಜಯನಗರ ಕಾಲದ ಶೈವ ದೇವಾಲಯ ನಿರ್ಮಾಣವನ್ನು ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದ ಪಂಥವೆಂದರೆ, ಅದ್ವೈತ ಪಂಥ. ಶಂಕರಾಚಾರ್ಯರು ಅದ್ವೈತ ಪಂಥದ ಆದ್ಯ ಪ್ರವರ್ತಕರು. ಕೇರಳದ ಕಾಲಟಿಯಲ್ಲಿ ಕ್ರಿ.ಶ.೭೮೮ರಲ್ಲಿ ಜನ್ಮ ತಾಳಿದರು. ಬ್ರಹ್ಮ ಸೂತ್ರ ಉಪನಿಷತ್ತು ಭಗವದ್ಗೀತೆಗಳನ್ನು ಅಧ್ಯಯನ ಮಾಡಿದರು. ಧರ್ಮಕಾರ್ಯ ನಿಮಿತ್ತವಾಗಿ ಇಡೀ ಭಾರತವನ್ನು ಸುತ್ತಿದರು. ಧರ್ಮದ ಜಾಗೃತಿಗಾಗಿ ಪುರಿಯಲ್ಲಿ ಗೋವರ್ಧನ ಪೀಠ ದ್ವಾರಕೆಯಲ್ಲಿ ಕಾಳಿಕಾಪೀಠ, ಬದರಿಯಲ್ಲಿ ಜ್ಯೋರ್ತಿರ್

ಪೀಠ, ಶೃಂಗೇರಿಯಲ್ಲಿ ಶಾರದಾ ಪೀಠಗಳನ್ನು ಸ್ಥಾಪಿಸಿದರು.[೨೪] ಜೀವಾತ್ಮನು ಅಜ್ಞಾನದಿಂದ ಮುಕ್ತವಾಗಿ ಸುಜ್ಞಾನವನ್ನು ಪಡೆದಾಗ ಬ್ರಹ್ಮನಲ್ಲಿ ಒಂದಾಗಿ ಮುಕ್ತಿ ಪಡೆಯುವನು ಎಂದು ಹೇಳಿದರು. ಶಂಕರಾಚಾರ್ಯರ ಸಿದ್ಧಾಂತವು ಸರಳವಾಗಿದ್ದರಿಂದ ಬಹುಜನರನ್ನು ಆಕರ್ಷಿಸಿತು.

ವಿಜಯನಗರ ಸಾಮ್ರಾಜ್ಯದಲ್ಲಿ ಕಾಳಾಮುಖ ಪಾಶುಪತದ ಜೊತೆಯಲ್ಲೇ ಅದ್ವೈತ ಮತವೂ ಹೆಚ್ಚು ಪ್ರಚಾರದಲ್ಲಿತ್ತು. ಅದ್ವೈತಿಗಳಿಗೂ ಕೂಡ ಸ್ಥಾವರ ಲಿಂಗ ಪೂಜೆ, ದೇವಸ್ಥಾನ ನಿರ್ಮಾಣ ಮುಂತಾದ ವಿಷಯಗಳಲ್ಲಿ ಪಾಶುಪತರಂತೆ ಇವರಿಗೂ ಒಲವಿತ್ತು. ಶಂಕರನನ್ನು ಆರಾಧಿಸುವ ಎಲ್ಲಾ ಜನಾಂಗದವರು ಅದ್ವೈತ ದೇವಸ್ಥಾನಗಳಿಗೆ ಹೋಗುತ್ತಿದ್ದರು. ಆದುದರಿಂದ ಎಲ್ಲಾ ಶೈವ ಆರಾಧಕರು ಪರಸ್ಪರ ಗೌರವದಿಂದ ಜೀವಿಸಿದ್ದರು.

ವಿಜಯನಗರದ ಸಂಗಮವಂಶದ ದೊರೆಗಳು ಕಾಳಾಮುಖ ಪಂಥದ ಅನುಯಾಯಿಗಳಾದರೂ ಅವರಿಗೆ, ಶೃಂಗೇರಿ ಮಠದ ಮೇಲೆ ಅಪಾರ ಭಕ್ತಿ. ಇದಕ್ಕಾಗಿ ಸಾಮ್ರಾಜ್ಯ ಸ್ಥಾಪನೆಯ ಪ್ರಾರಂಭದಲ್ಲಿ ಸಂಗಮ ಸಹೋದರರು ಶೃಂಗೇರಿಯ ವಿದ್ಯಾಶಂಕರ ದೇವರಿಗೆ ದತ್ತಿಯನ್ನು ನೀಡಿ ಬಂದರು.[೨೫]

ವಿಜಯನಗರ ಪ್ರಾರಂಭದ ಕಾಲದಲ್ಲಿ ಶೃಂಗೇರಿಯ ಮಠವು ಈ ಅರಸರಿಗೆ ಅನುಗ್ರಹ ನೀಡಿತು. ಅಲ್ಲದೆ ಧಾರ್ಮಿಕ ಹಾಗೂ ನೈತಿಕ ಬೆಂಬಲಗಳನ್ನು ಶ್ರೀಗಳು ವಿಜಯನಗರದ ಅರಸರಿಗೆ ನೀಡಿದ್ದರು. ಇದಕ್ಕಾಗಿ ವಿಜಯನಗರದ ಅರಸರು ಶೃಂಗೇರಿಯ ಮಠದ ಮೇಲೆ ಅಪಾರವಾದ ಗೌರವವನ್ನು ಹೊಂದಿದ್ದರು. ಕ್ರಿ.ಶ.೧೩೪೬ರಲ್ಲಿ ಹರಿಹರ ಮತ್ತು ಆತನ ಸಹೋದರಾದ ಬುಕ್ಕರಾಯ, ಮಾರಪ್ಪ, ಮುದ್ದಪ್ಪ, ಕಂಪಣ್ಣ ಮತ್ತು ಇವರ ಅಳಿಯ ಒಟ್ಟು ಆರು ಜನರೂ ಸೇರಿ ವಿಜಯನಗರ ಅರಸುಗಳು ಶೃಂಗೇರಿಯ ಮಠಕ್ಕೆ ಭೂದಾನವನ್ನು ಮಾಡಿದರು.[೨೬] ಶೃಂಗೇರಿ ಮಠದ ಪಟ್ಟಾಧ್ಯಕ್ಷರಾಗಿದ್ದ ಗುರುಗಳು ಭಾರತೀ ವಿದ್ಯಾತೀರ್ಥರಾಗಿದ್ದರು.

ವಿಜಯನಗರದ ಎರಡನೆಯ ಅರಸನಾದ ಮೊದಲನೆಯ ಬುಕ್ಕರಾಯ. ಈತನು ಸಿಂಹಾಸನಾರೂಢ ನಾದಾಗ ಕ್ರಿ.ಶ.೧೩೫೬ರಲ್ಲಿ ಶೃಂಗೇರಿಗೆ ಹೋಗಿ, ಶ್ರೀ ಭಾರತೀ ತೀರ್ಥಂಕರಿಂದ ಆಶೀರ್ವಾದ ಪಡೆದು ದೇವಸ್ಥಾನದ ಮಠಕ್ಕೆ ಮೂರು ನೂರು ಗದ್ಯಾಣದ ಭೂಮಿಯನ್ನು ಅರ್ಪಿಸಿದನು. ದೇವಸ್ಥಾನದ ಶ್ರೀ ಶಾರದಾಂಬೆಯ ದೇವಸ್ಥಾನದ ಮೂರ್ತಿಗೆ ಉತ್ಸವವನ್ನು ನಡೆಸಲು ಶ್ರೀ ಚಂದ್ರಮೌಳೇಶ್ವರ ದೇವರ ಸನ್ನಿಧಿಯಲ್ಲಿ ಅಮೃತಪಡಿ, ನಂದಾದೀಪ್ತಿ, ಬ್ರಾಹ್ಮಣ ಸಂತಾರ್ಪಣೆ ಮುಂತಾದುವುಗಳನ್ನು ನಡೆಸಲು ಶ್ರೀ ವಿದ್ಯಾತೀರ್ಥರ ಸಮಾಧಿಯ ದರ್ಶನ ಪಡೆದು ಬುಕ್ಕನು ದಾನ ನೀಡಿದನೆಂದು ಶಾಸನ ಉಲ್ಲೇಖಿಸಿದೆ. ಇದು ವೀರಬುಕ್ಕರಾಯನು ಅದ್ವೈತ ಮಠಕ್ಕೆ ಸಲ್ಲಿಸಿದ ಗೌರವವಾಗಿದೆ.

ಒಂದನೆಯ ಬುಕ್ಕರಾಯನ ಕಾಲದಲ್ಲಿ ಕೋಟೇಶ್ವರದ ಕೋಟೇಶ್ವರ ದೇವರಿಗೆ ಶಿವರಾತ್ರಿಯ ಪೂಜೆಗಾಗಿ ಮತ್ತು ನಂದಾದೀವಿಗೆಗಾಗಿ ದೇವರಿಗೆ ಮಾಲೆ, ರಂಗಭೋಗಕ್ಕೆ ದಾನ ನೀಡಿದ್ದನ್ನು

ಉಲ್ಲೇಖಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ.೧೩೬೪ಕ್ಕೆ ಸರಿಹೊಂದುತ್ತದೆ.[೨೭] ಇದು ರಾಜನು ಶೈವ ಧರ್ಮದ ಅಭಿಮಾನವನ್ನು ತೋರಿಸುತ್ತದೆ. ಕ್ರಿ.ಶ.೧೩೬೪ರಲ್ಲಿ ವೀರ ಬುಕ್ಕಣ್ಣ ಒಡೆಯನು ಮಂಗಳೂರು ತಾಲೂಕಿನ ಬಂಟ್ವಾಳದ ಪುದಗ್ರಾಮ ಮಂಜುನಾಥ ದೇವರ ಸನ್ನಿಧಿಯಲ್ಲಿ ಪುದ ಗ್ರಾಮದ ಕೆಲವು ಬ್ರಾಹ್ಮಣರಿಗೆ ಎಲ್ಲಾ ತೆರಿಗೆಗಳನ್ನು ಮಾಫಿ ಮಾಡಿ ದಾನ ಮಾಡಿದ್ದನ್ನು ಇಲ್ಲಿ ತಿಳಿಸುತ್ತವೆ. ಇದು ರಾಜನ ಅದ್ವೈತ ಸಂಪ್ರದಾಯದ ನಿಷ್ಠೆತೆಯನ್ನು ಎತ್ತಿ ತೋರಿಸುತ್ತದೆ.[೨೮] ಅದ್ವೈತ ಸಂಪ್ರದಾಯ ದೇವಾಲಯಗಳಿಗೆ ದಾನ ನೀಡುವುದು ಮತ್ತು ಮಠಗಳಿಗೆ ದಾನ ಕೊಡುವುದು ರಾಜರ ಶೈವ ಮತಾವಲಂಬಿಯಾಗಿದ್ದುದೇ ಕಾರಣವಾಗಿತ್ತು. ದೇವಾಲಯಗಳಿಗೆ ಹೊಂದಿಕೊಂಡಂತೆ ಅಗ್ರಹಾರಗಳನ್ನು ನಿರ್ಮಿಸಿ ಅವಗಳ ನಿರ್ವಹಣೆಗಾಗಿಯೂ ದಾನ ನೀಡುವುದು ವಿಜಯನಗರ ಕಾಲದಲ್ಲಿ ಕಂಡುಬರುತ್ತದೆ. ರಾಜನು ಕಾಳಾಮುಖ ಆಚಾರ್ಯರನ್ನು ರಾಜಗುರುಗಳೆಂದು ಮನ್ನಣೆ ಕೊಟ್ಟರೂ ಕೂಡ ಶೃಂಗೇರಿ ಶ್ರೀಗಳಿಗೂ ಆಪ್ತಸ್ಥಾನವನ್ನು ನೀಡಿ ಅವರ ಅನುಗ್ರಹಕ್ಕೂ ಪಾತ್ರನಾಗಿದ್ದನು.

ವಿಜಯನಗರದ ಅರಸು ಇಮ್ಮಡಿ ಹರಿಹರ ರಾಯನು ವಿದ್ಯಾರಣ್ಯ ಉತ್ತರಾಧಿಕಾರಿಗಳಾದ ಶ್ರೀ ಚಂದ್ರಶೇಖರ ಭಾರತಿ ಶ್ರೀಗಳು ಶೃಂಗೇರಿಗೆ ಬರಮಾಡಿಕೊಂಡರು. ಆ ಸಮಯದಲ್ಲಿ ಸಾಮ್ರಾಟನು ವಿದ್ಯಾರಣ್ಯರ ಸಮಾಧಿಯ ಮೇಲೆ ದೇವಸ್ಥಾನವನ್ನು ಕಟ್ಟಿಸಿದನು. ಇದೇ ಗ್ರಾಮದಲ್ಲಿ ವಿದ್ಯಾರಣ್ಯಪುರವೆಂಬ ಅಗ್ರಹಾರವನ್ನು ಸ್ಥಾಪಿಸಿದನು.[೨೯] ಅಮ್ಮನವರ ದೇವಸ್ಥಾನದ ನಿರ್ವಹಣೆಗಾಗಿ ರಾಜನು ಶ್ರೀಗಳಿಗೆ ಬಸವಪಟ್ಟಣ ರಾಜ್ಯದ ಯರನಾಡು ಸೀಮೆಯ ಶಿವನಿ ಹೊಬಳಿಯಲ್ಲಿನ ದಂದೂರು ಗ್ರಾಮವನ್ನು ದಾನವಾಗಿ ನೀಡಿದನು.[೩೦] ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಬಸರೂರಿನ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ಶಾಸನದ ಪ್ರಕಾರ ವಿಜಯನಗರದ ಅರಸನಾದ ಎರಡನೇಯ ಹರಿಹರನು ಮಹಾಲಿಂಗೇಶ್ವರ ದೇವರ ನೈವೇದ್ಯಕ್ಕೆ ದಾನ ನೀಡಿದ ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ.ಶ.೧೪೦೦ ಇದರಲ್ಲಿ ನಂದಿಕೇಶ್ವರ ದೇವರು ಎಂದು ಉಲ್ಲೇಖವಿದೆ. ವಿದ್ಯಾರಣ್ಯರ ಹೆಸರನ್ನು ಶಾಸನದಲ್ಲಿ ಹೇಳಲಾಗಿದೆ.

ವಿಜಯನಗರದ ಅರಸ ಒಂದನೇ ದೇವರಾಯನ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕೋಟೇಶ್ವರ ದೇವರಿಗೆ ನಂದಾದೀಪಕ್ಕೆ ಭೂಮಿಯನ್ನು ದಾನ ಬಿಟ್ಟಿರುವ ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ.ಶ.೧೪೧೧.[೩೧] ಒಂದನೆಯ ದೇವರಾಯನ ನಂತರ ಬಂದ ಎರಡನೆಯ ದೇವರಾಯ ಅಥವಾ ಪ್ರೌಢದೇವರಾಯನು ಅತ್ಯಂತ ಪ್ರಸಿದ್ಧ ಅರಸರಲ್ಲಿ ಒಬ್ಬನಾಗಿದ್ದ ಈತನು ಕೂಡ ಅದ್ವೈತ ಸಂಪ್ರದಾಯವನ್ನು ಪೋಷಿಸಿದ ಮಹಾರಾಜನಾಗಿದ್ದ. ಕ್ರಿ.ಶ.೧೪೩೦ರಲ್ಲಿ ರಾಯನು ಶೃಂಗೇರಿ ಮಠದ ಪ್ರಥಮ ಶ್ರೀ ಪುರುಷೋತ್ತಮ ಭಾರತೀಗಳಿಗೆ ಅಂದವಳ್ಳಿ ಗ್ರಾಮವನ್ನು ದತ್ತಿಯಾಗಿ ನೀಡಿದನು. ವಿದ್ಯಾಶಂಕರ ದೇವಸ್ಥಾನದಲ್ಲಿ ನಂದಾದೀಪ ಮತ್ತು ನೈವೇದ್ಯಕ್ಕೆ ದತ್ತಿಯನ್ನು ನೀಡಲಾಗಿತ್ತು.[೩೨] ಇದೇ ಇಮ್ಮಡಿ ದೇವರಾಯನು. ಹಂಪೆಯ ಕಲ್ಲು ಮಠದ ಶ್ರೀ ವಿಶ್ವೇಶ್ವರಾರಣ್ಯ ಶ್ರೀಪಾದಂಗಳಿಗೆ ಅಂದವಳ್ಳಿ

ಗ್ರಾಮವನ್ನು ದಾನವಾಗಿ ಕೊಟ್ಟಿದ್ದನ್ನು ಕ್ರಿ.ಶ.೧೪೩೦ ತಾಮ್ರ ಶಾಸನವೊಂದು ಉಲ್ಲೇಖಿಸುತ್ತದೆ.[೮೩] ಹಂಪೆಯ ಕಲ್ಲುಮಠದ ವಿದ್ಯಾಶಂಕರ ದೇವಸ್ಥಾನದ ಅಮೃತಪಡಿ ನಂದಾದೀಪ ಮತ್ತು ಯತಿಗಳ ಭಿಕ್ಷೆಗಾಗಿ ದತ್ತಿಯನ್ನು ನೀಡಲಾಗಿದೆ. ಹೀಗೆ ದೇವರಾಯನು ಅದ್ವೈತ ಸಂಪ್ರದಾಯ ದೇವಾಲಯಗಳನ್ನು ಬೆಳೆಸಿದ್ದನ್ನು ವಿಜಯನಗರ ಇತಿಹಾಸದಲ್ಲಿ ಕಾಣಬಹುದು.

ವಿಜಯನಗರದ ಸುಪ್ರಸಿದ್ಧ ಅರಸ ಕೃಷ್ಣದೇವರಾಯನು ಕೂಡ ಸರ್ವಧರ್ಮಗಳನ್ನು ಸಮನ್ವಯಗೊಳಿಸಿದ ಅರಸನಾಗಿದ್ದ. ಈತನು ಹಂಪೆಯ ಪ್ರಸನ್ನ ವಿರೂಪಾಕ್ಷ ದೇವಾಲಯಕ್ಕೆ ಅಮೃತಪಡಿ, ನೈವೇದ್ಯಕ್ಕೆ ದಾನಬಿಟ್ಟನು ಎಂದು ತಿಳಿಸುತ್ತದೆ. ಶಾಸನವು ಕ್ರಿ.ಶ.೧೫೧೩ರಲ್ಲಿ ರಚನೆಗೊಂಡಿದೆ.[೮೪] ಕ್ರಿ.ಶ.೧೫೧೩ರಲ್ಲಿ ಇದೇ ಅರಸು ವಿರೂಪಾಕ್ಷ ದೇವಾಲಯದ ಉತ್ಸವಗಳಿಗೆ ದಾನ ಬಿಟ್ಟನು. ಈ ದಾನಗಳನ್ನು ಕೃಷ್ಣದೇವರಾಯನು ತನ್ನ ತಂದೆ ಮತ್ತು ತಾಯಿಯರ ನೆನಪಿಗಾಗಿ ಒಟ್ಟು ಹತ್ತೊಂಬತ್ತು ಗ್ರಾಮಗಳನ್ನು ದತ್ತಿ ನೀಡಿದನು. ಗ್ರಾಮದ ಹೆಸರುಗಳನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.[೮೫]

ಹೀಗೆ ಅದ್ವೈತ ಸಂಪ್ರದಾಯ ದೇವಾಲಯಗಳಿಗೆ ಸಾಮ್ರಾಜ್ಯವು ಅಂತ್ಯದ ದಿನಗಳವರೆಗೂ ಇಂಥ ದತ್ತಿಗಳನ್ನು ಮಠಗಳಿಗೆ ಹಾಗೂ ದೇವಸ್ಥಾನಗಳಿಗೆ ನೀಡಲಾಯಿತು. ಅದ್ವೈತ ಸಂಪ್ರದಾಯದ ದೇವಾಲಯ, ವೀರಶೈವ ಸಂಪ್ರದಾಯ ದೇವಾಲಯ ಎಂದು ವಿಭಾಗಿಸುವುದು ಕಷ್ಟದ ಕೆಲಸ. ಹಾಗಾಗಿ ಇಡೀ ಶೈವ ಧರ್ಮಕ್ಕೆ ಸೇರಿದ ದೇವಾಲಯಗಳಿಗೆ ದತ್ತಿ ನೀಡಿದ್ದನ್ನು ಶಾಸನಗಳು ಉಲ್ಲೇಖಿಸಿವೆ. ಶೃಂಗೇರಿಯ ಶಾಸನಗಳು ಮಠವನ್ನು ಉಲ್ಲೇಖಿಸಿರುವುದರಿಂದ ಆ ದೇವಾಲಯಕ್ಕೆ ನೀಡಿದ ದತ್ತಿಗಳು ಸಾಮಾನ್ಯವಾಗಿ ಅದ್ವೈತ ಧರ್ಮಕ್ಕೆ ನೀಡಿದ ಪ್ರೋತ್ಸಾಹವೆಂದು ಪರಿಗಣಿಸಬಹುದು. ಆದರೆ ಇದೇ ದೇವಸ್ಥಾಗಳಿಗೆ ಶೈವ ಸಂಪ್ರದಾಯದ ಪಾಶುಪತರು, ಕಾಳಾಮುಖರು ಮತ್ತು ವೀರಶೈವರು ನಡೆದುಕೊಳ್ಳುವುದನ್ನು ಕಾಣಬಹುದು. ಸಂಗಮವಂಶದ ಅರಸರು ಕಾಳಮುಖರಾಗಿದ್ದರೂ ಅವರು ಶೃಂಗೇರಿಯ ದೇವಾಲಯಕ್ಕೆ ಹೆಚ್ಚಿನ ದಾನಗಳನ್ನು ನೀಡಿದ್ದನ್ನು ಕಾಣಬಹುದಾಗಿದೆ. ಅದ್ವೈತ ಕಾಳಾಮುಖ, ಪಾಶುಪತ ವೀರಶೈವ ಎಲ್ಲ ಜನಾಂಗದವರು ಶೈವ ದೇವಾಲಯಗಳಿಗೆ ಪೂಜೆ ಪುನಸ್ಕಾರಗಳನ್ನು ಮಾಡುತ್ತಿದ್ದನ್ನು ಅಂದಿನ ಸಮಾಜದಲ್ಲಿ ಕಾಣಬಹುದು. ಇವು ವಿಜಯನಗರ ಸಾಮ್ರಾಟರ ಘನತೆ, ಔದಾರ್ಯ ಮತ್ತು ಧರ್ಮ ಸಹಿಷ್ಣತೆಗಳನ್ನು ತಿಳಿಸುತ್ತದೆ ಎನ್ನಬಹುದು.

## ವೀರಶೈವ

ಹನ್ನೆರಡನೆಯ ಶತಮಾನ ವೀರಶೈವ ಧರ್ಮದ ಉದಯದ ಕಾಲವಾದರೆ, ಆ ಹಿಂದೆ ಪ್ರಚಲಿತವಿದ್ದ ಮತ್ತು ಇನ್ನೂ ಅಸ್ತಿತ್ವವನ್ನು ಪಡೆದುಕೊಂಡಿದ್ದ ಕಾಳಮುಖ, ಕಾಪಾಲಿಕ, ಪಾಶುಪತ, ಶೈವ, ಕಾಶ್ಮೀರಿ ಶೈವ ಮತ್ತು ತಮಿಳು ಶೈವ ಮತಗಳು ವೀರಶೈವವಾಗುವ ಸಂಕರಣಕಾಲದಲ್ಲಿ ವಿಜಯನಗರ ಸಾಮ್ರಾಜ್ಯ

ಉದಯವಾಯಿತು. ಹದಿನಾಲ್ಕನೆಯ ಶತಮಾನದ ಮಧ್ಯ ಭಾಗದ ನಂತರ ವೀರಶೈವ ಧರ್ಮ ಕೇವಲ ಒಂದು ಮತವಾಗಿ ಉಳಿಯದೇ ಆವರಗಿನ ಗೌಣಸ್ಥಿತಿಯ ಪೊರೆಯಿಂದ ಹೊರಬಂದು ಪ್ರಬಲ ಶಕ್ತಿಯಾಗಿ ಪ್ರಕಟಗೊಂಡು ಅಂದಿನ ಜೀವನಪ್ರವಾಹದ ಪ್ರಮುಖ ವಾಹಿನಿಯಾಯಿತು.

ಪರಂಪರಾನುಗತವಾದ ನಂಬಿಕೆಯಂತೆ ವೀರಶೈವ, ಅಥವಾ ಲಿಂಗಾಯತ ಧರ್ಮದ ಪ್ರವರ್ತಕರು, ಪಂಚಾಚಾರ್ಯರಾದ ಏಕೋರಾಮ ಮರುಳರಾಧ್ಯ, ಪಂಡಿತಾರಾಧ್ಯ ರೇವಣಸಿದ್ಧ ಮತ್ತು ವಿಶ್ವರಾಧ್ಯರು. ಆದರೆ ಇದಕ್ಕೆ ಐತಿಹಾಸಿಕ ಕುರುಹುಗಳ ಕೊರತೆ ಇದೆ. ಗಣ ಸಹಸ್ರ ನಾಮಾವಳಿಯ ಪ್ರಕಾರ ಶಿವನನ್ನು ಆರಾಧಿಸುವ ಜನರನ್ನು ಎಂಟು ಶಾಖೆಗಳಾಗಿ ವಿಂಗಡಿಸಲಾಗಿದೆ. ಇವರಲ್ಲಿ ಪ್ರಮಥಗಣ ಪ್ರಥಮವಾದರೆ. ಕೈಲಾಸದಲ್ಲಿ ವಾಸಿಸುವ ಶಿವಗಣಂಗಳು ರುದ್ರಗಣರು, ಎರಡನೆಯವರು. ಇವರುಗಳಿಗೆ ಇತಿಹಾಸದಲ್ಲಿ ಸ್ಥಾನವಿಲ್ಲ.[೮೬] ನಂತರದ ಸ್ಥಾನವನ್ನು ಯೋಗಾಚಾರ್ಯರಿಗೆ ನೀಡಲಾಗಿದೆ. ಇವರು ಮೂರನೇ ಗಣ. ಈ ಯೋಗಾಚಾರ್ಯರೆಂದರೆ, ನಕುಲೀಶನ ಆರಾಧಕರು ಇವರಿಗೆ ನಕುಲೀಶ ಪಾಶುಪತರು ಎಂಬ ಹೆಸರೂ ಇದೆ.

ಕರ್ನಾಟಕದಲ್ಲಿ ನಿರ್ಮಿಸಿದ್ದ ಸಾವಿರಾರು ಶೈವ ದೇವಾಲಯ ನಿರ್ಮಾಣ, ಲಿಂಗ ಪ್ರತಿಷ್ಠಾಪನೆಗಳು ಈ ನಕುಲೀಶ ಪಾಶುಪತರು ಮತ್ತು ಅವರೊಟ್ಟಿಗೆ ಬೆಳೆದ ಕಾಳಾಮುಖ ಕಾಪಾಲಿಕ, ಶೈವ, ಶೌಲ, ಮಹಾವ್ರತಿಗಳ ಕೊಡುಗೆಗಳಾಗಿವೆ. ದೇವಸ್ಥಾನಗಳ ನಿರ್ಮಾಣಗಳು ಹೆಚ್ಚಾದಂತೆ ಕಾರ್ಯ ಚಟುವಟಿಕೆಗಳು ಹೆಚ್ಚಾದವು.

ಈ ಯೋಗಾಚಾರ್ಯ ನಂತರದ ಗಣವಾದ ನಾಲ್ಕನೆಯ ಗಣವೇ "ತ್ರಿಷಷ್ಠಿ ಪುರಾತನ"ರದು. ಇವರ ಕಾರ್ಯಸ್ಥಾನ ತಮಿಳುನಾಡು ಹಾಗಾಗಿ ಆ ಕಾಲದ ಚೋಳ, ಚೇರ, ರಾಜಮನೆತನಗಳು ಅನೇಕ ಶೈವ ದೇವಾಲಯಗಳನ್ನು ನಿರ್ಮಿಸಿದರು. ಇದರಿಂದ ಅವರ ಹೆಸರಿನಲ್ಲೂ ಸಾಕಷ್ಟು ಸಂಖ್ಯೆಯ ಶೈವದೇವಸ್ಥಾನಗಳು ರಚನೆಯಾದವು. ಇವರ ಸಂಪರ್ಕದ ತ್ರಿಷಷ್ಠಿ ಪುರಾತನರ ಹೆಸರು ದೇವಾಲಯದ ಶಾಸನಗಳಲ್ಲಿ ಗೋಚರಿಸುತ್ತವೆ. ಇವರ ಭಕ್ತಿ ಚಳುವಳಿಯು ಕರ್ನಾಟಕದ ಮೇಲೆ ಪ್ರಭಾವ ಬೀರಿತು.

ಸಮಸಮವಾಗಿ ಬಾಳಿದ ಈ ಯೋಗಾಚಾರ್ಯರು ಮತ್ತು ತ್ರಿಷಷ್ಠಿ ಪುರಾತನರು ಎಂಬ ಶೈವಮತಗಳ ಮುಂದಣ ದೊಡ್ಡ ಹೆಜ್ಜೆ ವೀರಶೈವರದು.[೮೭] ಯೋಗಾಚಾರ್ಯರು ಮತ್ತು ತ್ರಿಷಷ್ಠಿ ಪುರಾತನರು ನಂತರದಲ್ಲಿ ಷೋಡಶರದು ಐದನೇ ಗಣ ತೇರಸರು ಆರನೇಗಣಗಳು ದಶಗಣರು ಏಳನೇಗಣ ಹೀಗೆ ಬಂದು ಹೋದರು. ಇವರು ವೀರಶೈವ ಧರ್ಮದ ಪೂರ್ವದಲ್ಲಿ ಬಂದು ಹೋದವರು. ಇವರ ಜೊತೆಯಲ್ಲೇ ಈ ಕಾಲದಲ್ಲಿ ಕೊಂಡಗುಳಿ ಕಾಶಿರಾಜ, ರೇವಣಸಿದ್ಧ ಜೇಡರ ದಾಸಿಮಯ್ಯ ಮೊದಲಾದ ವಚನಕಾರರು ಕಾಣಿಸಿಕೊಳ್ಳುತ್ತಾರೆ. ಇವರು ವೀರಶೈವ ಪೂರ್ವದ ವಚನಕಾರರಾಗಿದ್ದರಿಂದ ಇವರನ್ನು

ಸಂಕ್ರಮಣಕಾಲದ ವೀರಶೈವರೆಂದು ಎಂ.ಎಂ.ಕಲ್ಬುರ್ಗಿಯವರು ಕರೆದಿದ್ದಾರೆ. ಇವರನ್ನು ಬಸವ ಪೂರ್ವಯುಗದ ವಚನಕಾರರೆಂದು ಕರೆಯಲಾಗುತ್ತದೆ.[೮೮]

ಆದರೆ ವೀರಶೈವ ಧರ್ಮಕ್ಕೆ ಐತಿಹಾಸಿಕ ನೆಲೆಯನ್ನು ಕಲ್ಪಿಸಿ ಅದರ ಧಾರ್ಮಿಕ ತತ್ವ ಮತ್ತು ಆದರ್ಶಗಳನ್ನು ಸ್ಪಷ್ಟವಾಗಿ ನಿರೂಪಿಸಿ ಜನಪ್ರಿಯಗೊಳಿಸಿದ ಕೀರ್ತಿ ಬಸವಣ್ಣನವರದು. ಇವರದು ಗಣ ಸಹಸ್ರನಾಮಾವಳಿಯಲ್ಲಿ ಎಂಟನೇ ಗಣವಾಗಿದೆ. ಇದರಲ್ಲಿ ಇವರನ್ನು ಬಸವಾದಿ ಪ್ರಮಥರು ಎಂದು ಕರೆಯಲಾಗಿದೆ. ಇವರು ಆ ಕಾಲದ ಶೈವ ಪಂಥಗಳ ಉಗ್ರಭಕ್ತಿಗಳನ್ನು ಸೌಮ್ಯಗೊಳಿಸಿ ವೀರಶೈವ ಧರ್ಮದ ಮೂಲ ತತ್ವಗಳಾದ ಷಟ್‌ಸ್ಥಲಗಳು, ಪಂಚಾಚಾರ್ಯರು ಮತ್ತು ಅಷ್ಟಾವರಣಗಳನ್ನು ಪ್ರತಿಪಾದಿಸಿ, ಅವುಗಳಿಗೆ ಹೊಸ ರೂಪ ಮತ್ತು ಅರ್ಥಗಳನ್ನು ನೀಡಿದರು. ಹನ್ನೆರಡನೇ ಶತಮಾನದಲ್ಲಿ ಕರ್ನಾಟಕ ಕಂಡ ಈ ಯುಗ ಅವಿಸ್ಮರಣೀಯವಾದದ್ದು ಸಾಹಿತ್ಯದ ದೃಷ್ಟಿಯಿಂದ ಕ್ರಾಂತಿಕಾರಕವಾಗಿರುವಂತೆ, ಸಮಾಜದ ಉದ್ಧಾರದ ದೃಷ್ಟಿಯಿಂದ ಉದಾತ್ತವಾಗಿದೆ. ಧರ್ಮ ತನ್ನ ಸಂಪ್ರದಾಯದ ಕಟ್ಟು ಕಟ್ಟಳೆಗಳನ್ನು ಕಿತ್ತೊಗೆದು ಸಾಮಾನ್ಯ ಜನರನ್ನು ಮೇಲೆತ್ತಿ ಉದ್ಧರಿಸುವ ಪವಿತ್ರ ಶಕ್ತಿಯಾಯಿತು. ಬಸವಣ್ಣನವರು ಈ ಯುಗದ ಕೇಂದ್ರಬಿಂದುವಾದರು. ಅವರು ಜಾತಿಪದ್ಧತಿಯ ಸಾಮಾಜಿಕ ಅನ್ಯಾಯಗಳನ್ನು ಖಂಡಿಸಿದರು. ದುಡಿಮೆಯನ್ನು ದೇವರ ರೂಪದಲ್ಲಿ ನೋಡಿ "ಕಾಯಕವೇ ಕೈಲಾಸ" ಎಂಬ ಅರ್ಥದಲ್ಲಿ ನಂಬಿಕೆ ಇಟ್ಟಿದ್ದರು. ಹೀಗೆ ಬಸವಣ್ಣನವರ ಕಾಲದಲ್ಲಿ ವೀರಶೈವ ಧರ್ಮ ಕರ್ನಾಟಕವನ್ನು ದಾಟಿ ಬೆಳವಣಿಗೆ ಹೊಂದಿತು. ಇಡೀ ಮಾನವ ಜನಾಂಗವೆಲ್ಲ ಒಂದು ಕುಟುಂಬ; ಅಲ್ಲಿ ಜಾತಿ ಮತ ಭೇದಗಳಿಲ್ಲ ಎಂಬ ವೀರಶೈವರ ಸಂದೇಶ ಭಾರತದ ಮೂಲೆ ಮೂಲೆಯ ಜನರನ್ನು ಕರ್ನಾಟಕದ ಕಲ್ಯಾಣದತ್ತ ಆಕರ್ಷಿಸಿತು. ಹೀಗೆ ಕಲ್ಯಾಣದಲ್ಲಿ ಸೇರಿದ ಎಲ್ಲಾ ಶರಣರ ಗುರಿ ಲಿಂಗಾಂಗ ಸಾಮಾರಸ್ಯ ಪಡೆಯುವುದಾಗಿತ್ತು. ಶಿವಯೋಗ ಅದನ್ನು ಸಾಧಿಸುವ ಸಾಧನ. ಶಿವಾನುಭವ ಅದರ ಪರಿಣಾಮ.

ಹನ್ನೆರಡನೇ ಶತಮಾನವು ವೀರಶೈವ ಧರ್ಮ ರೂಪುಗೊಳ್ಳುವ ಕಾಲ. ಅದುವರೆಗೂ ವಿವಿಧ ಶೈವ ಪಂಥಗಳು ಕೇಂದ್ರೀಕೃತಗೊಂಡು ವೀರಶೈವ ಅಥವಾ ಲಿಂಗಾಯತ ಎಂಬ ಒಂದು ಹೊಸ ಧರ್ಮವಾಗಿ ರೂಪುಗೊಂಡಿದ್ದ ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಎಲ್ಲಾ ಶರಣರೂ ಕೂಡಿ ಬಸವ ಮತ್ತು ಅಲ್ಲಮರ ನೇತೃತ್ವದಲ್ಲಿ ವೀರಶೈವ ಧರ್ಮಕ್ಕೆ ಒಂದು ಹೊಸ ರೂಪವನ್ನು ನೀಡಿದರು. ಇದು ಇಡೀ ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿಯೇ ಅಪೂರ್ವವಾದುದು. ಶೈವ ಪಂಥದ ಒಂದು ರೂಪವಾಗಿರುವ ವೀರಶೈವ ಮತದ ತತ್ವಗಳನ್ನು ಕೋಡೀಕರಿಸಿ ಅದಕ್ಕೆ ನವಚೇತನವನ್ನು ತುಂಬಿದ್ದು ಈ ಕಾಲದಲ್ಲಿ. ಮುಂದೆ ಕಲ್ಯಾಣದಲ್ಲಿ ಜರುಗಿದ ಧಾರ್ಮಿಕ ಸಂಘರ್ಷದಲ್ಲಿ ಬಸವಣ್ಣನು ಕಲ್ಯಾಣವನ್ನು ತೊರೆದು ಸಂಗಮಕ್ಕೆ ಬಂದು ನಿಂತನು. ಅದೇ ಸಮಯದಲ್ಲಿ ಕಲ್ಯಾಣದಲ್ಲಿನ ಶರಣರೆಲ್ಲ ಕಲ್ಯಾಣವನ್ನು ಬಿಟ್ಟು ಚದುರಿದರು. ಅವರು ಸಂಚರಿಸಿದಲೆಲ್ಲ ವೀರಶೈವ ತತ್ವಗಳನ್ನು ಪ್ರಚಾರ ಮಾಡಿ ಜನತೆಯನ್ನು ಈ

ಧರ್ಮದ ಕಡೆ ವಾಲುವಂತೆ ಮಾಡುತ್ತಿದ್ದರು. ಕಲ್ಯಾಣ ರಾಜ್ಯದಲ್ಲಿ ಧಾರ್ಮಿಕ ಅಶಾಂತಿ ತಲೆದೋರಿದ್ದರಿಂದ ಬಸವಣ್ಣನವರ ತರುವಾಯ ಸುಮಾರು ನೂರು ವರ್ಷಗಳ ಕಾಲ ವೀರಶೈವ ಧರ್ಮಪ್ರಸಾರದ ಕೆಲಸ ಸಾವಕಾಶವಾಗಿ ನಡೆದಿರಬಹುದೆಂದು ವಿದ್ವಾಂಸರು ಚರ್ಚಿಸುತ್ತಾರೆ.

ಇದು ಅಂದಿನ ಪರಿಸ್ಥಿತಿಯನ್ನು ಅವಲೋಕಿಸಿದರೆ ಸರಿಯೆಂದು ತೋರುತ್ತದೆ. ಕಲ್ಯಾಣದಲ್ಲಿನ ಧಾರ್ಮಿಕ ಅಶಾಂತಿಯ ತರುವಾಯ ವೀರಶೈವ ಧರ್ಮ ಸ್ವಲ್ಪ ಕಾಲ ಸುಪ್ತವಾಗಿತ್ತು. ಆದರೆ ಸುಮ್ಮನೆ ಕೂಡಲಿಲ್ಲ. ಹಳ್ಳಿ ಹಳ್ಳಿಗಳಲ್ಲಿ ವಾಸಿಸುತ್ತಿದ್ದ ಶರಣರು ನಿಧಾನವಾಗಿ ಈ ಧರ್ಮದ ಪ್ರಚಾರ ಕಾರ್ಯದಲ್ಲಿ ತೊಡಗಿದರು. ಕಲ್ಯಾಣದ ಚಾಲುಕ್ಯರು ಮತ್ತು ಕಲಚುರಿಗಳ ನಂತರದಲ್ಲಿ ವೀರಶೈವ ಧರ್ಮಕ್ಕೆ ಕರ್ನಾಟಕದಲ್ಲಿ ಯಾವುದೇ ಪ್ರಬಲವಾದ ಸಾಮ್ರಾಜ್ಯದ ರಾಜಾಶ್ರಯ ದೊರೆಯದಿದ್ದರೂ ಕೂಡ ವೀರಶೈವ ಧರ್ಮದ ನಿಧಾನಗತಿಯ ಬೆಳವಣಿಗೆಗೆ ಕಾರಣವಾಗಿರಬೇಕು.

ಹದಿಮೂರನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ದಕ್ಷಿಣದಲ್ಲಿ ಹೊಯ್ಸಳರು, ಉತ್ತರದಲ್ಲಿ ಯಾದವರು ಆಳ್ವಿಕೆಗೆ ಬಂದರು. ಈ ಯಾದವರ ಮಂತ್ರಿಗಳೂ ಮಾಂಡಲಿಕರೂ ವೀರಶೈವ ಧರ್ಮದ ಸಿದ್ಧರಾಮನ ಹೆಸರಿನಲ್ಲಿ ಅನೇಕ ದತ್ತಿಗಳನ್ನು ನೀಡಿದ್ದಾರೆ.[೮೯] ವೀರಶೈವ ಧರ್ಮಕ್ಕೆ ನೆಲೆಯನ್ನು ಕೊಟ್ಟ ಯಾದವ ವಂಶದ ರಾಮಚಂದ್ರನನ್ನು ಲಕ್ಕಣ ದಂಡೇಶನು ತನ್ನ ಕೃತಿ ಶಿವತತ್ವ ಚಿಂತಾಮಣಿಯಲ್ಲಿ ಸ್ಮರಿಸಿಕೊಂಡಿದ್ದಾನೆ.

ವೀರಶೈವ ಧರ್ಮಕ್ಕೆ ಮರುಜೀವ ಬಂದದ್ದು ಹದಿನಾಲ್ಕು ಮತ್ತು ಹದಿನೈದನೆಯ ಶತಮಾನದಲ್ಲಿ. ಹನ್ನೆರಡನೆಯ ಶತಮಾನದಲ್ಲಿ ಸಸಿಯಾಗಿದ್ದ ವೀರಶೈವ ಧರ್ಮ ಈ ಶತಮಾನಗಳಲ್ಲಿ ಹೆಮ್ಮರವಾಗಿ ಬೆಳೆಯಿತು. ವೀರಶೈವ ಧರ್ಮವು ಅದುವರೆಗಿನ ಗೌಣಸ್ಥಿತಿಯ ಪೊರೆಯಿಂದ ಹೊರಬಂದು ಹಂಪೆಯನ್ನು ಕೇಂದ್ರೀಕರಿಸಿಕೊಂಡು ಪ್ರಬಲ ಶಕ್ತಿಯಾಗಿ ಹೊರಹೊಮ್ಮಿತು. ಅಂದಿನ ಕಾಲದ ಜೀವನ ಪ್ರವಾಹದ ಪ್ರಮುಖ ವಾಹಿನಿಯಾಯಿತು. ಹೀಗೆ ಸಂಗಮ ರಾಜವಂಶದ ಕಾಲದಲ್ಲಿ ಪ್ರಜ್ವಲಿಸಿದ ವೀರಶೈವ ಧರ್ಮ, ಅಂದಿನ ಕಾಲದ ರಾಜಕೀಯ ಧಾರ್ಮಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸಿತು.

ವಿಜಯನಗರ ಕಾಲದಲ್ಲಿ ಅದುವರೆಗೂ ಬಾಳಿದ ಶೈವಗಳು ವೀರಶೈವವಾಗಿ ಪರಿವರ್ತನೆಗೊಂಡ ಸಂಕ್ರಮಣಕಾಲ. ಈ ಕಾಲದಲ್ಲಿ ಅಷ್ಟಾಂಗ ವರ್ಣಗಳನ್ನು ನಿಷ್ಠೆಯಿಂದ ಪರಿಪಾಲಿಸುತ್ತ ಬಂದಿತ್ತು ಲಿಂಗಾಯತ ಧರ್ಮ. ಇದರ ಜೊತೆಯಲ್ಲಿ ಸ್ಥಾವರ ಲಿಂಗಪೂಜೆಯ ಕಡೆಯೂ ವಾಲಿದ್ದು ಒಂದು ವಿಶೇಷ. ಸ್ಥಾವರ ಲಿಂಗವನ್ನು ಆರಾಧಿಸುವ ಶೈವಧರ್ಮಗಳು ವೀರಶೈವವಾಗಿ ಬೆಳವಣಿಗೆ ಹೊಂದಿದ ಕಾಲದಲ್ಲಿ ಈ ಧರ್ಮದಲ್ಲೂ ಸ್ಥಾವರಲಿಂಗದ ಪೂಜೆ ಬಲಗೊಂಡಿತು. ಅದಕ್ಕಾಗಿ ನೂರಾರು ಶಿವ ದೇವಾಲಯ ವಿಜಯನಗರ ಸಾಮ್ರಾಜ್ಯದ ತುಂಬಾ ನಿರ್ಮಾಣಗೊಂಡವು. ಇದರಿಂದ ಶೈವ ದೇವಾಲಯ ನಿರ್ಮಾಣ ಮೂರ್ತಿಪೂಜೆ ವೀರಶೈವರಲ್ಲಿ ಜೊತೆಗೂಡಿತು.[೯೦]

ಸಂಗಮ ವಂಶದ ಮೊದಲ ಅರಸರು ಕಾಳಾಮುಖ ಶೈವ ಪರಂಪರೆಯ ಪೋಷಕರಾಗಿದ್ದಾರೆ. ಒಂದನೇ ಹರಿಹರರಾಯನಿಗೆ ಕಾಶಿವಿಲಾಸ ಕ್ರಿಯಾಶಕ್ತಿಗಳು, ರಾಜಗುರುಗಳಾಗಿದ್ದನ್ನು ಶಾಸನಗಳು ತಿಳಿಸುತ್ತವೆ.[೯೧] ಅರಸು ಕುಮಾರ ಕಂಪಣ್ಣ, ಇಮ್ಮಡಿ ಬುಕ್ಕ, ಮಾರಪ್ಪರಿಗೆ, ಕ್ರಿಯಾಶಕ್ತಿಗಳು ಗುರುಗಳಾಗಿದ್ದರು.[೯೨] ಎರಡನೆಯ ದೇವರಾಯನಿಗೆ ಮಲ್ಲಿಕಾರ್ಜುನ ಕ್ರೀಯಾಶಕ್ತಿಗಳು ರಾಜಗುರುಗಳಾಗಿದ್ದು ಕಂಡುಬರುವುದು.[೯೩] ಈ ಎಲ್ಲಾ ರಾಜರುಗಳು ಶೈವ ಪಕ್ಷಪಾತಿಗಳಾಗಿದ್ದರೆಂಬುದಂತು ಸತ್ಯ.[೯೪] ಹಂಪೆಯ ವಿರೂಪಾಕ್ಷನು ಕೇವಲ ಪಂಪಾಪತಿಯಾಗಿರಲಿಲ್ಲ. ಸಾಮ್ರಾಜ್ಯದ ಅಧಿನಾಯಕನೂ ಆಗಿದ್ದನು.

ಹರಿಹರನು ಸಂಗಮವಂಶದಲ್ಲಿ ಪ್ರಥಮ ರಾಜನಾಗಿದ್ದಾನೆ. ಈತನ ಕಾಲದಲ್ಲಿ ಶೈವಧರ್ಮವು ಅಸ್ತಿತ್ವವನ್ನು ಹೊಂದಿತ್ತು. ಕ್ರಿ.ಶ.೧೩೫೩ರಲ್ಲಿ ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರದಲ್ಲಿ ಸೋಮೇಶ್ವರ ದೇವಾಲಯವು ನಿರ್ಮಾಣಗೊಂಡಿತು. ಈತ ವೀರ ಧೀರನಾಗಿದ್ದು, ಉತ್ತಮ ಸಂಘಟಕನಾಗಿದ್ದನು. ವಿವಿಧ ರೀತಿಯ ಸಾಮಾಜಿಕ ಮತ್ತು ಧಾರ್ಮಿಕ ಪ್ರವಾಹಗಳನ್ನು ಒಂದೇ ದಿಕ್ಕಿನಲ್ಲಿ ಹರಿಯುವಂತೆ ಮಾಡಿ ವ್ಯವಸ್ಥಿತ ಆಡಳಿತವನ್ನು ಜಾರಿಗೆ ತಂದನು.

ಹರಿಹರನ ತರುವಾಯ ಆತನ ಎರಡನೆಯ ಸಹೋದರನಾದ ಬುಕ್ಕನು ವಿಜಯನಗರದ ಸಿಂಹಾಸನವನ್ನೇರಿದನು. ಬುಕ್ಕನು ಇತಿಹಾಸದಲ್ಲಿ ಅಮರನಾಗಿರುವುದು ಯುದ್ಧ ಸಾಹಸಕ್ಕಿಂತ ಮಿಗಿಲಾಗಿ ಧರ್ಮಜ್ಞಾನಕ್ಕೆ ಪರಮತ ಸಹಿಷ್ಣುತಗೆ ಈತನು ತನ್ನ ರಾಜ್ಯಭಾರ ಅವಧಿಯಲ್ಲಿ ಅನೇಕ ದೇವಾಲಯಗಳ ಜಿರ್ಣೋದ್ಧಾರಕನಾಗಿದ್ದಾನೆ. ಮತ್ತು ಕೆಲವೊಂದು ಹೊಸ ದೇವಾಲಯಗಳ ರಚನೆಯನ್ನು ಮಾಡಿದ್ದನ್ನು ಶಾಸನಗಳು ದಾಖಲಿಸಿವೆ. ದಕ್ಷಿಣ ಕನ್ನಡ ಜಿಲ್ಲೆಯ ಕೋಟೇಶ್ವರದ ಕೋಟೇಶ್ವರ ದೇವರಿಗೆ ಶಿವರಾತ್ರಿಯ ಪೂಜೆ, ನಂದಾದೀವಿಗೆ, ದೇವರ ಮಾಲೆ ರಂಗಭೋಗಕ್ಕೆ ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.[೯೫] ಈತನ ಕಾಲದಲ್ಲಿ ರಾಜ್ಯವನ್ನು ವಿಸ್ತರಿಸುವುದಕ್ಕೆ ಪ್ರಾಮುಖ್ಯತೆ ನೀಡಲಾಯಿತು. ಆತನು ಗೆದ್ದ ರಾಜ್ಯಗಳಲ್ಲಿ ಹಾಳು ಬಿದ್ದಿದ್ದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ ಅಲ್ಲಿ ಪೂಜೆ ಪುನಸ್ಕಾರಗಳು ಸಾಂಗೋಪಾಂಗವಾಗಿ ಜರುಗುವಂತೆ ಏರ್ಪಾಟು ಮಾಡಿದನು. ಕ್ರಿ.ಶ.೧೩೪೫ರಲ್ಲಿ ತುಮಕೂರು ಜಿಲ್ಲೆಯ ಸೀಬೆಯಲ್ಲಿ ಶಿವದೇವಾಲಯ ನಿರ್ಮಾಣಗೊಂಡಿತು.

ಮೊದಲನೆಯ ಹರಿಹರನ ಕಾಲದಲ್ಲಿ ಹೊಸದಾದ ದೇವಾಲಯಗಳು ನಿರ್ಮಾಣ ಕಾರ್ಯಕ್ಕೆ ಒತ್ತು ನೀಡಲಿಲ್ಲ ಇದ್ದ ಹಳೆಯ ದೇವಾಲಯಗಳನ್ನೇ ಈ ಕಾಲದಲ್ಲಿ ಜೀರ್ಣೋದ್ಧಾರ ಮಾಡಲಾಯಿತು.[೯೬] ಇದರಿಂದ ಸಾಮ್ರಾಜ್ಯದಲ್ಲಿ ಹಾಳೂ ಬಿದ್ದಿದ್ದ ಅನೇಕ ದೇವಾಲಯಗಳು ಮತ್ತೆ ಪೂಜೆ ಪುನಸ್ಕಾರಗಳನ್ನು ಕಂಡಿರುವುದನ್ನು ಶಾಸನಗಳು ದೃಢಪಡಿಸುತ್ತವೆ.

ಹರಿಹರನ ನಂತರದಲ್ಲಿ ಇವನ ತಮ್ಮನಾದ ಬುಕ್ಕರಾಯನು ಸಾಮ್ರಾಜ್ಯದ ಅಧಿಕಾರ ವಹಿಸಿಕೊಂಡನು. ಈತನು ರಾಜ್ಯದ ಭದ್ರತೆಗೆ ಸೂಕ್ತ ಕ್ರಮಕೈಗೊಂಡು ಸಾಮ್ರಾಜ್ಯವನ್ನು ಸುಭದ್ರಗೊಳಿಸಿದನು. ತನ್ನ

ಮಕ್ಕಳನ್ನೇ ಪ್ರಾಂತ್ಯದ ಮಂಡಲಾಪತಿಗಳನ್ನಾಗಿ ಮಾಡಿ ಅದರ ಉಸ್ತುವಾರಿಯನ್ನು ಅವರೇ ನೋಡಿಕೊಳ್ಳುವಂತೆ ಮಾಡಿದನು. ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಸಿರ ತಾಲೂಕಿನ ಕೊಟ್ಟಾಶಿವರಾಂ ಶಾಸನವು ಈತನು "ವೇದ ಮಾರ್ಗ ಪ್ರತಿಷ್ಠಾಚಾರ್ಯ" ಎಂದು ಉಲ್ಲೇಖಿಸಿದೆ.[೯೭]

ಒಂದನೆಯ ಬುಕ್ಕರಾಯನ ಕಾಲದಲ್ಲಿ ಕೊಟೇಶ್ವರದ ಕೋಟೇಶ್ವರ ದೇವರಿಗೆ ವಿಜಯನಗರದ ಅರಸನಾದ ವೀರ ಬುಕ್ಕಣ್ಣನು ಶಿವರಾತ್ರಿಯ ಪೂಜೆಗಾಗಿ ದಾನಬಿಟ್ಟಿರುವುದನ್ನು ತಿಳಿಸುತ್ತದೆ. ಇದು ಕ್ರಿ.೧೩೬೪ರಲ್ಲಿ, ರಚನೆಗೊಂಡ ಶಾಸನವಾಗಿದೆ.[೯೮]

ಕ್ರಿ.ಶ.೧೩೬೪ರಲ್ಲಿ ಒಂದನೆಯ ಬುಕ್ಕರಾಯನ ಕಾಲದಲ್ಲಿ ಮಂಗಳೂರು ತಾಲೂಕಿನ ಬಂಟ್ವಾಳದ ಮಂಜುನಾಥ ದೇವರ ಸನ್ನಿಧಾನಕ್ಕೆ ಪುದು ಗ್ರಾಮವನ್ನು ದಾನ ನೀಡಿದ್ದನ್ನು ಉಲ್ಲೇಖಿಸಿದೆ.[೯೯] ಹಂಪೆಯ ವಿರೂಪಾಕ್ಷ ದೇವಸ್ಥಾನವು ಈತನ ಕಾಲದಲ್ಲಿ ಜೀರ್ಣೋದ್ಧಾರಗೊಂಡಿತು. ಕ್ರಿ.ಶ.೧೩೭೯ರ ಶಾಸನವು ಈತನನ್ನು ಗುಣಗಾನ ಮಾಡುತ್ತದೆ. ಇದು ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದ ಪೂರ್ವದ ಕಲ್ಲಿನಲ್ಲಿದೆ. ಶಾಸನವು ಹೆಬ್ಬಾಳು ಮತ್ತು ದಂಡಿನಾಥಪುರ ಗ್ರಾಮಗಳಲ್ಲಿಯ ಭೂಮಿಯನ್ನು ವಿರೂಪಾಕ್ಷ ದೇವರ ಸನ್ನಿಧಿಗೆ ದಾನ ನೀಡಿದ ಉಲ್ಲೇಖವಿದೆ.[೧೦೦]

ಭಾರತದ ಇತಿಹಾಸದಲ್ಲಿ ಬುಕ್ಕರಾಯನಿಗೆ ಒಂದು ವಿಶಿಷ್ಠ ಸ್ಥಾನವನ್ನು ನೀಡಲಾಗಿದೆ. ಈತನು ವೀರಯೋಧ ಚತುರ ರಾಜಕಾರಣಿ ಪ್ರಗತಿ ಪರ ಆಲೋಚನೆಗಳನ್ನುಳವನೂ ಆಗಿದ್ದನು. ಇದರಿಂದ ವಿಜಯನಗರ ಸಾಮ್ರಾಜ್ಯವು ಭದ್ರವಾದ ಬುನಾದಿಯನ್ನು ಹೊಂದುವಂತಾಯಿತು.

ಒಂದನೆಯ ಬುಕ್ಕರಾಯನ ತರುವಾಯ ಈತನ ಮಗ ಇಮ್ಮಡಿ ಹರಿಹರನು ಪಟ್ಟಕ್ಕೆ ಬಂದನು. ಈತನ ಕಾಲದಲ್ಲೂ ವೀರಶೈವ ಧರ್ಮವು ಅಸ್ಥಿತ್ವವನ್ನು ಹೊಂದಿತ್ತು. ಈ ಕಾಲದಲ್ಲಿ ವೀರಶೈವ ಮತ್ತು ಶೈವ ಎಂಬ ಭೇದ ಕಲ್ಪಿಸುವುದು ಅಷ್ಟು ಸ್ಪಷ್ಟ ಆಧಾರಗಳು ದೊರೆಯುವುದಿಲ್ಲ. ಒಟ್ಟಾರೆಯಾಗಿ ಇಮ್ಮಡಿ ಹರಿಹರನ ಟಂಕಶಾಲೆಯ ನಾಣ್ಯಗಳ ಮೇಲೆ ಶಿವ-ಪಾರ್ವತಿಯ ಚಿತ್ರಗಳು ಕಂಡುಬಂದಿವೆ. ಆದ್ದರಿಂದ ಈತನು ಶೈವ ಮತಾವಲಂಬಿಯಾಗಿದ್ದನು ಎಂಬುದಕ್ಕೆ ಒಂದು ಆಧಾರ ದೊರೆತಂತಾಗುತ್ತದೆ.[೧೦೧]

ಎರಡನೆಯ ದೇವರಾಯನು ತನ್ನ ಪಟ್ಟಾಭಿಷೇಕದ ಮೊದಲ ವರ್ಷದಲ್ಲೇ ಕೋಟೇಶ್ವರದ ಕೋಟೇಶ್ವರ ದೇವರಿಗೆ ದತ್ತಿ ಬಿಟ್ಟಿದ್ದನ್ನು ಉಲ್ಲೇಖಿಸಿದೆ. ಇದು ಕ್ರಿ.ಶ.೧೩೭೭ ಹೊರಟ ಶಾಸನವಾಗಿದ್ದು ಬ್ರಾಹ್ಮಣರ ನಿತ್ಯಭೋಜನಕ್ಕೆ ದಾನ ಬಿಟ್ಟ ಸಂಗತಿಯನ್ನು ತಿಳಿಸುತ್ತದೆ.[೧೦೨]

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಬಸರೂರಿನ ಮಹಾಲಿಂಗೇಶ್ವರ ದೇವರಿಗೆ ನೈವೇದ್ಯಕ್ಕೆ ದಾನ ನೀಡಲಾಗಿದೆ. ಕ್ರಿ.ಶ.೧೪೦೦ರಲ್ಲಿ ಹುಟ್ಟಿದ ಶಾಸನವು ವಿದ್ಯಾರಣ್ಯರ ಹೆಸರಿನ ಉಲ್ಲೇಖ ಶಾಸನದಲ್ಲಿ ಕಂಡುಬರುವುದು.[೧೦೩]

ಇಮ್ಮಡಿ ಹರಿಹರನ ತರುವಾಯ ಈತನ ಮಗನಾದ ಒಂದನೆಯ ದೇವರಾಯನ ಕ್ರಿ.ಶ.೧೪೦೬ರಲ್ಲಿ ಪಟ್ಟಕ್ಕೆ ಬಂದನು. ಈತನು ಶೈವ ಧರ್ಮ ಅವಲಂಬಿ. ಕೋಟೇಶ್ವರದ ಕೋಟೇಶ್ವರ ದೇವರಿಗೆ ನಂದಾದೀಪಕ್ಕೆ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ.೧೪೧೨.[೧೦೪] ಕೋಲಾರ ಜಿಲ್ಲೆಯ ಗುಲಗಂಜಿಯಲ್ಲಿ ಈತನು ವಿಶ್ವೇಶ್ವರ ದೇವಾಲಯವನ್ನು ಕ್ರಿ.ಶ.೧೪೦೮ರಲ್ಲಿ ನಿರ್ಮಿಸಿದನು.[೧೦೫] ಈತನ ಮಗನಾದ ಮಲ್ಲಣ್ಣ ಒಡೆಯನು ಹಿಡಂಬೇಶ್ವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿದನು. ಹಿಡಂಬೇಶ್ವರ ದೇವಸ್ಥಾನವು ಚಿತ್ರದುರ್ಗದಲ್ಲಿದೆ.[೧೦೬]

ಕ್ರಿ.ಶ.೧೩೨೪ರಿಂದ ಇಮ್ಮಡಿ ದೇವರಾಯನು ಅಧಿಕಾರಕ್ಕೆ ಬಂದನು.[೧೦೭] ಸಂಗಮ ವಂಶದಲ್ಲೇ ಪ್ರಸಿದ್ಧಿಯನ್ನು ಹೊಂದಿ ಅರಸ ಇಮ್ಮಡಿ ದೇವರಾಯ ಈತನಿಗೆ ಪ್ರತಾಪ ದೇವರಾಯ, ಪ್ರೌಢದೇವರಾಯ ಎಂಬ ಹೆಸರುಗಳು ಶಾಸನಗಳಲ್ಲಿ ಕಂಡಬರುತ್ತವೆ.[೧೦೮] "ಗಜಬೇಂಟೆಕಾರ" ಎಂಬುದು ಅವನ ವಿಶಿಷ್ಟ ಬಿರುದಾಗಿತ್ತು.[೧೦೯]

ವಿಜಯನಗರದ ಅರಸರು ಅನುಸರಿಸಿದ ಸರ್ವಧರ್ಮ ಸಮನ್ವಯ ತತ್ವವನ್ನು ಈತನು ಪಾಲಿಸಿದನು. ಪಾರಂಪರ್ಯವಾಗಿ ಪಾಲಿಸುತ್ತಾ ಬಂದ ವರ್ಣಾಶ್ರಮ ಧರ್ಮವನ್ನು ಈತನು ಮುಂದುವರಿಸಿದನು. ಈ ವಿಷಯವನ್ನು ಗೌರಿಬಿದನೂರಿನ ಶಾಸನವು ದೃಢಪಡಿಸುತ್ತದೆ.[೧೧೦]

ಸಂಗಮ ವಂಶದ ರಾಜರೆಲ್ಲರು ಶೈವಧರ್ಮದ ಆರಾಧಕರು. ಅದರಲ್ಲೂ ಕಾಳಾಮುಖ ಕ್ರಿಯಾಶಕ್ತಿ ಪಂಡಿತರನ್ನು ರಾಜಗುರುಗಳನ್ನು ಪಡೆದಿರುವವರು. ಪ್ರೌಢದೇವರಾಯನು ಇದಕ್ಕೆ ಹೊರತಾಗಿರಲಿಲ್ಲ. ಮೊದಲಿಗೆ ಈತನು ಚಂದ್ರಭೂಷಣ ಕ್ರಿಯಾಶಕ್ತಿಯತಿರಾಯನ ಕೃಪೆಗೆ ಪಾತ್ರನಾಗಿದ್ದನು.[೧೧೧] ನಂತರದಲ್ಲಿ ಈತನಿಗೆ ಮಲ್ಲಿಕಾರ್ಜುನ ಕ್ರಿಯಾ ಶಕ್ತಿಗಳು ರಾಜಗುರುಗಳಾಗಿದ್ದರು.[೧೧೨] ಹೀಗಾಗಿ ಈತನು ಕಾಳಾಮುಖ ಪಾಶುಪತ ರಾಜಗುರುಗಳನ್ನು ಪುರಷ್ಕರಿಸಿದ್ದನ್ನು ಶಾಸನಗಳು ಹೇಳುತ್ತವೆ. ಆದರೆ ಕಾಳಾಮುಖ ಪಾಶುಪತ ಮಾರ್ಗದ ಕ್ರಿಯಾಶಕ್ತಿ ಮೊದಲಾದ ಗುರುಗಳು ವೀರಶೈವ ಕ್ರಿಯಾಚರಣೆಗೆ ಒಳಗಾಗಿದ್ದರು ಎಂಬುದನ್ನು ಸಿ.ಹಯವದನರಾಯರು ಗುರುತಿಸಿದ್ದಾರೆ.[೧೧೩] ಹೀಗಾಗಿ ಪ್ರೌಢದೇವರಾಯನ ಕಾಲವನ್ನು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ವೀರಶೈವ ಸಮೃದ್ಧಯುಗವೆಂದು ಪರಿಗಣಿಸಬಹುದು. ಅವನ ಕಾಲಕ್ಕೆ ವೀರಶೈವ ಧರ್ಮದ ವ್ಯಾಪ್ತಿ ಹೆಚ್ಚಿತು. ಶಿವಮೊಗ್ಗ ಜಿಲ್ಲೆಯ ತೆಂಗಿನಾಪುರದ ವೀರಭದ್ರ ದೇವಾಲಯದ ಶಾಸನವು ಈತನನ್ನು "ವೀರಶೈವಾಗಮ ಸಾರಸಂಪನ್ನ" ಎಂದು ಕರೆಯಲಾಗಿದೆ.[೧೧೪] ಇದು ಅವನ ವೀರ ಶೈವತತ್ವಕ್ಕೆ ಪ್ರತ್ಯಕ್ಷ ನಿದರ್ಶನವಾಗಿ ನಿಂತಿದೆ. ಲಕ್ಕಣ್ಣ ದಂಡನಾಯಕ ಅರಿಯಪ್ಪ ದಂಡನಾಯಕ ಮತ್ತು ಭಂಡಾರಿ ಜಕ್ಕಪ್ಪ ಎಂಬ ವೀರಶೈವ ಅಧಿಕಾರಿಗಳು ಪ್ರೌಢದೇವರಾಯನಿಗೆ ಆಪ್ತರಾಗಿದ್ದರು.[೧೧೫]

ಲಕ್ಕಣ್ಣ ದಂಡೇಶನು ಮುಳುಬಾಗಿಲು ಪ್ರಾಂತ್ಯದ ಅಧಿಕಾರಿಯಾಗಿದ್ದಾಗ ಅಲ್ಲಿನ ವಿರೂಪಾಕ್ಷ ದೇವಾಲಯದ ಗೋಪುರ ಚಿನ್ನದ ಕಳಸ ಮತ್ತು ಮಂಟಪವನ್ನು ನಿರ್ಮಿಸಿದ್ದನ್ನು ವಿರುಪಾಕ್ಷಿಯ ಶಾಸನವು

ತಿಳಿಸುತ್ತದೆ.[೧೧೬] ಅಣ್ಣಪ್ಪೊಡೆಯನು ಬುಕ್ಕ ಸಾಗರದ ವಿರುಪಾಕ್ಷ ದೇವರ ದೇವಸ್ಥಾನಕ್ಕೆ ಭೂಮಿಯನ್ನು ದಾನ ಮಾಡಿರುವುದನ್ನು ಶಾಸನಗಳು ಉಲ್ಲೇಖಿಸಿದೆ.[೧೧೭] ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಬಸರೂರಿನ ಶಾಸನವು ಮಹಾಲಿಂಗೇಶ್ವರ ದೇವರಿಗೆ ಅಮೃತಪಡಿ ಮತ್ತು ಪೂಜಾರಿಗಳಿಗೆ ದತ್ತಿ ಬಿಟ್ಟ ವಿಷಯಗಳನ್ನು ನಿರೂಪಿಸುತ್ತದೆ.[೧೧೮] ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ಶ್ರೀಶೈಲಂನ ಮಲ್ಲಿಕಾರ್ಜುನ ದೇವಸ್ಥಾನದ ನೈವೇದ್ಯ ಜಂಗಮ ದಾಸೋಹಕ್ಕೆ ದತ್ತಿಬಿಟ್ಟದನ್ನು ಉಲ್ಲೇಖಿಸಿದೆ.[೧೧೯]

ಇಮ್ಮಡಿ ದೇವರಾಯನ ಧಾರ್ಮಿಕ ಒಲವು ವೀರಶೈವ ಧರ್ಮದ ಕಡೆಗೆ ಇದ್ದುದರಿಂದ ಶೈವ ಧರ್ಮದ ಚಿನ್ಹೆಗಳಾದ ಎತ್ತರವಾದ ಪೀಠದ ಮೇಲೆ ಕುಳಿತಿರುವ ಶಿವಪಾರ್ವತಿಯರು ಚಿನ್ನದ ನಾಣ್ಯಗಳಲ್ಲಿ ಅಚ್ಚು ಹಾಕಿಸಿರುವುದನ್ನು ಕಾಣಬಹುದು.[೧೨೦] ಇದು ಈತನ ಧಾರ್ಮಿಕತೆಯ ಮತ್ತೊಂದು ನಿದರ್ಶನವಾಗಿದೆ.

ಹೀಗೆ ಪ್ರೌಢದೇವರಾಯನೆಂದು ಕರೆಯಲ್ಪಡುವ ಎರಡನೆಯ ದೇವರಾಯನು ತನ್ನ ಜೀವಿತಾವಧಿ ಕೊನೆಯವರೆಗೂ ವೀರಶೈವ ಧರ್ಮದಲ್ಲಿ ಒಲವುಳ್ಳವನಾಗಿದ್ದ ವಿಷಯವನ್ನು ಆ ಕಾಲದ ಸಾಹಿತ್ಯ ಕೃತಿಗಳೂ ಸಹಾಯಕವಾಗಿ ನಿಲ್ಲುತ್ತವೆ. ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿಯಂತೂ ಪ್ರೌಢದೇವರಾಯನ ರಾಜಧಾನಿಯನ್ನು "ಅಭಿನವ ಕಲ್ಯಾಣ"ವೆಂದು ಕರೆಯುತ್ತಾನೆ.[೧೨೧] ಕ್ರಿ.ಶ.೧೫೨೫ರಲ್ಲಿನ ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯದಲ್ಲಿ ಶರಣರ ಕಥೆಗಳನ್ನು ಮತ್ತು ವೀರಶೈವ ಧರ್ಮದ ತಿರುಳನನ್ನು ಕಾವ್ಯಮಯವಾಗಿ ನಿರೂಪಿಸಿದ್ದಾನೆ.[೧೨೨] ಚಾಮರಸನ ಪ್ರಭುಲಿಂಗಲೀಲೆಯೂ ಇದೇ ಕಾಲದಲ್ಲಿ ರಚನೆಗೊಂಡ ಕೃತಿ ಹೀಗಾಗಿ ಈ ಕಾಲದ ಸಾಹಿತ್ಯವು ವೀರಶೈವ ಧರ್ಮದ ಉತ್ತುಂಗವನ್ನು ಸಾರಿ ಹೇಳುತ್ತವೆ.

ಇಮ್ಮಡಿ ದೇವರಾಯ ಮತ್ತು ಲಕ್ಕಣ ದಂಡೇಶ ಅನ್ಯೋನ್ಯ ಸಂಬಂಧದಿಂದ ವೀರಶೈವ ಧರ್ಮ ಈ ಕಾಲದಲ್ಲಿ ಉನ್ನತಿಯನ್ನು ಕಂಡಿತ್ತು. ತನ್ನ ದೊರೆಯೊಂದಿಗೆ ಸ್ಥಾವರಲಿಂಗ ಪೂಜಕನಾದ ಲಕ್ಕಣ್ಣ ದಂಡೇಶನು ಲಿಂಗಾಯತ ಧರ್ಮದ ಪ್ರಸಾರಕ್ಕೆಂದು ಭಿಕ್ಷಾಮಠಗಳನ್ನು ಕಟ್ಟಿಸಿದನು. ದೇವಮಂದಿರಗಳಿಗೆ ದಾನ ಕೊಟ್ಟಿದ್ಧನ್ನು ಹಿಂದೆಯೇ ನೋಡಿದ್ದೇವೆ. ಈ ಹೊತ್ತಿಗಾಗಲೇ ಲಿಂಗಾಯತರ ಧಾರ್ಮಿಕ ಇತಿಹಾಸದಲ್ಲಿ ಸ್ಥಾವರಲಿಂಗ ಹಾಗೂ ಇಷ್ಟಲಿಂಗಗಳೆರೆಡೂ ಸಹ ವೀರಶೈವರ ಜೀವನದಲ್ಲಿ ಪ್ರಮುಖ ಪಾತ್ರವಹಿಸಿದಂತೆ ಕಂಡುಬರುತ್ತದೆ.[೧೨೩] ಇದೇ ಸಮಯದಲ್ಲಿ ವಚನಕಾರರಿಗೆ ತತ್ವಗಳಿಗೆ ನಿಷ್ಠರಾಗಿ ನಿಂತ ನೂರೊಂದು ವಿರಕ್ತರ ಗುಂಪು ಪಂಚ ಆಚಾರ್ಯಗೋತ್ರಕ್ಕೆ ಸಂಬಂಧ ಕಲ್ಪಿಸಿಕೊಂಡು, ಮಠ ದೇವಸ್ಥಾನ ನಿರ್ಮಿಸಿ ವೇದಗಳಿಗೆ ನಿಷ್ಠರಾದ ಒಂದು ಗುಂಪು ಹೀಗೆ ಗುರುಜಂಗಮ ವಿರಕ್ತ ಜಂಗಮರಲ್ಲಿನ ಭೇದಗಳ ಇದೇ ಕಾಲದಲ್ಲಿ ತಲೆದೊರಿದಂತಿದೆ.[೧೨೪] ಕರಸ್ಥಲದ ನಾಗಲಿಂಗದೇವ, ಕಲ್ಲುಮಠದ ಪ್ರಭುದೇವ

ಗುರುಬಸವ, ಬತ್ತಲೇಶ್ವರ ವೀರಣ್ಣೊಡೆಯ ಮುಂತಾದ ನೂರೊಂದು ವಿರಕ್ತರು ಪ್ರೌಢ ದೇವರಾಯ ಮತ್ತು ಲಕ್ಕಣ್ಣದಂಡೇಶನ ಆಳ್ವಿಕೆಯ ಕಾಲದಲ್ಲಿ ವ್ಯವಸ್ಥೆ ಬದ್ಧವಾದ ಸಂಘಟನೆಯನ್ನು ರೂಪಿಸಿಕೊಂಡರು. ಇದರಿಂದ ವೀರಶೈವ ಸಮಾಜ ಒಂದು ಭದ್ರವಾದ ಮತ್ತು ಸ್ಥಿರವಾದ ಸ್ಥಾನವನ್ನು ಕಂಡುಕೊಂಡಿತು.

ಒಟ್ಟಾರೆಯಾಗಿ ವೀರಶೈವ ಧರ್ಮದ ಇತಿಹಾಸದಲ್ಲಿ ವಚನಕಾರರ ಕಾಲ ಎಷ್ಟು ಪ್ರಮುಖವೋ ಅಷ್ಟೇ ಪ್ರಮುಖವಾದದ್ದು ಈ ಪ್ರೌಢದೇವರಾಯನ ಕಾಲ. ಈತನ ಕಾಲದಲ್ಲಿ ಲಕ್ಕಣ್ಣ ದಂಡೇಶ ಮತ್ತು ಚಕ್ಕಣಾರ್ಯರು ಆಸಕ್ತಿಯನ್ನು ವಹಿಸಿ ಲಕ್ಷಾಂತರ ಹಣ ವೆಚ್ಚ ಮಾಡಿ ಅನೇಕ ವಚನ ವಾಙ್ಮಯವನ್ನು ಕೂಡಿಸಿ ಮಂಥನ ಮಾಡಿ ಸ್ಥಲವಿಡಿದು ಹೊಸರೂಪವನ್ನು ಕೊಟ್ಟು ಸಜ್ಜುಗೊಳಿಸಿದರು.[೧೨೫] ಈ ಪುನರುದ್ಧಾರದ ಅವಧಿಯಲ್ಲೇ ಹೊಸದಾಗಿ ವಚನಗಳನ್ನು ಮತ್ತು ಕಾವ್ಯಗಳನ್ನು ರಚಿಸಲಾಯಿತು. ಈ ಕಾರ್ಯದಲ್ಲಿ ಮಹಾಲಿಂಗದೇವರು ಕುಮಾರ ಬಂಕನಾಥ, ಚಾಮರಸ, ಕಲ್ಲುಮಠದ ಪ್ರಭುದೇವ ಕರಸ್ಥಳದ ನಾಗದೇವ, ಗುರುಬಸವ ಮಗ್ಗೆಯ ಮಾಯಿದೇವ ಮುಂತಾದ ವಿದ್ವನ್ಮಣಿಗಳು ವಿರಕ್ತರೂ ತೊಡಗಿಕೊಂಡರು. ಈ ಉದ್ಧರಣ ಕಾರ್ಯದಲ್ಲಿ ಅಲ್ಲಮನ ವ್ಯಕ್ತಿತ್ವಕೆ ವಿಶಿಷ್ಟ ಸ್ಥಾನವನ್ನು ಕಲ್ಪಿಸಿ ಉಳಿದ ವಚನಕಾರರು ಅಲ್ಲಮನ ಪಾತ್ರಕ್ಕೆ ಪೋಷಕರಾಗಿ ಸಹಾಯಕರಾಗಿದ್ದಂತೆ ನಿರೂಪಿಸಿ ಗ್ರಂಥಗಳು ರಚನೆಗೊಂಡವು.

ಹೀಗೆ ಈ ಕಾಲದಲ್ಲಿ ರಚನೆಗೊಂಡ ಗ್ರಂಥಗಳಲ್ಲಿ ಚಾಮರಸನ ಪ್ರಭುಲಿಂಗಲೀಲೆ, ಶೂನ್ಯ ಸಂಪಾದನೆ, ಸಿಂಗಿರಾಜ ಪುರಾಣಗಳು ಪ್ರಮುಖವಾದವು. ಪ್ರೌಢದೇವರಾಯನ ಸಾಮ್ರಾಜ್ಯವು ಶೈವ ಧರ್ಮದ ಪರಿಧಿಗೆ ಒಳಪಟ್ಟಿತ್ತು. ಇದರಿಂದ ರಾಜ್ಯದಲೆಲ್ಲ ಶೈವ, ವೀರಶೈವ ಧರ್ಮದ ದೇವಾಲಯಗಳು ರಚನೆಗೊಂಡವು. ಪಾರ್ವತಿ ಪರಮೇಶ್ವರ ಚಿತ್ರಗಳನ್ನೊಳಗೊಂಡ ನಾಣ್ಯಗಳು ರಾಜ್ಯದಲ್ಲಿ ಚಲಾವಣೆಗೊಂಡವು. ಇದನ್ನು ಆಧರಿಸಿ ಪ್ರೌಢದೇವರಾಯನ ಕಾಲ ವೀರಶೈವ ಧರ್ಮದ ಉನ್ನತಿಯ ಕಾಲವೆಂದು ಕರೆಯಲಾಗಿದೆ.

ಪ್ರೌಢದೇವರಾಯನ ನಂತರ ಮಲ್ಲಿಕಾರ್ಜುನ, ಇಮ್ಮಡಿ ವಿರೂಪಾಕ್ಷ, ಪ್ರೌಢದೇವರಾಯ ಪಟ್ಟಕ್ಕೆ ಬಂದರು. ಕ್ರಿ.ಶ.೧೪೫೦ರಲ್ಲಿ ಮಲ್ಲಿಕಾರ್ಜುನರಾಯನ ರಾಜ್ಯಭಾರಾವಧಿಯಲ್ಲಿ ಬಳ್ಳಾರಿ ಜಿಲ್ಲೆಯ ನಿಂಬಾಪುರದಲ್ಲಿ ಸೌಮ್ಯ ಸೋಮೇಶ್ವರ ದೇವಾಲಯವನ್ನು ನಿರ್ಮಿಸಲಾಯಿತು.[೧೨೬] ಮಲ್ಲಿಕಾರ್ಜುನ ವಿರೂಪಾಕ್ಷರ ಕಾಲವು ಕನ್ನಡ ಸಾಹಿತ್ಯ ದೃಷ್ಟಿಯಿಂದ ಬಹಳ ಉತ್ತಮವಾದ ಕಾಲ ಈ ಕಾಲದಲ್ಲಿ ವೀರಶೈವ ಗ್ರಂಥಗಳೇ ಹೆಚ್ಚಾಗಿ ರಚನೆಗೊಂಡವು.[೧೨೭] ತೋಂಟದ ಸಿದ್ಧಲಿಂಗ. ''ಸೌಂದರ ಪುರಾಣ'ವನ್ನು ಬರೆದ ಬೊಮ್ಮರಸ, ಗುಬ್ಬಿಯ ಮಲ್ಲಣಾರ್ಯ ಈ ಕಾಲದ ಪ್ರಮುಖ ವೀರಶೈವ ಕವಿಗಳು.

ಹೀಗೆ ವಿಜಯನಗರದ ಮೊದಲ ರಾಜವಂಶವಾದ ಸಂಗಮ ವಂಶದಲ್ಲಿ ಶೈವ ಮತ, ಶೈವ ಧರ್ಮ ಗ್ರಂಥಗಳೂ ಅಭಿವೃದ್ಧಿಯಾದವು. ಆದಿಕಾಲದ ಅರಸರು ಶೈವ ವೀರಶೈವ ಪಂಥಗಳಲ್ಲಿ ಒಲವು

ತೋರಿದರೆ ಸಾಳುವ ತುಳುವರು ವೈಷ್ಣವ ಪಂಥಕ್ಕೆ ಶರಣಾದರು. ಅರವೀಡು ವಂಶದವರು ಸಾಕ್ಷಾತ್ ಶ್ರೀ ವೈಷ್ಣವ ಪಂಥದ ಶಿಷ್ಯರಾದರು. ಆದರೆ ಯಾರೂ ಯಾವ ವಿಧವಾದ ಅಂಧಶ್ರದ್ಧೆಗೆ, ಧರ್ಮಾಂಧತೆಗೆ ಗುರಿಯಾಗದೇ ಸನಾತನ ಧರ್ಮಾಭಿವೃದ್ಧಿಗೆ ಕಾರಣರಾಗಿದ್ದಾರೆ. ಎಲ್ಲಾ ಪಂಥಗಳಿಗೂ ಸಮಾನ ಪ್ರೋತ್ಸಾಹ ನೀಡಿ ತಮ್ಮ ಹೃದಯ ವೈಶಾಲ್ಯವನ್ನು ತೋರಿದ್ದಾರೆ. ಈ ಕಾರಣದಿಂದಲೇ ವಿಜಯನಗರದಲ್ಲಿ ಶೈವ, ವೀರಶೈವ, ಜೈನ ಪಂಥಗಳು ಏಕಕಾಲದಲ್ಲಿಯೇ ಬೆಳೆದುಬರಲು ಸಾಧ್ಯವಾಯಿತು.

ಸಂಗಮ ವಂಶದ ತರುವಾಯ ಸಾಳುವ ವಂಶದವರು ವಿಜಯನಗರ ಸಾಮ್ರಾಜ್ಯದ ಅಧಿಕಾರದ ಚುಕ್ಕಣಿ ಹಿಡಿದರು. ಸಂಗಮ ವಂಶದ ರಾಜರಾದ ಮಲ್ಲಿಕಾರ್ಜುನ ವಿರೂಪಾಕ್ಷರು ಅಧಿಕಾರದಲ್ಲಿರುವಾಗಲೇ, ಸಾಳವಂಶದ ನರಸಿಂಗರಾಯನು ರಾಜಪ್ರತಿನಿಧಿಯಾಗಿದ್ದುಕೊಂಡು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡನು. ಕೊನೆಯಲ್ಲಿ ಸಂಗಮವಂಶವನ್ನೇ ಬದಿಗೊತ್ತಿ ಅಧಿಕಾರಕ್ಕೆ ಬಂದ. ಈತನ ನಂತರ ಈತನ ಮಗ ಅಧಿಕಾರದ ಚುಕ್ಕಾಣಿ ಹಿಡಿದನು. ಈ ಇಬ್ಬರು ಹದಿಮೂರು ವರ್ಷ ಅಧಿಕಾರವನ್ನು ಹೊಂದಿದ್ದರು. ಸಾಳುವ ವಂಶದ ಅರಸರು ಕ್ರಮ ಕ್ರಮವಾಗಿ ವೈಷ್ಣವರಲ್ಲಿ ಹೆಚ್ಚು ವಿಶ್ವಾಸ ತೋರಿಸುತ್ತ ಬಂದುದರಿಂದ ಸಂಗಮ ವಂಶೀಯರ ಆಶ್ರಯದಲ್ಲಿದ್ದ ವೀರಶೈವರ ಪ್ರಾಬಲ್ಯ ಇವರ ಕಾಲದಲ್ಲಿ ಕಡಿಮೆಯಾಗುತ್ತಾ ಬಂದಂತೆ ತೋರುತ್ತದೆ.[೧೮]

ಸಾಳುವ ವಂಶವು ಹೆಚ್ಚುಕಾಲ ಆಳ್ವಿಕೆ ನಡೆಸಲಿಲ್ಲ ಹದಿನಾರನೆಯ ಶತಮಾನದ ಆರಂಭದ ದಶಕದಲ್ಲಿ ವಿಜಯನಗರ ಸಾಮ್ರಾಜ್ಯ ತುಳುವ ವಂಶದ ಪಾಲಾಯಿತು. ತುಳುವ ನರಸನಾಯಕನು ೧೫೦೫ರಿಂದ ೧೫೦೯ವರೆಗೆ ರಾಜ್ಯಭಾರ ಮಾಡಿದನು. ಕ್ರಿ.ಶ.೧೫೦೯ ರಿಂದ ತುಳುವ ವಂಶದ ಪ್ರಸಿದ್ಧಿ ಪಡೆದ ಕೃಷ್ಣದೇವರಾಯನು ಆಳ್ವಿಕೆಗೆ ಬಂದನು. ಇದನ್ನು ಆಂಧ್ರಪ್ರದೇಶದ ಗುಳ್ಳಂ ಶಾಸನ ತಿಳಿಸುತ್ತದೆ.[೧೯] ಕ್ರಿ.ಶ.೧೫೧೦ರಲ್ಲಿ ಈತನು ಪಟ್ಟಾಭಿಷೇಕ ಮಹೋತ್ಸವವನ್ನು ಆಚರಿಸಿಕೊಂಡನು. ಈ ಕಾಲದಲ್ಲೇ ವಿರುಪಾಕ್ಷ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿಸಿ ಕಲ್ಯಾಣ ಮಂಟಪ ರಂಗ ಮಂಟಪವನ್ನು ನಿರ್ಮಿಸಿದನೆಂದು ಹಂಪಿ ವಿರೂಪಾಕ್ಷ ದೇವಸ್ಥಾನದ ಆವರಣದಲ್ಲಿನ ಶಾಸನ ತಿಳಿಸುತ್ತದೆ.[೨೦]

ಸಾಳುವ ವಂಶದ ಕಾಲದಲ್ಲಿ ಪ್ರಭಾವ ಬೀರಿದ ಶ್ರೀವೈಷ್ಣವ, ವೈಷ್ಣವ ಮತಗಳು, ತುಳುವ ವಂಶದಲ್ಲೂ ಪ್ರಬಲವಾದವು. ಆದುದರಿಂದ ಈ ಕಾಲದ ಸಾಹಿತ್ಯ ಬಹುಮಟ್ಟಿಗೆ ವೈಷ್ಣವ ಗ್ರಂಥಗಳೇ ಆಗಿವೆ.[೨೧] ಆದರೆ ಕೃಷ್ಣದೇವರಾಯ ಅಧಿಕಾರಕ್ಕೆ ಬಂದ ಮೇಲೆ ಈ ತಾರತಮ್ಯ ಭಾವನೆ ಕಡಿಮೆಯಾಯಿತು.

ತುಳುವ ವಂಶದ ಕೃಷ್ಣದೇವರಾಯನ ಕಾಲದಲ್ಲಿ ವಿಶೇಷವಾಗಿ ಪ್ರೋತ್ಸಾಹವನ್ನು ಹೊಂದಿದ ವ್ಯಾಸರಾಯರೂ ಅವರ ಶಿಷ್ಯರಾದ ಕನಕದಾಸರೂ, ಪುರಂದರದಾಸರೂ, ವಾದಿರಾಜರೂ ವಿಜಯೇಂದ್ರ ಮೊದಲಾದ ಕವಿಗಳು ಆತನ ಆಸ್ಥಾನದಲ್ಲಿದ್ದರು.[೨೨] ಇವರೆಲ್ಲರೂ ವೈಷ್ಣವ ಧರ್ಮವನ್ನು ಜನತೆಯ

ಹತ್ತಿರ ತೆಗೆದುಕೊಂಡು ಹೋದರು. ಇವರ ಜೊತೆಯಲ್ಲೇ ಕೃಷ್ಣದೇವರಾಯನ ಆಸ್ಥಾನದಲ್ಲಿ, ತಿಮ್ಮಣ್ಣ, ಗುಬ್ಬಿಯ ಮಲ್ಲಣಾರ್ಯ ವಿರುಪರಾಜ, ನಂಜುಂಡ ಮುಂತಾದ ಶೈವಕವಿಗಳಿಗೂ ರಾಜನು ಉದಾರ ಆಶ್ರಯ ನೀಡಿದನು. ರಾಜನು ವೈಷ್ಣವ ಮತಾವಲಂಬಿಯಾದರೂ ಅವನು ಶೈವಧರ್ಮದ ಕವಿಗಳಿಗೆ ನೀಡಿದ ಆಶ್ರಯವು ಅವನ ಉದಾರತೆಯ ಸಂಕೇತವಾಗಿದೆ.

ಕೃಷ್ಣದೇವರಾಯನ ಮೊದಲ ಕಾಲದ ಗುಳ್ಳಂ ಶಾಸನ ಶೈವ ದೇವರಾದ ಶ್ರೀ ವಿರೂಪಾಕ್ಷ ದೇವರ ದೇವಸ್ಥಾನವನ್ನು ನಿರ್ಮಿಸಿ ಬಾವಿಯನ್ನು ಅಗೆಸಿ, ಮಾವಿನ ತೋಪನ್ನು ನಿರ್ಮಿಸಿದ ಉಲ್ಲೇಖವನ್ನು ನೀಡುತ್ತದೆ.[೧೩೩] ಪಟ್ಟಾಭಿಷೇಕ ಮಹೋತ್ಸವದ ಸಮಯದಲ್ಲಿ ವಿರೂಪಾಕ್ಷನಿಗೆ ಸಲ್ಲಿಸಿದ ಸೇವೆಯನ್ನು ನೋಡಬಹುದು. ಇದೇ ದೇವರಿಗೆ ಹಂಪ ದೇವನಹಳ್ಳಿಯನ್ನು ೧೫೧೧ರಲ್ಲಿ ದಾನ ನೀಡಿದನು.[೧೩೪] ಕ್ರಿ.ಶ.೧೫೧೩ರಲ್ಲಿ ಹಂಪಿಯಲ್ಲಿರುವ ಪ್ರಸನ್ನ ವಿರೂಪಾಕ್ಷ ದೇವರಿಗೆ ದಾನ ನೀಡಿದನು.[೧೩೫]

ಕ್ರಿ.ಶ.೧೫೨೩ರಲ್ಲಿ ಬಳ್ಳಾರಿ ಜಿಲ್ಲೆಯ ಕುರೆಗುಪ್ಪೆ ಗ್ರಾಮದಲ್ಲಿ ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿ ಪೂಜೆ ನೈವೇದ್ಯಕ್ಕೆ ದಾನ ಬಿಟ್ಟಿದನ್ನು ಶಾಸನವು ತಿಳಿಸುತ್ತದೆ.[೧೩೬] ತುಳುವಂಶದ ಕೃಷ್ಣದೇವರಾಯನು ಶೈವ ಧರ್ಮದಲ್ಲಿ ಆಸಕ್ತಿಯನ್ನು ಹೊಂದಿದ. ಆದ್ದರಿಂದಲೇ ಕರ್ನಾಟಕದ ಕೆಲವೊಂದು ದೇವಾಲಯಗಳು ನಿರ್ಮಾಣಗೊಂಡವು. ಅನೇಕ ದೇವಾಲಯಗಳು ಜೀರ್ಣೋದ್ಧಾರಗೊಂಡವು ಎಂದು ಹೇಳಬಹುದು. ಈತನ ಆಸ್ಥಾನದಲ್ಲೇ ವೀರಶೈವನೆಂದು ಹೇಳಬಹುದಾದ ಬಸವಪ್ಪಯ್ಯನೆಂಬ ಮಂತ್ರಿಯೊಬ್ಬನಿದ್ದನು.[೧೩೭]

ವಿಜಯನಗರದ ಸರ್ವಶೇಷ್ಠನಾದ ದೊರೆ ಶ್ರೀಕೃಷ್ಣದೇವರಾಯ ಸಂಪದ್ಭರಿತವಾಗಿದ್ದ ಈತನ ಕಾಲವನ್ನು ಅನೇಕ ವಿದೇಶಿಯರು ಹಾಡಿ ಹೊಗಳಿದ್ದಾರೆ. ಇದನ್ನು ಅವನ ನಾಣ್ಯಗಳಲ್ಲಿಯೂ ಕಾಣಬಹುದು. ಈತನ ಕಾಲದಲ್ಲಿ ಅನೇಕ ಹೊಸ ನಮೂನೆಯ ನಾಣ್ಯಗಳು ಮುದ್ರಿತವಾದವು. ಶೈವ ಮತ್ತು ವೈಷ್ಣವ ಚಿನ್ಹೆಯ ನಾಣ್ಯಗಳು ಯಾವ ಭೇದ ಭಾವವೂ ಇಲ್ಲದೆ ಮುದ್ರಿತವಾದವು.[೧೩೮]

ಕೃಷ್ಣದೇವರಾಯ ಕಾಲದಲ್ಲಿ ಚಲಾವಣೆಯಲ್ಲಿದ್ದ ಒಂದು ಚಿನ್ನದ ನಾಣ್ಯದ ಮುಂದಿನ ಭಾಗದಲ್ಲಿ ಕುಳಿತಿರುವ ಭಂಗಿಯಲ್ಲಿರುವ ಶಿವ ಅವನ ತೊಡೆಯ ಮೇಲೆ ಪಾರ್ವತಿ, ಶಿವನ ಬಲಗೈಯಲ್ಲಿ ತ್ರಿಶೂಲ, ಎಡಗೈ ಪಾರ್ವತಿಯ ಮೇಲೆ ಇದೆ. ದೊರೆ ವೈಷ್ಣವನಾದರೂ ಶೈವ ಧರ್ಮದಲ್ಲಿ ಸಮಾನ ಗೌರವ ಹೊಂದಿದ್ದನೆಂಬುದನ್ನು ಶಿವಪಾರ್ವತಿಯರ ನಾಣ್ಯ ದೃಢಪಡಿಸುತ್ತದೆ.[೧೩೯] ಇನ್ನೊಂದು ತಾಮ್ರದ ನಾಣ್ಯದ ಮೇಲೆ ನಂದಿಯ ಚಿತ್ರವಿರುವುದನ್ನು ಕಾಣಬಹುದು ಇದು ಕೂಡ ಅವನ ಶೈವ ಧರ್ಮದ ಮೇಲಿನ ಗೌರವವನ್ನು ಸೂಚಿಸುತ್ತದೆ.[೧೪೦]

ಸಂಗಮ ವಂಶದಲ್ಲಿ ಉತ್ತುಂಗ ಪರಾಕಾಷ್ಠತೆಯನ್ನು ಹೊಂದಿದ ಶೈವ, ವೀರಶೈವ ಧರ್ಮಗಳು ಅದು ಕೊನೆಗೊಂಡಾಗ ಮುಂದಿನ ಅರಸರು ವೈಷ್ಣವ ಧರ್ಮದತ್ತ ತಿರುಗಿದರು. ಹಂಪೆಯನ್ನು ಕೇಂದ್ರವಾಗಿಟ್ಟು

ಬೆಳೆದುಬಂದ, ನೂರೊಂದು ವಿರಕ್ತ ಪರಂಪರೆಯು ಕರ್ನಾಟಕದ ದಕ್ಷಿಣದ ಎಡೆಯೂರಿಗೆ ತನ್ನ ಸ್ಥಾನವನ್ನು ಬದಲಿಸಿಕೊಂಡಿತು. ರಾಜಾಶ್ರಯವು ಕಡಿಮೆಯಾದ ಕಾರಣ ಶರಣ ಧರ್ಮ ಪಟ್ಟಣದ ಆಶ್ರಯ ಬೇಡದೆ ಹಳ್ಳಿಗಳಲ್ಲಿ ಸ್ಥಿರವಾಗಿ ನಿಲ್ಲಲು ಪ್ರಯತ್ನಿಸಿತು. ಗುಬ್ಬಿ, ಎಡೆಯೂರು, ಗುಮ್ಮಳಾಪುರ, ಹರದನಹಳ್ಳಿಗಳು ಶರಣ ಧರ್ಮದ ನಿಷ್ಠೆಯ ಕೇಂದ್ರಗಳಾಗಿ ಬೆಳೆದು ಬಂದವು. ಕೃಷ್ಣದೇವರಾಯನು ಶೈವಧರ್ಮವನ್ನು ಕಡಗಣಿಸದೆ ಇದಕ್ಕೆ ರಾಜಾಶ್ರಯವನ್ನು ನೀಡಿ ಈ ಧರ್ಮವನ್ನು ಪೋಷಿಸಿದ್ದರಿಂದ ಶರಣಧರ್ಮದಲ್ಲಿ ಮತ್ತೆ ಈ ಕಾಲದಲ್ಲಿ ಚೇತರಿಕೆ ಉಂಟಾಯಿತು. ಇದರಿಂದ ಹದಿಮೂರನೆಯ ಶತಮಾನದಲ್ಲಿ ಹಳ್ಳಿಗಳಲ್ಲಿ ಮರೆಯಾಗಿದ್ದ ಶರಣ ಧರ್ಮ ಈ ಕಾಲದಲ್ಲಿ ಮತ್ತೆ ಹಂಪೆಯಲ್ಲಿ ನಂತರ ಹರದನಹಳ್ಳಿ ಎಡೆಯೂರುಗಳಲ್ಲಿ ಪ್ರತ್ಯಕ್ಷ ಕಾಣಿಸಿಕೊಂಡವು. ಹೀಗೆ ಕೃಷ್ಣದೇವರಾಯನ ಕಾಲದಲ್ಲಿ ಶೈವ ಧರ್ಮ ಮತ್ತೊಮ್ಮೆ ಹುಲಸಾಗಿ ಬೆಳೆವಣಿಗೆ ಕಂಡಿತು.[೧೪೧]

ಕೃಷ್ಣದೇವರಾಯನ ನಂತರದಲ್ಲಿ ಅಚ್ಯುತದೇವರಾಯನು ವಿಜಯನಗರದ ಚುಕ್ಕಾಣಿಯನ್ನು ಹಿಡಿದನು. ಈತನು ಕ್ರಿ.ಶ.೧೫೩೧ರಲ್ಲಿ ಹೊಸಪೇಟೆಯ ಸಣ್ಣಕ್ಕಿ ವೀರಭದ್ರೇಶ್ವರ ದಾನ ನೀಡಿದ್ದನ್ನು ಉಲ್ಲೇಖಿಸಿದೆ. ಶಾಸನದಲ್ಲಿ "ಗೌರವೇಶ್ವರ ದೇವರು" ಎಂದು ಉಲ್ಲೇಖಿಸಿದರೆ, ಹೊಸಪೇಟೆಯನ್ನು ತಿರುಮಲದೇವಿ ಅಮ್ಮನವರ ಪಟ್ಟಣ ಎಂದು ಉಲ್ಲೇಖಿಸಿದೆ.[೧೪೨] ಕ್ರಿ.ಶ.೧೫೩೨ ಬಳ್ಳಾರಿ ಜಿಲ್ಲೆಯ ಕುಡುತಿನಿಯಲ್ಲಿ ಈತನ ಕಾಲದಲ್ಲೇ ವೀರಭದ್ರೇಶ್ವರ ದೇವರ ನೈವೇದ್ಯಕ್ಕೆ ಜೀರ್ಣೋದ್ಧಾರಕ್ಕೆ ದಾನ ನೀಡಿದ್ದನ್ನು ಹೇಳುತ್ತದೆ.[೧೪೩] ಹಾವಿನಾಳು ವೀರಪುರದ ವಿರೂಪಾಕ್ಷ ದೇವಾಲಯದ ಆವರಣದಲ್ಲಿ ಶ್ರೀ ಬುಕ್ಕೇಶ್ವರ ದೇವ ಪ್ರತಿಷ್ಠೆಯನ್ನು ಮಾಡಿಸಿ ದಾನವನ್ನು ನೀಡಲಾಗಿದೆ. ಶಾಸನದ ಕಾಲ ಕ್ರಿ.ಶ.೧೫೩೪.[೧೪೪] ಬಯಕಾರ ರಾಮಪ್ಪನೆಂಬ ಕೊಂಡವೀಡು ಪ್ರಾಂತ್ಯಧಿಕಾರಿಯು ಅನೇಕ ಶಿವದೇವಾಲಯಗಳನ್ನು ನಿರ್ಮಿಸುವ ಮೂಲಕ ಶೈವ ಧರ್ಮಕ್ಕೆ ಮತ್ತು ವೀರಶೈವ ಧರ್ಮಕ್ಕೆ ವಿಶೇಷ ಪ್ರೋತ್ಸಾಹ ನೀಡಿದನು. ಈತನ ಕಾಲದ ಪ್ರಮುಖ ದೇವಾಲಯಗಳು ಈಗಲೂ ಹೊಸಪೇಟೆ ತಾಲೂಕಿನ ತಿಮ್ಮಲಾಪುರದಲ್ಲಿ ಕಾಣಸಿಗುತ್ತವೆ. ಕ್ರಿ.ಶ.೧೫೩೯ರಲ್ಲಿ ಈತನು ತಿಮ್ಮಲಾಪುರದಲ್ಲಿ ತ್ರಿಕೂಟಾಚಲ ಶೈವದೇವಾಲಯವನ್ನು ನಿರ್ಮಿಸಿದನು.[೧೪೫] ಅದರ ಪಕ್ಕದಲ್ಲಿ ವೀರಭದ್ರ ದೇವಾಲಯವನ್ನು ನಿರ್ಮಿಸಲಾಗಿದೆ. ತಿಮ್ಮಲಾಪುರದಲ್ಲಿ ಮಲ್ಲಿಕಾರ್ಜುನ. ಕಾಶಿವಿಶ್ವೇಶ್ವರ ದೇವಾಲಯಗಳನ್ನು ನಿರ್ಮಿಸಲಾಗಿದೆ. ಅಚ್ಯುತ ದೇವರಾಯನ ಕಾಲದಲ್ಲಿ ಬಯಕಾರ ರಾಮಪ್ಪ ಈ ದೇವರುಗಳನ್ನು ನಿರ್ಮಿಸಿದ್ದು ಆತನ ಬಹುದೊಡ್ಡ ಸಾಧನೆ. ಹಂಪೆಯನ್ನು ಹೊರತುಪಡಿಸಿದರೆ ದಕ್ಷಿಣ ಭಾರತದಲ್ಲೇ ವಿಜಯನಗರ ಕಾಲದ ಅಧಿಕ ಸಂಖ್ಯೆಯ ದೇವಾಲಯಗಳನ್ನು ಒಳಗೊಂಡಿರುವ ಸ್ಥಳವೆಂದರೆ ತಿಮ್ಮಲಾಪುರ ಎಂದು ಹೇಳಬಹುದು.[೧೪೬] ಹೀಗೆ ಅಚ್ಯುತರಾಯನ ಕಾಲದಲ್ಲಿ ಶೈವ ಧರ್ಮವು ಪೋಷಣೆಗೆ ಒಳಪಟ್ಟಿತು.

ಅಚ್ಯುತರಾಯನ ತರುವಾಯ ಕ್ರಿ.ಶ.೧೫೪೫ ಸದಾಶಿವರಾಯನು ಅಧಿಕಾರಕ್ಕೆ ಬಂದನು. ಈತನು ಸರ್ವಧರ್ಮಗಳ ಸಮತಾ ಭಾವದ ದೊರೆಯಾಗಿದ್ದನು. ಸದಾಶಿವರಾಯನ ರಾಜ್ಯಭಾರಾವಧಿಯಲ್ಲಿ

ಉದ್ಯಾನ ವೀರಭದ್ರದೇವ ಸ್ಥಾನವು ದಳವಾಯಿ ಜಂಗಮಯ್ಯನೆಂಬನಿಂದ ನಿರ್ಮಾಣವಾಯಿತು.[೧೪೭] ಇದರಲ್ಲಿ ೩.೬ ಮೀಟರ್ ಎತ್ತರದ ಶಿಲಾಮೂರ್ತಿಯನ್ನು ಪ್ರತಿಷ್ಠಾಪಿಸಲಾಯಿತು. ಕ್ರಿ.ಶ.೧೫೪೭ ಹೊಸಪೇಟೆ ತಾಲೂಕು ಅನಂತಪುರಂನಲ್ಲಿ ಮಲ್ಲಿಕಾರ್ಜುನ ದೇವಾಲಯ ನಿರ್ಮಾಣಗೊಂಡಿದೆ.[೧೪೮] ಇದುವರೆಗೂ ವೀರಶೈವರಿಂದ ಪೂಜೆಗೊಳ್ಳುತ್ತಿದ್ದು ಬಾಗಳಿಯ ಕಲ್ಲೇಶ್ವರನಿಗೆ ಕ್ರಿ.ಶ.೧೫೫೦ರಲ್ಲಿ ದಾನವನ್ನು ನೀಡಲಾಗಿದೆ.[೧೪೯] ಕ್ರಿ.ಶ. ೧೫೫೨ರಲ್ಲಿ ಕಂಪಲಿಯಲ್ಲಿ ವಿರೂಪಾಕ್ಷ ಗುಡಿಯ ಒಂದು ಅಂಕಣದಲ್ಲಿ ಪಂಪಾದೇವಿಯನ್ನು ಪ್ರತಿಷ್ಠಾಪನೆ ಮಾಡಿ ಕಲ್ಲು ಮಾಳಿಗೆಯನ್ನು ಕಟ್ಟಿಸಿದ ಉಲ್ಲೇಖ ಇಲ್ಲಿನ ಶಾಸನವು ಉಲ್ಲೇಖಿಸಿದೆ.[೧೫೦]

ವಿಜಯನಗರ ಸಾಮ್ರಾಜ್ಯದಲ್ಲಿ ಶೈವ ಧರ್ಮವು ಇಡೀ ಸಾಮ್ರಾಜ್ಯವನ್ನೆಲ್ಲ ವ್ಯಾಪಿಸಿತ್ತು. ಪಂಪಾ ವಿರೂಪಾಕ್ಷ ಇವರ ಮನೆದೈವವಾಗಿದೆ. ಇಡೀ ಸಾಮ್ರಾಜ್ಯದ ಅಧಿನಾಯಕನಾಗಿದ್ದನು. ವಿಜಯನಗರದ ರಾಜವಂಶಗಳು ಯಾವುದೇ ಧರ್ಮವನ್ನು ಅನುಸರಿಸಲಿ, ಆದರೆ ರಾಜ್ಯದ ಅಧಿನಾಯಕ ಪಂಪಾ ವಿರೂಪಾಕ್ಷನೇ ಆದ್ದರಿಂದಲೆ ಈತನ ಹೆಸರಿನಲ್ಲಿ ಶಾಸನ ಹಾಕಿಸುವ ಪದ್ಧತಿಯನ್ನು ಇಡೀ ರಾಜ್ಯದ ತುಂಬೆಲ್ಲ ನೋಡಬಹುದು.

ಭಾರತದಲ್ಲಿರುವ ಅನೇಕ ಶೈವಕ್ಷೇತ್ರಗಳಲ್ಲಿ ಪಂಪಾಕ್ಷೇತ್ರವೂ ಒಂದು ಪಂಪಾಕ್ಷೇತ್ರಕ್ಕೆ ಬಾಷ್ಕರ ಕ್ಷೇತ್ರವೆಂಬ ಮತ್ತೊಂದು ಹೆಸರು ಇದ್ದಿತು. ಆದರೆ ಪಂಪಾಕ್ಷೇತ್ರವೆಂಬ ಹೆಸರೇ ಹೆಚ್ಚು ಜನಪ್ರಿಯವಾಗಿತ್ತು.[೧೫೧] ಈ ಪಂಪಾಕ್ಷೇತ್ರಕ್ಕೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ದ್ವಾರಪಾಲಕರಿದ್ದಾರೆ. ಪೂರ್ವಕ್ಕೆ ಕಿನ್ನರೇಶ್ವರ, ಪಶ್ಚಿಮಕ್ಕೆ ಸೋಮೇಶ್ವರ, ಉತ್ತರಕ್ಕೆ ವಾಣಿಭದ್ರೇಶ್ವರ, ದಕ್ಷಿಣಕ್ಕೆ ಜಂಬುಕೇಶ್ವರ ಎಂಬ ದ್ವಾರಪಾಲಕರು ನಟ್ಟ ನಡುವೆ ಪಂಪಾವಿರೂಪಾಕ್ಷನ ಸನ್ನಿದಿ ಇದೆ ಎಂದು ಆ ಕಾಲದ ಕಾವ್ಯಗಳು ವರ್ಣಿಸಿವೆ. ಇದು ಶೈವ ಕ್ಷೇತ್ರ ಎಂಬುದನ್ನು ಎಲ್ಲಾ ಮೂಲಗಳಿಂದಲೂ ಗುರುತಿಸಲು ಶಕ್ಯವಿದೆ.

ವಿಜಯನಗರದ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಶೈವ ಪಂಥಗಳೆಂದರೆ ಕಾಳಾಮುಖರು, ಲಾಕುಳರು, ಪಾಶುಪತರು, ಕಾಪಾಲಿಕರು, ಮತ್ಸೇಂದ್ರನಾಥರು, ಶಾಕ್ತರು, ಗಾಣಪತ್ಯರು ಮತ್ತು ವೀರಶೈವರು ಎಂಬ ಶಾಖೆಗಳನ್ನು ಹೊಂದಿತ್ತು.[೧೫೨] ಇವುಗಳು ತಮ್ಮ ತಮ್ಮದೇ ಆದ ಸಂಪ್ರದಾಯವನ್ನು ಹೊಂದಿದ್ದವು ಮತ್ತು ರಾಜಕೀಯವಾಗಿ ಶಕ್ತಿಯುತವಾಗಿದ್ದ ಪಂಥಗಳೆಂದರೆ ಕಾಳಾಮುಖರು ಪಾಶುಪತರು, ಅದ್ವೈತಿಗಳು, ವೀರಶೈವರು ಎಂದೇ ಹೇಳಬೇಕು.

ಅವರವರೊಳಗೆ ಅಷ್ಟಾಗಿ ಸೈದ್ಧಾಂತಿಕ ಅಥವಾ ತತ್ವಾತ್ಮಕ ಭಿನ್ನಾಭಿಪ್ರಾಯಗಳಿರಲಿಲ್ಲ. ಇದಕ್ಕೇನೇ ವಿಜಯನಗರ ಕಾಲದಲ್ಲಿ ಒಬ್ಬ ಪ್ರಜೆಯು ಒಂದು ಪಂತದ ನಂಬಿಕೆ ಕೈಬಿಟ್ಟು ಇನ್ನೊಂದು ಪಂಥಕ್ಕೆ ಪಂಥಾಂತರ ಹೊಂದುವುದು ಸರ್ವೇಸಾಮಾನ್ಯವಾಗಿತ್ತು.[೧೫೩] ಶೈವ ಧರ್ಮದೊಳಗಿನ ಈ ಪಂಥಾಂತರವು

ವಿಶೇಷವಾದ ಗಮನವನ್ನೇನೂ ಪಡೆಯುತ್ತಿರಲಿಲ್ಲ. ಶೈವ ಧರ್ಮದಲ್ಲಿ ಹನ್ನೆರಡನೆಯ ಶತಮಾನದಲ್ಲಾದ ಧಾರ್ಮಿಕ ಕ್ರಾಂತಿಯ ಪ್ರಭಾವದಿಂದ ಕರ್ನಾಟಕದಲ್ಲಿ ಜನತೆ ಈ ಹೊಸ ಧರ್ಮದ ತತ್ವಗಳಿಗೆ ಹೆಚ್ಚು ಬದ್ಧರಾಗುತ್ತಾ ಬಂದರು. ಕೊನೆಗೆ ವಿಜಯನಗರದ ಕಾಲಕ್ಕಾಗಲೇ ಶೈವ ಪಂಥಗಳಲ್ಲಿ ಹೆಸರು ಮಾಡಿದ ಕೆಲವು ಪಂಥಗಳು ವೀರಶೈವ ಧರ್ಮದಲ್ಲಿ ಲೀನವಾದವು.[೧೫೪] ಇನ್ನೂ ಕೆಲವು ತಮ್ಮ ಮಿತದಲ್ಲೇ ನಂಬಿಕೆ ಇಟ್ಟು ಹಾಗೇನೆ ಉಳಿದು ಬಂದವು. ಸಾಮ್ರಾಜ್ಯದ ಮಧ್ಯದ ಅವಧಿಯಿಂದ ಶೈವ ಮತ್ತು ವೀರಶೈವ ಎಂಬ ಪಂಥಗಳು ಶೈವ ದೇವಾಲಯದ ರಚನೆಗೆ ಮತ್ತು ಶೈವ ಸಂಸ್ಕೃತಿಯ ಉಳಿವಿಗೆ ಕಾರಣವಾದವು.

ವಿಜಯನಗರದ ಕಾಲದ ವೀರಶೈವ ಮತ್ತು ಶೈವ ಪಂಥಗಳಲ್ಲಿ ತಾತ್ವಿಕ ಅಥವಾ ಸೈದ್ಧಾಂತಿಕ ಬೇಧಗಳಿಲ್ಲ. ಆದ್ದರಿಂದಲೇ ಮೊದಲೇ ಹೇಳಿದಂತೆ ಒಂದು ಪಂಥದಿಂದ ಇನ್ನೊಂದು ಪಂಥಕ್ಕೆ ಬದಲಾವಣೆ ಹೊಂದುವುದು ಈ ಕಾಲದಲ್ಲಿ ಸಹಜವಾಗಿತ್ತು. ಹಾಗೇ ಪಂಥಾಂತರ ಹೊಂದಿದ ನಂತರವೂ ಈ ಕಾಲದಲ್ಲಿ ಪೂರ್ವದ ಗೋತ್ರಗಳ ಹೆಸರುಗಳನ್ನು ಹಾಗೆಯೇ ತಮ್ಮ ಹೆಸರುಗಳೊಂದಿಗೆ ಉಳಿಸಿಕೊಳ್ಳುತ್ತಿದ್ದರು. ಉದಾಹರಣೆಗೆ ಲಕ್ಕಣ್ಣ ದಂಡೇಶನು ವೀರಶೈವ ಧರ್ಮದ ಕವಿ ತನ್ನ ಗ್ರಂಥವಾದ "ಶಿವ ತತ್ವ ಚಿಂತಾಮಣಿ"ಯಲ್ಲಿ ವೀರಶೈವ ಸಿದ್ಧಾಂತವನ್ನು ವಿಶೇಷ ವಿವರಣೆಗಳೊಂದಿಗೆ ವಿವರಿಸಿದ್ದಾನೆ. ಹೀಗಿದ್ದರೂ ಈತನು ತನ್ನನ್ನು ವಿಷ್ಣುವರ್ಧನ ಗೋತ್ರದವನು, ನನ್ನ ತಂದೆ ಹೆಗ್ಗಡದೇವ ತಾಯಿ ಬಮ್ಮಾಯಮ್ಮ ಎಂದು ಹೇಳಿಕೊಂಡಿದ್ದಾನೆ.[೧೫೫] ಶಂಕರಯ್ಯನೆಂಬ ಅಧಿಕಾರಿಯ ತಂದೆ ಬಸವಣ್ಣನೆಂದು ಗೋತ್ರ "ವಿಶ್ವಾಮಿತ್ರಗೋತ್ರ"ವೆಂದು ಹೇಳಿಕೊಂಡಿದ್ದಾನೆ.[೧೫೬] ಹೀಗಾಗಿ ಈ ಕಾಲದ ಜನರ ಗೋತ್ರಗಳಿಂದ ಅಥವಾ ಹೆಸರುಗಳಿಂದ ಶೈವ, ವೀರಶೈವ ಎಂದು ಸ್ಪಷ್ಟವಾಗಿ ಗುರುತಿಸಲು ಸಾಧ್ಯವೇ ಇಲ್ಲ. ಇದೇ ರೀತಿಯಲ್ಲಿ ದೇವಾಲಯಗಳನ್ನು ಕೂಡ ವರ್ಗೀಕರಿಸಿ ಇದು ಶೈವ ದೇವಸ್ಥಾನ, ಇದು ವೀರಶೈವ ದೇವಸ್ಥಾನ ಎಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ವಿಜಯನಗರ ಕಾಲದ ಶೈವ ಧರ್ಮೀಯರು ವಿಶಾಲವಾದ ಭಾವನೆಯನ್ನು ಹೊಂದಿದ್ದರು. ಇವರು ಎಲ್ಲಾ ಶೈವ ದೇವಾಲಯಗಳಿಗೂ ಪೂಜೆ ಸಲ್ಲಿಸುತ್ತಿದ್ದರು ಮತ್ತು ತಮ್ಮ ದಾನ ದತ್ತಿಗಳನ್ನು ನೀಡುತ್ತಿದ್ದರು. ಇದರಿಂದಾಗಿಯೇ ಈ ಅಧ್ಯಾಯದಲ್ಲಿ ಒಟ್ಟಾರೆ ಶೈವ ಧರ್ಮದ ದೇವಾಲಯಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ರಹಮತ್ ತರೀಕೆರೆ(ಸಂ), ಧರ್ಮ : ವಿಶ್ವಕೋಶ, ಭಾಗ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೧೦೦

೨. ಅದೇ, ಪು.೧೦೦

೩. ಅದೇ, ಪು.೧೫೨

೪. ಅದೇ, ಪು.೭೯

೫. Sri John Marshail's; **Mohenjodero and the Indus Civilization,** Pp.52-4

೬. ಮಹೇಶ ಕೆ., ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು, (ಅಪ್ರಕಟಿತ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧ), ಪು.೭

೭. ರಹಮತ್ ತರೀಕೆರೆ(ಸಂ), ಧರ್ಮ : ವಿಶ್ವಕೋಶ, ಭಾಗ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೧೦೦

೮. ಮಹೇಶ ಕೆ., ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು, (ಅಪ್ರಕಟಿತ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ.ಮಹಾಪ್ರಬಂಧ) ಪು.೭

೯. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪು.೧೯೬

೧೦. ಅದೇ, ಪು.೧೯೬

೧೧. ಸೂರ್ಯನಾಥ ಕಾಮತ್, ಅದೇ, ಪು.೨೪

೧೨. ಸೂರ್ಯನಾಥ ಕಾಮತ್, **ಕರ್ನಾಟಕ ಇತಿಹಾಸ,** ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೮೭, ಪು.೨೫

೧೩. ಅದೇ, ಪು.೪೧

೧೪. **ಕರ್ನಾಟಕ ಪರಂಪರೆ,** ಭಾಗ ೧, ಮೈಸೂರು ರಾಜ್ಯ ಸರ್ಕಾರ, ೧೯೭೦, ಪು.೨೫೮

೧೫. Nandishmatt S.C., **A Hand book Veerasaivism,** P.8

೧೬. **Rashtra Kutas and their Times,** by D.R.A.S.Altekar, P.187

೧೭. ಸೂರ್ಯನಾಥ ಕಾಮತ್, **ಕರ್ನಾಟಕ ಇತಿಹಾಸ,** ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೮೭, ಪು.೭೮

೧೮. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.೧೦೬

೧೯. ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸ, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೮೭, ಪು.೭೯

೨೦. Derrett, **The Hoysola's** P.437

೨೧. ಸೂರ್ಯನಾಥ ಕಾಮತ್, **ಕರ್ನಾಟಕದ ಇತಿಹಾಸ,** ಪು.೧೦೯

೨೨. ಅದೇ, ಪು.೧೦೯

೨೩. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಸಾಹಿತ್ಯದಲ್ಲಿ ಜನಜೀವನದ ಚಿತ್ರಗಳು, ಪು.೩೬

೨೪. Saletore B.A., **Mediaval Jainism,** P.2

೨೫. Yacobi, **Encyclopaedia of Religion and Ethics,** Pp.465-66

೨೬. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಪು.೭೩

೨೭. E.C.II, No.1, C600AD

೨೮. ಚಿದಾನಂದಮೂರ್ತಿ ಎಂ., ಅದೇ, ಪು.೭೮

೨೯. ಅದೇ, ಪು.೮೦

೩೦. ಕರ್ನಾಟಕ ಪರಂಪರೆ, ಸಂಪುಟ ೨, ಕರ್ನಾಟ ಸರ್ಕಾರ, ಪು.೯೯

೩೧. ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಪು.೧೧೨

೩೨. ಚಿದಾನಂದಮೂರ್ತಿ ಎಂ., ಶ್ರವಣಬೆಳಗೊಳ ಶಾಸನದ ಮೇಲೆ ಹೊಸಬೆಳಕು, ಪು.೫೩

೩೩. ಅದೇ, ಪು.೫೩

೩೪. ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ ನಂ.೩೫೦, ಕ್ರಿ.ಶ.೧೩೮೯

೩೫. E.C.II, ಶ್ರವಣಬೆಳಗೊಳ, ಪು.೩೩೭

೩೬. ಲೋಕನಾಥಸ್ವಾಮಿ, ಮೂಡಬಿದರೆ ಚರಿತೆ, ಪು.೨೦-೨೫

೩೭. S.P.V.Vol II, P.106

೩೮. ಶೆಟ್ಟಿ, ಎಸ್.ಡಿ., ಜೈನ ಬಸದಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೯

೩೯. ಸೂರ್ಯನಾಥ ಕಾಮತ್, ಕರ್ನಾಟಕದ ಇತಿಹಾಸ, ಪು.೧೧೩

೪೦. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೧೬೬

೪೧. ಸೂರ್ಯನಾಥ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಪು.೩೩೩

೪೨. ದಿವಾಕರ್ ಆರ್.ಆರ್.(ಸಂ), ಕರ್ನಾಟಕ ಪರಂಪರೆ, ಪು.೮೫

೪೩. ದೀಕ್ಷಿತ್(ಸಂ), ಸಂಗಮ ಕಾಲದ ವಿಜಯನಗರ, ವಿಜಯನಗರ ಕಾಲದ ಧಾರ್ಮಿಕ ಬೆಳವಣಿಗೆಗಳ ಮೇಲೆ ಹೊಸಬೆಳಕು ಅ.ಸುಂದರ(ಲೇ), ಪು.೧೧೨

೪೪. ಸಂಗಮಕಾಲದ ವಿಜಯನಗರ ಅದೇ, ಪು.೧೧೩

೪೫. ಶಿವರುದ್ರಸ್ವಾಮಿ, ಬಯಕಾರ ರಾಮಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೭೧

೪೬. EC II, No.344,. ಕ್ರಿ.ಶ.೧೩೬೮

೪೭. ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮, ಪು.೨೧೩

೪೮. ನಂದಿಮಠ ಎಸ್.ಸಿ., **ಕರ್ನಾಟಕದ ಧರ್ಮಗಳು,** ಕರ್ನಾಟಕ ಸರ್ಕಾರ, ೧೯೮೩, ಪು.೧೦೪

೪೯. Sir John Marshail, **Mohemjodaro and the Indus Civilization** I, Pp.52-4

೫೦. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.

೫೧. Hiriyanna M., **The Essentials of Indian Philosophy,** P.33

೫೨. ಹಿರೇಮಠ ಆರ್.ಸಿ., ಮಹಾಯಾತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೩೪

೫೩. **Upadhyana, India in Kalidasa,** P.314

೫೪. ಶ್ರೀಕಂಠಶಾಸ್ತ್ರಿ ಎಸ್., **ಭಾರತೀಯ ಸಂಸ್ಕೃತಿ,** ಮೈಸೂರು ವಿಶ್ವವಿದ್ಯಾನಿಲಯ, ೧೯೫೪, ಪು.೧೩೧

೫೫. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦, ಪು.೧೨೯

೫೬. Thomas Watter, **On yuan Chwang's Travels in India I,** Pp.296, 331, II P.229, 242

೫೭. ಕಲಬುರ್ಗಿ ಎಂ.ಎಂ., **ಶಾಸನಗಳಲ್ಲಿ ಶಿವಶರಣರು,** ವೀರಶೈವ ಅಧ್ಯಯನ ಸಂಸ್ಥೆ, ಗದಗ, ಪು.೯

೫೮. ಶ್ರೀಕಂಠಶಾಸ್ತ್ರಿ, **ಭಾರತೀಯ ಸಂಸ್ಕೃತಿ,** ಮೈಸೂರು ವಿಶ್ವವಿದ್ಯಾನಿಲಯ, ೧೯೫೪, ಪು.೧೩೨

೫೯. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.

೬೦. ನಂದಿಮಠ ಎಸ್.ಸಿ., **ಕರ್ನಾಟಕದ ಧರ್ಮಗಳು,** ಕರ್ನಾಟಕ ಸರ್ಕಾರ, ೧೯೮೩, ಪು.೩೭

೬೧. ಚಿದಾನಂದಮೂರ್ತಿ ಎಂ., ಅದೇ, ಪು.೧೩೮

೬೨. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಥಿಕ ಅಧ್ಯಯನ, ಪು.೧೩೮

೬೩. **Andhra Kavi Charitamu,** Vol.1, Veershling Pantulu

೬೪. ಶಿವಾನಂದ ವಿರಕ್ತಮಠ, **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೨೩

೬೫. ಅದೇ, ಪು.೨೨

೬೬. EC VIII, Sb.375

೬೭. EC VII, SK.281

೬೮. EC X, MB.11

೬೯. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪು.೧೪೨

೭೦. EC XI, DG.23, ಕ್ರಿ.ಶ.೧೪೧೦

೭೧. ಶಿವಾನಂದ ವಿರಕ್ತಮಠ, ಪೂರ್ವೋಕ್ತ, ಪು.೨೫

೭೨. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೫೭

೭೩. Shivarudraswamy N., Vijayanagara Temples in Karnataka, Director, of Arcyalogy and Mucguium, Mysore, 1996, P.18

೭೪. ಸೂರ್ಯನಾಥ ಕಾಮತ್, ಕರ್ನಾಟಕದ ಇತಿಹಾಸ, ಪು.೧೦೬

೭೫. EC VI, SG.No.1 ಕ್ರಿ.ಶ.೧೩೪೬

೭೬. EC VI, SG.No.1

೭೭. SII, No.407, ಕ್ರಿ.ಶ.೧೩೬೪

೭೮. SII, No.488, ಕ್ರಿ.ಶ.೧೩೬೪

೭೯. ದೀಕ್ಷಿತ್ ಜಿ.ಎಸ್., ಸಂಗಮ ಕಾಲದ ವಿಜಯನಗರ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೮೬, ಪು.೧೭೩

೮೦. SII IX(ii) No.405

೮೧. EC VI, No.435, ಕ್ರಿ.ಶ.೧೪೧೧

೮೨. ದೀಕ್ಷಿತ್ ಜಿ.ಎಸ್., ಪೂರ್ವೋಕ್ತ, ಪು.೧೭೩

೮೩. ಅದೇ, ಪು.೧೭೩

೮೪. SII, No.491, ಕ್ರಿ.ಶ.೧೫೧೩

೮೫. SII, No.493, ಕ್ರಿ.ಶ.೧೫೧೩

೮೬. ಕಲಬುರ್ಗಿ ಎಂ.ಎಂ., ಶಾಸನಗಳಲ್ಲಿ ಶಿವಶರಣರು, ವೀರಶೈವ ಅಧ್ಯಯನ ಸಂಸ್ಥೆ, ಡಂಬಳ, ಗದಗ, ಪು.೯

೮೭. ಅದೇ, ಪು.೧೦

೮೮. ಕಲಬುರ್ಗಿ ಎಂ.ಎಂ., ಮಾರ್ಗ, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೫, ಪು.೧೭೨

೮೯. ಅದೇ, ಪು.೧೧೪

೯೦. ಅದೇ, ಪು.೧೮೧

೯೧. ಶಿವಾನಂದ ವಿರಕ್ತಮಠ, ಪೂರ್ವೋಕ್ತ, ಪು.೨೩

೯೨. ಅದೇ, ಪು.೨೩

೯೩. ಹಿರೇಮಲ್ಲೂರು ಈಶ್ವರನ್, ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೧, ಪು.೧೦೭

೯೪. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೫, ಪು.೧೫೪

೯೫. SII, No.407, ಕ್ರಿ.ಶ.೧೩೬೪

೯೬. ವಸುಂಧರ ಫಿಲಿಯೋಜ, ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೦, ಪು.೭೫

೯೭. SII, IX P.II, No.409, ಕ್ರಿ.ಶ.೧೩೬೫

೯೮. SII, IX, Part II, No.407, ಕ್ರಿ.ಶ.೧೩೬೪

೯೯. SII IX, Part II, No.408, ಕ್ರಿ.ಶ.೧೩೬೪

೧೦೦. SII IX, Part II, No. ಕ್ರಿ.ಶ.೧೩೭೯

೧೦೧. ನರಸಿಂಹಮೂರ್ತಿ ಎ.ವಿ., ವಿಜಯನಗರದ ನಾಣ್ಯ ಸಂಪತ್ತು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೬, ಪು.೬೫

೧೦೨. SII IX, Part II, No.417, ಕ್ರಿ.ಶ.೧೩೭೭

೧೦೩. SII, No.423, ಕ್ರಿ.ಶ.೧೪೦೦

೧೦೪. SII, Part I, No.436, ಕ್ರಿ.ಶ.೧೪೧೨

೧೦೫. EC X, GD.68, ಕ್ರಿ.ಶ.೧೪೦೮

೧೦೬. EC XI, Cd.14, ಕ್ರಿ.ಶ.೧೪೧೧

೧೦೭. Suryanarayana Rao B., **Never to be Forgotten Empire,** P.277

೧೦೮. IA, Vol.57

೧೦೯. EC X, MB-147

೧೧೦. EC X, ಕ್ರಿ.ಶ.೧೪೩೨

೧೧೧. Veereshling Pantulu, **Andhra Kavi Charitamu,** Vol.I

೧೧೨. ಶಿವಾನಂದ ವಿರಕ್ತಮಠ, ಪೂರ್ವೋಕ್ತ, ಪು.೨೩

೧೧೩. My Gaz, Vol.II, Part III, P.1654

೧೧೪. M.A.R. 92 for 1923, P.91, I.A., 57, P.80

೧೧೫. ದೀಕ್ಷಿತ್ ಜಿ.ಎಸ್., ಪೂರ್ವೋಕ್ತ, ೧೯೮೦, ಪು.೯೫

೧೧೬. EC X, MB.96

೧೧೭. MAR 1913, P.120

೧೧೮. SII IX, Part II, No.444, ಕ್ರಿ.ಶ.೧೪೩೩

೧೧೯. SII IX, Part II, No.458

೧೨೦. ನರಸಿಂಹಮೂರ್ತಿ, ಪೂರ್ವೋಕ್ತ, ಪು.೬೯

೧೨೧. ವಿದ್ವಾನ್ ಎನ್.ಬಸಪ್ಪ(ಸಂ), ಶಿವತತ್ವ ಚಿಂತಾಮಣಿ, ಪ್ರಾಚ್ಯ ವಿದ್ಯಾ ಸಂಶೋಧನಾಲಯ, ಮೈಸೂರು, ೧೯೬೦, ಪು.೨೫೦

೧೨೨. ಭೂಸನೂರಮಠ ಸಂ.ಶಿ.(ಸಂ), ಪ್ರೌಢರಾಯನ ಕಾವ್ಯ, ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೫೭,ಪು.೧೨

೧೨೩. ಹಿರೇಮಲ್ಲೂರು ಈಶ್ವರನ್, ಪೂರ್ವೋಕ್ತ, ಪು.೧೦೮

೧೨೪. ಅದೇ, ಪು.೧೦೮

೧೨೫. ಕಪಟರಾಳು ಕೃಷ್ಣರಾವ್, ಕರ್ನಾಟಕ ಸಂಸ್ಕೃತಿ ಸಂಶೋಧನೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೦, ಪು.೧೭೩

೧೨೬. SII IX, Part II, No.453, ಕ್ರಿ.ಶ.೧೯೫೦

೧೨೭. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಗೀತಾ ಬುಕ್ ಹೌಸ್, ಮೈಸೂರು, ೧೯೮೩, ಪು.೪೭

೧೨೮. ಅದೇ, ಪು.೪೮

೧೨೯. SII IX, Part II, No.477,, ಕ್ರಿ.ಶ.೧೫೦೯

೧೩೦. ಕವಿಶಾಸಂ, ಸಂಪುಟ ೩, ನಂ.೩೪, ಕ್ರಿ.ಶ.೧೫೧೦

೧೩೧. ಶ್ರೀಕಂಠಯ್ಯ, ಪೂರ್ವೋಕ್ತ, ಪು.೪೮

೧೩೨. ಬೆಟಗೇರಿ ಕೃಷ್ಣಶರ್ಮ, ಕರ್ನಾಟಕದ ಜನ ಜೀವನ, ಸಮಾಜ ಪುಸ್ತಕಾಲಯ, ಧಾರವಾಡ, ೧೯೫೫, ಪು.೭೪

೧೩೩. SII IX, Part II, No.477, ಕ್ರಿ.ಶ.೧೫೦೯

೧೩೪. SII IX, Part II, No.484, ಕ್ರಿ.ಶ.೧೫೧೧

೧೩೫. SII IX, Part II, No.491, ಕ್ರಿ.ಶ.೧೫೧೩

೧೩೬. SII IX, Part II, No.514, ಕ್ರಿ.ಶ.೧೫೨೩

೧೩೭. EC(Revised) HG.No.134, P.425

೧೩೮. ನರಸಿಂಹಮೂರ್ತಿ ಎ.ವಿ., ಪೂರ್ವೋಕ್ತ, ಪು.೮೧

೧೩೯. Nagaswamy R., Tamil Coins, 1981, P.164

೧೪೦. ನರಸಿಂಹಮೂರ್ತಿ, ಪೂರ್ವೋಕ್ತ, ಪು.೮೮

೧೪೧. ಹಿರೇಮಲ್ಲೂರು ಈಶ್ವರನ್, ಪೂರ್ವೋಕ್ತ, ಪು.೧೧೧

೧೪೨. SII IX, Part II, No.539, ಕ್ರಿ.ಶ.೧೫೩೧

೧೪೩. SII IX, Part II, No.559, ಕ್ರಿ.ಶ.೧೫೩೨

೧೪೪. SII IX, Part II, No.565, ಕ್ರಿ.ಶ.೧೫೩೪

೧೪೫. SII IX, Part II, No.593, ಕ್ರಿ.ಶ.೧೫೩೯

೧೪೬. ಶಿವರುದ್ರಸ್ವಾಮಿ ಎಸ್.ಎನ್., ಬಯಕಾರ ರಾಮಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೨೩

೧೪೭. EC, ಕ್ರಿ.ಶ.೧೫೪೫

೧೪೮. SII IX, Part II, No.623, ಕ್ರಿ.ಶ.೧೫೪೭

೧೪೯. SII IX, Part II, No.640, ಕ್ರಿ.ಶ.೧೫೫೦

೧೫೦. SII IX, Part II, No.1552, ಕ್ರಿ.ಶ.೧೫೫೨

೧೫೧. ಶ್ರೀಕಂಠಯ್ಯ, ಪೂರ್ವೋಕ್ತ, ಪು.೩೭

೧೫೨. ಬಸವರಾಜ ಮಲ್ಲಶೆಟ್ಟಿ(ಸಂ), ಏನಗಿಂತ ಕಿರಿಯರಿಲ್ಲ, ಕೊಟ್ರಯ್ಯ ಸಿ.ಟಿ.ಎಂ.(ಲೇ) ಹಂಪೆಯಲ್ಲಿ ವೀರಶೈವ ಕುರುಹುಗಳು, ಪು.೨೫೨

೧೫೩. ಅದೇ, ಪು.೨೫೨

೧೫೪. Anila Verghese, **Religius Traditions at Vijayanagara,** New Delhi, 1995, P.5

೧೫೫. ಬಸವರಾಜ ಮಲ್ಲಶೆಟ್ಟಿ(ಸಂ), ಪೂರ್ವೋಕ್ತ, ಪು.೨೬೯

೧೫೬. Indian Aniquary, Vol.LVII, P.78

# ಉಗಮ-ವಿಕಾಸ-ಲಕ್ಷಣಗಳು

## ೧. ದೇವಾಲಯಗಳ ಹುಟ್ಟು ಬೆಳವಣಿಗೆ

ಪ್ರಾಣಿ ವರ್ಗದಲ್ಲಿ ಮನುಷ್ಯ ಮುಕುಟ ಪ್ರಾಯವಾಗಿರುವುದು ಅವನು ರೂಪಿಸಿಕೊಂಡ ತನ್ನ ಸಂಸ್ಕೃತಿ ಉಳಿವಿನಿಂದ. ಉಳಿದ ಜೀವರಾಶಿಗಳಲ್ಲಿ ಈ ಸಂಸ್ಕೃತಿಯ ಕುರುಹುಗಳಿಲ್ಲ. ಆದ್ದರಿಂದ ಮನುಷ್ಯನ ಬಂಡವಾಳವೇ ಸಂಸ್ಕೃತಿ ಎನ್ನಬಹುದು. ಅವನ ವಿಕಸಿತ ಉಳುವಿನ ಉರುಗೋಲು ಅದು. ಸಂಸ್ಕೃತಿ ಬದುಕಿನಲ್ಲಿ ಇಂದಿನ ಅಡ್ಡಿ ಮುಂದಿನ ಆತಂಕಗಳನ್ನೆಲ್ಲ ಬದಿಗೊತ್ತಿ ಮುಂದೆ ಸಾಗಲು ಒಂದು ಸಾಧನ ಮಾತ್ರ. ಒಟ್ಟಾರೆಯಾಗಿ ಮಾನವನ ಅಂತರಂಗದ ಜೀವನ ಚಿತ್ರಣವೇ ಸಂಸ್ಕೃತಿ ಇದರಲ್ಲಿ ಶಿಲ್ಪ, ವಾಸ್ತುಶಿಲ್ಪ, ದೇವಾಲಯ ವಾಸ್ತು ಶಿಲ್ಪ ಒಂದು ಕವಲು ಮಾತ್ರ.[೧]

ನಮ್ಮ ನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ಕಲೆಗಳು ರೂಢಿಯಲ್ಲಿ ಬಂದಿವೆ. ಅಂಥವುಗಳಲ್ಲಿ ಶಿಲ್ಪ, ಚಿತ್ರ, ಸಂಗೀತ, ನೃತ್ಯದಂಥ ಕಲೆಗಳನ್ನು ಹೆಸರಿಸಬಹುದು. ಆದರೆ ಪ್ರಾಚೀನ ಕಾಲದಲ್ಲಿ ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದುಕೊಂಡಿತ್ತು. ಪ್ರಾಚೀನವಾದ ಅರವತ್ನಾಲ್ಕು ಕಲೆಗಳಿಗೆಲ್ಲ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು.[೨] ಈ ಅರ್ಥದ ವಿಶಾಲತೆಯು ಕ್ರಮೇಣ ಕಡಿಮೆಯಾಗುತ್ತ ಬಂದು ವಿಜಯನಗರ ಕಾಲಕ್ಕಾಗಲೇ ಶಿಲ್ಪ ಎನ್ನುವುದು ಕಲ್ಲಿನಲ್ಲಿ ನಿರ್ಮಿಸಿದ ಮೂರ್ತಿಗಳಿಗೆ ಎಂಬ ಕಲ್ಪನೆ ಮೂಡಿತು. ಭೂಮಿಯನ್ನು ಒಂದು ವಸ್ತು ಎಂದು ತಿಳಿದುಕೊಂಡು ಮರ ಕಲ್ಲು ಮತ್ತು ಮಣ್ಣು-ಗಾರೆ ಇತ್ಯಾದಿಗಳನ್ನು ಬಳಸಿ ನಿರ್ಮಿಸಿದ ಕಟ್ಟಡಕ್ಕೆ ನಾವು ವಾಸ್ತು ಎಂದು ಕರೆಯುತ್ತೇವೆ. ಇದನ್ನಾಶ್ರಯಿಸಿ ಬೆಳದುಬಂದದ್ದು ವಾಸ್ತುಶಿಲ್ಪವಾಯಿತು.

ಮಯಮತ ಗ್ರಂಥವು ವಾಸ್ತು ಎಂಬುದನ್ನು ಹೀಗೆ ಹೇಳಿದೆ "ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಸ್ತು ಎಂದು ಹೆಸರು. ಈ ವಸ್ತುವನ್ನು ಆಶ್ರಯಸಿದ್ದು ವಾಸ್ತುಶಿಲ್ಪ ಎಂದು ಗುರುತಿಸಲ್ಪಡುತ್ತದೆ.[೩] ಒಟ್ಟಾರೆಯಾಗಿ ವಾಸ್ತುಶಿಲ್ಪ ಎಂದರೆ ಕಟ್ಟಡಗಳಿಗೆ ನಕ್ಷೆಗಳಿಗೆ ಸಂಬಂಧಿಸಿದ ಶಾಸ್ತ್ರ, ಶುಕ್ರನ ನೀತಿಶಾಸ್ತ್ರವನ್ನು ಅರಮನೆಗಳ, ರೇವುಗಳ, ಮನೆಗಳ, ಕಾಲುವೆಗಳ, ವಿಗ್ರಹಗಳ, ರಚನೆಗೆ ಸಂಬಂಧಿಸಿದ ಶಾಸ್ತ್ರವೆಂದೇ ಕರೆಯಲಾಗುತ್ತಿದೆ. ಅಲ್ಲದೆ ಕೋಟೆಗಳನ್ನು ಕೆರೆಗಳನ್ನು ಮುಂತಾದವುಗಳನ್ನೆಲ್ಲ ನಿರ್ಮಿಸುವುದಕ್ಕೆ ವಾಸ್ತುಶಿಲ್ಪವೆಂದೇ ಹೆಸರು.

ಪ್ರಾಚೀನ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆ ನಿಂತಾಗ ಅವನು ನಾಗರಿಕತೆಯ ಪ್ರಥಮ ಹೆಜ್ಜೆಯನ್ನು ತುಳಿಯುತ್ತಾನೆ. ಆನಂತರ ಗುಹೆಗಳಲ್ಲಿ, ಮರದ ಪೊಟರೆಗಳಲ್ಲಿ ಮಾನವ ವಾಸಿಸ ಹತ್ತಿದನು. ಕ್ರಮೇಣವಾಗಿ ಮಾನವನ ಬುದ್ಧಿಯು ವಿಕಾಸವಾಗುತ್ತಾ ಸಾಗಿ ಮಾನವನು ತನಗಾಗಿ ವಾಸಿಸಲು ಅನುಕೂಲಕರವಾದ ಕಟ್ಟಡವನ್ನು ಕಟ್ಟಲು ಕಲಿತಾಗ ಅವನು ಮತ್ತೆ ಒಂದು ಹೆಜ್ಜೆ ಮುಂದೆ ಸಾಗಿದ. ನಾಗರಿಕತೆ ಬೆಳೆದಂತೆ ಸುಸಂಸ್ಕೃತನಾದ ಮನುಷ್ಯನು ಸುತ್ತಲಿನ ಪ್ರಕೃತಿಯು ತನ್ನ ಬದುಕಿನಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ ಎಂದು ಅರಿತನು. ಆದ್ದರಿಂದ ಮನುಷ್ಯನಿಗೆ ಭಯ, ಭಕ್ತಿಗಳು ಉಂಟಾಗುವುದರ ಜೊತೆಯಲ್ಲಿ ಗೌರವವು ಉಂಟಾಯಿತು. ವಿಶ್ವದ ಅತಿ ಪ್ರಾಚೀನ ಶಿಲಾಯುಗದ ನಾಗರಿಕತೆಯಲ್ಲಿ ಇಂತಹ ಭಯ ಮಿಶ್ರಿತವಾದ ಗೌರವವನ್ನು ನೋಡಬಹುದು.

ಮನುಷ್ಯ ತನ್ನ ಜೀವನವನ್ನು ಸಾಗಿಸಲು ನಿರಂತರವಾಗಿ ಪ್ರಕೃತಿಯೊಂದಿಗೆ ಹೋರಾಟ ಮಾಡಬೇಕಿತ್ತು. ಈ ಕಾರಣದಿಂದಲೇ ಪ್ರಕೃತಿಯು ಮನುಷ್ಯನ ಪೂಜಾ ಸ್ಥಾನಗಳ ನಿರ್ಮಾಣಕ್ಕೆ ಕಾರಣವಾಯಿತು. ಆದುದರಿಂದಲೇ ಮನುಷ್ಯ ಪ್ರಾಚೀನ ಕಾಲದಲ್ಲಿ ತನ್ನ ಸುತ್ತಮುತ್ತಲಿರುವ ಪ್ರಕೃತಿಯ ಮರ, ಕಲ್ಲು, ಮಣ್ಣು ಮುಂತಾದ ಪ್ರಕೃತಿದತ್ತವಾದ ವಸ್ತುಗಳನ್ನು ಪೂಜಿಸ ಹತ್ತಿದ.

ಕಾಲಗತಿಸಿದಂತೆ ಮನುಷ್ಯನ ಜ್ಞಾನ ಬೆಳೆದಂತೆಲ್ಲ ನಿಸರ್ಗದಲ್ಲಿ ಎಲ್ಲಕ್ಕಿಂತಲೂ ಮಿಗಿಲಾದ ಅದ್ಭುತ ಶಕ್ತಿ ಇದೆ ಎಂದು ನಂಬಿದ ಈ ಅಪೂರ್ವವಾದ್ದನ್ನು ಅದ್ಭುತ ದಿವ್ಯವಾದದ್ದನ್ನು ಅನುಭವಿಸುವ ಸವಿಯುವ ಸಾಮರ್ಥ್ಯ ಮನುಷ್ಯನಿಗೆ ಇರುವಂತೆಯೇ ಪ್ರಕೃತಿಯನ್ನು ಕಲ್ಪಿಸಿಕೊಳ್ಳುವ ರೂಪಿಸಿಕೊಳ್ಳುವ ಸೃಜನ ಶಕ್ತಿಯು ಇದೆ. ನಿಸರ್ಗ ಸಿದ್ಧವಾದಂಥ ವಸ್ತುಗಳನ್ನು ಸಮ ಪ್ರಮಾಣದಲ್ಲಿ ಕಲಾತ್ಮಕವಾಗಿ ಮಾಡಿಟ್ಟುಕೊಳ್ಳುವ ಹವ್ಯಾಸವು ಮನುಷ್ಯನಿಗೆ ನಿಸರ್ಗ ಸಿದ್ಧವಾದುದೆ. ತನಗೆ ಆಶ್ಚರ್ಯವೆನಿಸುವ ವಸ್ತುಗಳನ್ನು ನೋಡಿ ಅವನು ತನ್ನ ಇಚ್ಛಾಶಕ್ತಿಯ ನೆರವಿನಿಂದ ಪ್ರತಿಮೆಗಳನ್ನು ತಯಾರಿಸಹತ್ತಿದನು. ಇವು ಪವಿತ್ರ ಪೂಜಾ ಅರ್ಹ ಎಂಬ ಭಾವನೆ ಉಂಟಾಯಿತು. ಅಂದರೆ ಪ್ರತಿಮೆಗಳನ್ನು ಬಳಸತೊಡಗಿದ ಮೇಲೆ ಪವಿತ್ರವಾದ ಕಲ್ಪನೆ ಮೂಡಿ ಬಂದಿತು.[1] ಪ್ರತಿಮೆಯೆಂದರೆ ಬರಿ ಪ್ರಕೃತಿಯ ಪಡಿಯಚ್ಚಲ್ಲ, ಗೊಂಬೆಯಲ್ಲ ಅದು ಶಕ್ತಿಯನ್ನು ತುಂಬಿಕೊಂಡಿರುವ ಕಲ್ಪನೆ. ಅದರ ಜೀವಾಳ.

ಮನುಷ್ಯನು ಪ್ರತಿಮೆಯನ್ನು ಸಿದ್ಧಪಡಿಸಿದಾಗ "ಆ ಚಿಂತಾದ್ಭುತ ಶಕ್ತಿಯನ್ನು ಅದರಲ್ಲಿ ತುಂಬುವುದೆ ಅವನ ಉದ್ದೇಶ". ಹೀಗೆ ಶಕ್ತಿ ಸಂಪನ್ನವಾದ ಪ್ರತಿಮೆಯನ್ನು ಒಳಗೊಳ್ಳುವ ಸ್ಥಳದಲ್ಲೇ ಕಟ್ಟಡ ಕಟ್ಟಿದ, ಆವರಣ ನಿರ್ಮಿಸಿದ.

ಸಾವೆಂಬುದು ಮನುಷ್ಯನಿಗೆ ಒಂದು ಗಂಭೀರವಾದ ಸಮಸ್ಯೆ ಅದರ ಒಗಟನ್ನು ಬಿಡಿಸುವುದು ಮನುಷ್ಯನಿಗೆ ಅಂದಿನಿಂದ ಇಂದಿನವರೆಗೆ ಸಾಧ್ಯವಾಗಿಲ್ಲ. ಮನುಷ್ಯನ ಆಸೆ ಆಶ್ರಯ ಸನ್ನಾಹ

ಯೋಚನೆಗಳಿಗೆಲ್ಲ ಸಾವು ಸಂಚಕಾರಿ. ಅದಕ್ಕೆ ಮನುಷ್ಯ ಸಾವಿಗೆ ಭಯಪಡುವಷ್ಟು ಬೇರೆ ಯಾವ ಪ್ರಸಂಗಕ್ಕೂ ಭಯ ಪಡುವುದಿಲ್ಲ. ಸಾವನ್ನು ಕಂಡು ಅಂಜುವವರು ಸತ್ತವರನ್ನು ಕಂಡು ಅಂಜತೊಡಗಿದರು.

ಪ್ರಾಚೀನ ಮಾನವನ ಊಹೆ ಸತ್ತವರು ಎಂದೂ ಇಲ್ಲವಾಗುವುದಿಲ್ಲ. ಯಾವುದೋ ಬಗೆಯಲ್ಲಿ ಉಳಿದುಕೊಂಡಿರುತ್ತಾರೆ. ಅವರ ದೇಹ ಮರೆಯಾದರೂ ಚೇತನ ತನ್ನವರೊಂದಿಗೆ ನೆಂಟನ್ನು ಮುಂದುವರಿಸಿಕೊಂಡು ಹೋಗುತ್ತದೆ. ಈ ಚೇತನವನ್ನು ಬೇಕೆಂದಾಗ ಕರೆದುಕೊಳ್ಳಬಹುದು. ಕೆಲವೊಂದು ಬಾರಿ ಇದರಿಂದ ತೊಂದರೆ ಉಂಟಾಗಬಹುದು. ಈ ತೊಂದರೆ ತಪ್ಪಿಸಲು ಆ ಚೇತನಗಳನ್ನು ತಣ್ಣಗೆ ಮಾಡುವುದಕ್ಕಾಗಿ ತೃಪ್ತಿಪಡಿಸುವುದಕ್ಕಾಗಿ ಆಲಯಗಳು ನಿರ್ಮಾಣವಾದವು. ಆದ್ದರಿಂದ ಈಗ ಪ್ರಸಿದ್ಧವಾಗಿರುವ ಹಲವಾರು ದೇವಾಲಯಗಳು ಸಮಾಧಿಗಳು ಎಂದರೆ ಆಶ್ಚರ್ಯ ಎನಿಸಲೂಬಹುದು.[೫] ಆದರೆ ಇದೆ ಸತ್ಯ ಎಂದು ಎಸ್ .ಕೆ.ರಾಮಚಂದ್ರರಾವ್ ಅಭಿಪ್ರಾಯ ಪಡುತ್ತಾರೆ. ತಮಿಳಿನಲ್ಲಿ ಪಳ್ಳಿಪ್ಪಡೈ ಎಂದರೆ ಗುಡಿ ಈ ಪಳ್ಳಿಪ್ಪಡೈ ಮಾತಿನ ಅರ್ಥವೆಂದರೆ ಎಂದೂ ಏಳದ ನಿದ್ದೆಯಲ್ಲಿ ತೊಡಗಿದ ಎಂಬ ಅರ್ಥವನ್ನು ಕೊಡುವುದು.

ಪಳ್ಳಿಪ್ಪಡೈ - ಎಂದರೆ ಸತ್ತವರನ್ನು ಹುಗಿದ ಜಾಗ ಎಂದಿದ್ದಾರೆ. ಅಲ್ಲದೆ ತಮಿಳುನಾಡಿನ ಶ್ರೀಮಂತ ನಾಟಿ ಕೋಡಿ ಬೆಟ್ಟಿಯೂರ ತಮ್ಮ ಸೀಮೆಯ ಗುಡಿಯ ದುರಸ್ಥಿಯಲ್ಲಿ ಶವ ಕರಡಕಗಳನ್ನು ಮತ್ತು ಮಧ್ಯಯುಗದ ಶಾಸನಗಳು ಹಲವು ಶಿವಾಲಯಗಳನ್ನು ಸಮಾಧಿಗಳೆಂದು ಬಣ್ಣಿಸಿವೆ ಎಂದು ಎಸ್. ಕೆ.ರಾಮಚಂದ್ರರಾವ್ ಹೇಳುತ್ತಾರೆ. ಆದರೆ ಶಾಸನವನ್ನು ಉಲ್ಲೇಖಿಸುವುದಿಲ್ಲ. ಹಿಂದಿನವರು ಭಯದಿಂದ ದೇಹ ಬಿಟ್ಟು ಹೋದಾತ ಮತ್ತೆ ಬರಲುಬಹುದು ಎಂಬ ಯೋಚನೆಯಿಂದ ಸಮಾಧಿಗಳು ದೇವಾಲಯಗಳು ಆಗಿರಬಹುದೆಂದು ಡಾ.ಬಾ.ರ.ಗೋಪಾಲ ಹೇಳುತ್ತಾರೆ.[೬]

ಇಂತಹ ಸಮಾಧಿಗಳನ್ನು ಈಜಿಪ್ಟ್‌ನಲ್ಲಿ ಕಾಣಬಹುದು ಎಂದು ಹೇಳುತ್ತಾರೆ. ಒಟ್ಟಾರೆಯಾಗಿ ಸತ್ತವರ ಭಯ ಇದ್ದವರನ್ನು ಕಾಡಹತ್ತಿದಾಗ ದೇವಾಲಯಗಳ ನಿರ್ಮಾಣ ಪ್ರಾರಂಭವಾಯಿತು ಎಂಬುದು ಮೇಲಿನ ಅಭಿಪ್ರಾಯವಾಗಿದೆ.

ಈಗಿರುವ ದೇವಾಲಯಗಳೆಲ್ಲಾ ಸಮಾಧಿಗಳೆನ್ನುವ ವಾದವನ್ನು ಡಾ.ದೇವರಕೊಂಡ ರೆಡ್ಡಿಯವರು ಅಲ್ಲಗಳೆಯುತ್ತಾರೆ. ಯಾವುದೇ ಸತ್ತ ವ್ಯಕ್ತಿಯ ಸಮಾಧಿಯ ಮೇಲೆ ಸ್ಮಾರಕಗಳನ್ನು ನಿರ್ಮಿಸಬಹುದಾದರು ಆಗಮೋಕ್ತವಾದ ದೇವಾಲಯಗಳನ್ನು ನಿರ್ಮಿಸುವುದಿಲ್ಲ. ತಮಿಳುನಾಡು ಕರ್ನಾಟಕದಲ್ಲಿ ಪ್ರಸಿದ್ಧವಾದ ಅರಸರು ತಾವು ಬದುಕಿರುವಾಗಲೇ ತಮ್ಮ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣಬಹುದು ಎಂದು ಶಾಸನಗಳ ಸಹಾಯದಿಂದ ಅವರು ರೂಪಿಸಿದ್ದಾರೆ.[೭]

ಇದಕ್ಕೆ ಇನ್ನೊಂದು ನಿದರ್ಶನ ನೋಡಬಹುದಾದರೆ ಕುರುವತ್ತಿಯ ದೇವಾಲಯ. ಈಗ ಮಲ್ಲಿಕಾರ್ಜುನ ದೇವಾಲಯವೆಂದು ಕರೆಯಲ್ಪಡುವ ಕುರುವತ್ತಿಯ ದೇವಾಲಯವು ಶಾಸನಗಳಲ್ಲಿ ಅಹೋ ಮಲ್ಲೇಶ್ವರ

ಎಂದು ಕರೆಯಿಸಿಕೊಂಡಿದೆ. ಒಂದನೇ ಸೋಮೇಶ್ವರನು ಈ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಆತ ಬದುಕಿರುವಾಗಲೇ ಆತನ ಹೆಸರಿನಲ್ಲಿ ಈ ದೇವಾಲಯವನ್ನು ನಿರ್ಮಿಸಿದ್ದಾನೆ. ಈ ದೇವಾಲಯವು ಆಗಮ ವಿಧಿಯ ಪ್ರಕಾರ ಪೂಜೆಗೊಳ್ಳುತ್ತಿದೆ. ಇದು ಸೋಮೇಶ್ವರನ ಸಮಾಧಿಯಲ್ಲ.[೮] ಆದ್ದರಿಂದ ಸಮಾಧಿಗಳೇ ಬೇರೆ ದೇವಾಲಯಗಳೇ ಬೇರೆ.[೯]

ಒಟ್ಟಾರೆಯಾಗಿ ಸತ್ತವರ ಸಮಾಧಿಯ ಮೇಲೆ ಸ್ಮಾರಕಗಳು ಇರಬಹುದಾದರೂ ಆಗಮೋಕ್ತ ದೇವಾಲಯಗಳು ಇರುವುದಿಲ್ಲ ಈ ಮಾತು ಮಧ್ಯಯುಗದ ಕರ್ನಾಟಕದಲ್ಲಿ ಅದರಲ್ಲೂ ವಿಜಯನಗರ ಕಾಲದಲ್ಲಿ ಹೆಚ್ಚು ಅನ್ವಯವಾಗುತ್ತದೆ.

## ಬೆಳವಣಿಗೆ

ಭಾರತದಲ್ಲಿ ಮೊದಲಿಗೆ ದೇವಾಲಯಗಳ ರಚನೆ ಕಂಡುಬರುವುದು ಗುಹೆಗಳಲ್ಲಿ. ಮೊದಲು ತಾವು ವಾಸಿಸುತ್ತಿದ್ದ ಗುಹೆಗಳನ್ನು ಮನುಷ್ಯ ಆಲಯಗಳನ್ನಾಗಿ ಬಳಸಿಕೊಂಡನು. ಮನುಷ್ಯ ತನಗಾಗಿ ಕಟ್ಟಿಕೊಂಡ ಮನೆ "ಗೃಹ ವಾಸ್ತುಶಿಲ್ಪ" ಎನಿಸಿದರೆ ತನ್ನ ದೇವರಿಗೆ ಕಟ್ಟಿದ್ದು "ಧಾರ್ಮಿಕ ವಾಸ್ತುಶಿಲ್ಪ" ಅಥವಾ ದೇವಾಲಯ ವಾಸ್ತುಶಿಲ್ಪ ಎನಿಸಿತು. ಅಲ್ಲದೆ ಗೃಹವಾಸ್ತುವಿನ ರಚನೆಯು ದೇವಾಲಯ ವಾಸ್ತುಶಿಲ್ಪ ರಚನೆಯ ಮೇಲೆ ಪ್ರಭಾವ ಬೀರುತ್ತ ಹೋಯಿತು ಕಾಲ ಕಳೆದಂತೆಲ್ಲ ಮನುಷ್ಯನ ಚಿಂತನೆಗಳು ಹೆಚ್ಚಿದಂತೆಲ್ಲ ದೇವಾಲಯವನ್ನು ಮನುಷ್ಯನ ದೇಹದೊಂದಿಗೆ ಸಮೀಕರಿಸುವ ಭಾವನೆ ಬೆಳೆಯುತ್ತಾ ಹೋಯಿತು.[೧೦] ಕಟ್ಟಡದ ಹಲವಾರು ಭಾಗಗಳಿಗೆ ದೇಹದ ವಿವಿಧ ಅಂಗಗಳಾದ ಪಾದ, ಚರಣ, ಅಂಘ್ರಿ, ಜಂಘ, ಕುಕ್ಸಿ, ಗ್ರೀವ, ಕಂಠ, ಶಿಖರ, ಶಿರ, ಮಸ್ತಕ, ಮುಖ, ವಕ್ರ, ನಾಸಿಕ ಇತ್ಯಾದಿ ಹೆಸರುಗಳನ್ನು ಕೊಡಲಾಗಿದೆ.

ವಾಸ್ತುಶಿಲ್ಪವು ನಾಗರಿಕತೆಯನ್ನು ರೂಪಿಸುವ ಮಾತೃಕೆ(Architurature is the mixture of Civilization)[೧೧] ಆಯಾ ಕಾಲದ ಮತ್ತು ಆಯಾ ಜನಾಂಗದ ಆಂತರಿಕ ಅಕಾಂಕ್ಷೆ ಅನುಭವಗಳಿಗೆ ವಾಸ್ತುಶಿಲ್ಪವು ಕನ್ನಡಿ ಹಿಡಿಯುತ್ತದೆ. ಈಗ ದೊರಕುವ ಪ್ರಾಚೀನ ಅವಶೇಷಗಳು ಎಂದರೆ ಮೆಹೆಂಜೋದಾರ ಮತ್ತು ಹರಪ್ಪಾ ಅವಶೇಷಗಳು. ಇಲ್ಲಿ ಲೌಕಿಕ ವಾಸ್ತುಶಿಲ್ಪಕ್ಕೆ ಹೆಚ್ಚು ಗಮನ ಕೊಡಲಾಯಿತು. ಮಣ್ಣು ಗಾರೆ ಇಟ್ಟಿಗಿಯಿಂದ ಇವರು ಕಟ್ಟಡಗಳನ್ನು ನಿರ್ಮಿಸುತ್ತಿದ್ದರು.

ಧಾರ್ಮಿಕ ಅವಶೇಷಗಳು ಈಗ ಹರಪ್ಪಾ ಮೆಹೇಂಜೋದಾರದಲ್ಲಿ ಕಂಡುಬರುವುದಿಲ್ಲ. ಲೌಕಿಕ ವಾಸ್ತು ಶಿಲ್ಪಗಳನ್ನು ನಾವು ಮೆಹೇಂಜೋದರ ಹರಪ್ಪಗಳಲ್ಲಿ ಗಮನಿಸಬಹುದು. ಇದಲ್ಲದೆ ನಗರದ ರಕ್ಷಣೆಗೆ ಕೋಟೆ ಕಟ್ಟಿದರು. ಮೊದಲಿಗೆ ಮರದ ಬೇಲಿಗಳನ್ನು, ಅನಂತರ ಮಣ್ಣಿನಲ್ಲಿ ಅನಂತರದಲ್ಲಿ ಕಲ್ಲಿನ ಆಳುವೇರಿಗಳನ್ನು ಕಟ್ಟಿಕೊಳ್ಳಬೇಕಾಯಿತು. ಮೊದಲಿಗೆ ಬಡಿಗನಿಗೆ ವಿಶೇಷ ಸ್ಥಾನಮಾನ

ನೀಡಲಾಯಿತು. ನಂತರದಲ್ಲಿ ಬಡಿಗ ಮರದಲ್ಲಿ ರೂಪಿಸಿದ ಶೈಲಿಗಳನ್ನೇ ಕಲ್ಲುಕುಟಿಗ ಕಲ್ಲಿನಲ್ಲಿ ಪ್ರತಿರೂಪಗೊಳಿಸಿದನೆಂಬುದನ್ನು ನಾವು ಕಾಣಬಹುದು.[೧೨] ಆದರೆ ಧಾರ್ಮಿಕ ವಾಸ್ತುಶಿಲ್ಪಕ್ಕೆ ಇನ್ನೂ ಕಟ್ಟಿಗೆ ಬಳಸಿದಂತೆ ಕಾಣುತ್ತದೆ. ಆದರೆ ಕೋಟೆಯ ಒಳಗಿನ ಎಲ್ಲಾ ವಾಸ್ತು ಶಿಲ್ಪಗಳನ್ನ ಕಟ್ಟಿಗೆಯಿಂದ ನಿರ್ಮಿಸಲಾಗುತ್ತಿತ್ತು[೧೩] ಎಂಬುವ ಬಾ.ರಾ.ಗೋಪಾಲ ಅವರ ಮಾತು ಇದಕ್ಕೆ ಪುಷ್ಠಿ ನೀಡುತ್ತಿದೆ. ಕಟ್ಟಿಗೆಯಲ್ಲಿ ನಿರ್ಮಿಸಿದ ಯಾವ ವಾಸ್ತುಶಿಲ್ಪವು ಇಂದು ಉಳಿದುಬಂದಿಲ್ಲ.[೧೪] ಆದ್ದರಿಂದ ದೇವಾಲಯದ ಹಿನ್ನೆಲೆಯಲ್ಲಿ ಸ್ಪಷ್ಟವಾಗಿ ಉಳಿದು ಬಂದಿರುವ ಪ್ರಾಚೀನ ಕಟ್ಟಡಗಳೆಂದರೆ ಸ್ತೂಪಗಳೇ ಆಗಿವೆ.[೧೫]

ಸ್ತೂಪ ಎಂಬ ಶಬ್ದಕ್ಕೆ ಮಣ್ಣಿನ ಗುಡ್ಡೆ ಧಾನ್ಯದ ರಾಶಿ ಎಂಬ ಅರ್ಥವಿದೆ. ಹಿಂದೂ ದೇವಾಲಯವು ಬೌದ್ಧ ಸ್ತೂಪದಿಂದ ಬೆಳೆದು ಬಂದದ್ದು ಎಂದು ಹೇಳುವುದು ಸರಿಯಾದದ್ದು ಆದರೆ ಈ ಸ್ತೂಪಗಳು ಕೂಡ ಪ್ರಾಚೀನ ಭಾರತದ ಗುಹೆಯ ಆಲಯಗಳಿಂದ ಬೆಳೆದು ಬಂದವುಗಳೆಂದು ಎಸ್.ಕೆ.ರಾಮಚಂದ್ರರಾವ್ ಹೇಳುತ್ತಾರೆ.[೧೬] ಸ್ತೂಪಗಳ ರಚನಾ ಶೈಲಿಯೂ ದೇವಾಲಯದ ನಿರ್ಮಾಣಕ್ಕೆ ಮಾದರಿಯಾಯಿತು ಎನ್ನಬಹುದಾದರು ಈ ಸ್ತೂಪಗಳಿಗೆ ಹಿಂದೆ ಭಾರತದಲ್ಲಿದ್ದ ಗುಹೆ-ಆಲಯಗಳು ಮಾದರಿಯಾಗಿ ಇದ್ದವೆಂಬುದನ್ನು ಅರಿಯಬಹುದು.

ವಾಸ್ತು ಶಿಲ್ಪದ ದೃಷ್ಟಿಯಿಂದ ಅಶೋಕನ ಕಾಲ ಬಹಳ ಮುಖ್ಯವಾದದು. ಅಲ್ಲಿಯವರಿಗೆ ಅಂದರೆ ಕ್ರಿ.ಪೂ.ಮೂರನೇ ಶತಮಾನದವರೆಗೆ ಅಶೋಕನ ಕಾಲದಲ್ಲಿ ಬೌದ್ಧ ಧರ್ಮವು ರಾಜಧರ್ಮ, ರಾಜ್ಯಧರ್ಮ ಎರಡು ಆಗಿತ್ತು. ಇದರಿಂದ ಧಾರ್ಮಿಕ ವಾಸ್ತುಶಿಲ್ಪದ ಬೆಳವಣಿಗೆ ಸ್ಪಷ್ಟವಾಗಿ ಬೆಳೆಯತೊಡಗಿತು. ಸ್ತೂಪಗಳು ದೇವಾಲಯಗಳ ರಚನೆಗೆ ಮೂಲಗಳೆಂದು ಮೊದಲೇ ಹೇಳಲಾಗಿದೆ. ಈ ಸ್ತೂಪಗಳ ರಚನೆಯನ್ನು ಮೌರ್ಯರ ಕಾಲದಲ್ಲಿ ಅದರಲ್ಲೂ ಅಶೋಕನ ಕಾಲದಲ್ಲಿ ಹೆಚ್ಚು ಬೆಳವಣಿಗೆ ಹೊಂದಿತು. ಬೌದ್ಧ ಅಜೀವಕರ ವಾಸಕ್ಕಾಗಿ ಅಶೋಕನು ಗಯಾದ ಸಮೀಪ ಬರಾಬರ್ ಮತ್ತು ನಾಗರ್ಜುನ ಬೆಟ್ಟಗಳಲ್ಲಿ ಗುಹೆಗಳನ್ನು ಕೊರೆಯಿಸಿದನು. ಸ್ಫಟಿಕದ ಬೆಣಚುಕಲ್ಲಿನ ದೊಡ್ಡ ಬಂಡೆಗಳಲ್ಲಿ ಕೊರೆಯಲಾದ ಈ ಗುಹೆಗಳು ಭಾರತದ ಗುಹೆಗಳಲ್ಲಿ ಅತಿ ಪ್ರಾಚೀನವಾಗಿವೆ.[೧೭]

## ವಿಜಯನಗರದ ವಾಸ್ತುಶಿಲ್ಪದ ಲಕ್ಷಣಗಳು

ವಿಜಯನಗರದ ದೇವಾಲಯಗಳ ವಾಸ್ತುಶಿಲ್ಪವನ್ನು ಅರಿಯುವ ಮೊದಲು ಅದರ ವಾಸ್ತು ರಚನೆಗಳ ಸ್ವರೂಪವನ್ನು ತಿಳಿದುಕೊಳ್ಳುವುದು ಬಹಳಷ್ಟು ಸಮಂಜಸವಾದದು. ವಿಜಯನಗರದ ವೈಭವಯುತ ಆಳ್ವಿಕೆಯ ಕಾಲಾವಧಿಯು ಕ್ರಿ.ಶ.೧೩೩೬ರಿಂದ ಪ್ರಾರಂಭವಾಗಿ ಕ್ರಿ.ಶ.೧೫೬೫ರವರೆಗೆ ಮುಗಿಯುತ್ತದೆಯಾದರೂ ಇವರ ಸಾಮಂತರು ಹಾಗೂ ವಿಜಯನಗರದ ಉತ್ತರಾಧಿಕಾರಿಗಳು ಆಂಧ್ರದ ಪೆನಕೊಂಡ ರಾಜಮಹೇಂದ್ರಿಗಳನ್ನು ರಾಜಧಾನಿಯಾಗಿ ಮಾಡಿಕೊಂಡು ವಿಜಯನಗರ ವಾಸ್ತುಶೈಲಿಯನ್ನು

ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಮುಂದುವರಿಸಿದ್ದಾರೆ. ಇದರಿಂದಾಗಿ ಈ ವಾಸ್ತುಶೈಲಿ ೧೩೩೬ಕ್ಕೆ ಆರಂಭವಾದರೂ ಇದರ ಕೊನೆಯನ್ನು ಗುರುತಿಸುವುದು ಬಹಳ ಕಷ್ಟ. ವಿಜಯನಗರ ಕಾಲದ ದೇವಾಲಯದ ರಚನೆಯನ್ನ ದ್ರಾವಿಡ ಶೈಲಿಯಲ್ಲಿ ಪ್ರಾರಂಭಿಸಿದರು. ಈ ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾದ ಹಳೆಯ ದೇವಾಲಯ ರಚನೆಯನ್ನು ಸಣ್ಣ-ಪುಟ್ಟ ಬದಲಾವಣೆಯೊಂದಿಗೆ ಇವರು ಅಳವಡಿಸಿಕೊಂಡರು. ಅಲ್ಲದೇ ದೇವಾಲಯವನ್ನು ಬಹಳಷ್ಟು ವಿಶಾಲಗೊಳಿಸಿದರು. ಈ ಮೊದಲು ದೇವಾಲಯ ರಚನೆಯಲ್ಲಿ ಪ್ರಖ್ಯಾತಿ ಹೊಂದಿದ್ದ ಬಾದಾಮಿ ಚಾಲುಕ್ಯರು ದೇವಾಲಯ ರಚನೆಯಲ್ಲಿ ಕೆಂಪು ಮಿಶ್ರಿತ ಪದರುಗಲ್ಲನ್ನು ಬಳಸಿದ್ದರು.[೧೮] ಕಲ್ಯಾಣಿ ಚಾಲುಕ್ಯರು ದೇವಾಲಯಗಳ ನಿರ್ಮಾಣದಲ್ಲಿ ಕೋರಟಿಕ್ ಪಿಸ್ಟ್ (ಹಸಿರು ಮಿಶ್ರಿತ ಕಪ್ಪು) ಕಲ್ಲನ್ನು ಬಳಸುತ್ತಿದ್ದರು.[೧೯] ದೇವಾಲಯಗಳ ನಿರ್ಮಾಣದಲ್ಲಿ ಉತ್ತುಂಗಕ್ಕೇರಿದ ಹೊಯ್ಸಳರ ಕಾಲದಲ್ಲಿ ಬಳಪದ ಕಲ್ಲಿನ ಬಳಕೆ ಮುಂದುವರಿಯಿತು.[೨೦] ವಿಜಯನಗರದ ಅರಸರು ಈ ಕೆಂಪು ಮಿಶ್ರಿತ ಮರಳು ಶಿಲೆಯನ್ನಾಗಲಿ, ಬಳಪದ ಶಿಲೆಯನ್ನಾಗಲಿ ಬಳಸಲಿಲ್ಲ. ಇದಕ್ಕೆ ಬದಲಾಗಿ ಗ್ರಾನೈಟ(ಕಣಜ) ಶಿಲೆಯನ್ನು ವಿಜಯನಗರದರಸರು ತಮ್ಮ ದೇವಾಲಯ ವಾಸ್ತುಶಿಲ್ಪದಲ್ಲಿ ಬಳಸಿಕೊಂಡರು.

ಗ್ರಾನೈಟ್ ಶಿಲೆಯ ಬಳಕೆಯನ್ನು ಕುರಿತು "ಸಾಮಾಜಿಕ ಹಾಗೂ ಧಾರ್ಮಿಕ ಉಪಯೋಗದ ಬೃಹತ್ ವಾಸ್ತು ನಿರ್ಮಾಣಗಳಿಗೆ ಕಣಜ ಶಿಲೆಯನ್ನು ಬಳಸಲಾರಂಭಿಸಿದ್ದು ಇವರ ಇನ್ನೊಂದು ಮುಖ್ಯ ಕೊಡುಗೆ" ಎಂದು ಮಾಧವನ್ ಕಟ್ಟಿ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.[೨೧] ವಿಜಯನಗರದ ಅರಸರು ಕಣಜ ಶಿಲೆಯನ್ನು ಹೊಸ ದೇವಾಲಯಗಳ ರಚನೆಯಲ್ಲಿ ಬಳಸಿದ್ದು ಮಾತ್ರವಲ್ಲದೇ ಹಿಂದಿನ ಅನೇಕ ದೇವಾಲಯಗಳ ಜೀರ್ಣೋದ್ಧಾರದಲ್ಲೂ ಬಳಸಿದರು. ಹಳೆಯ ದೇವಾಲಯಗಳ ವಿವಿಧ ರೀತಿಯ ಮಂಟಪ ಗೋಪುರ ಸಹಿತ ಪ್ರಾಕಾರಗಳನ್ನು ಸೇರಿಸಿ ಅವುಗಳನ್ನು ವಿಸ್ತರಿಸಲು ಸಹ ವಿಜಯನಗರದ ಅರಸರು ಕಣಜ ಶಿಲೆಯನ್ನು ಬಳಸಿದರು. ಕಣಜ ಶಿಲೆಯ ಬಳಕೆಯನ್ನು ವಿಶಾಲ ವಿಜಯನಗರ ಸಾಮ್ರಾಜ್ಯದ ತುಂಬೆಲ್ಲ ಇಂದಿಗೂ ಕಾಣಬಹುದು.

ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾದ ಮೇಲೆ ಕರ್ನಾಟಕದ ವಾಸ್ತುಶಿಲ್ಪದ ಮೇಲೆ ಪ್ರಬಲವಾದ ವರ್ಚಸ್ಸನ್ನು ಬೀರಿತು. ಕರ್ನಾಟಕದ ಇತಿಹಾಸವನ್ನು ಅವಲೋಕಿಸಿದಾಗ ನಮಗೆ ತೋಚುವ ಒಂದು ಅಂಶವೆಂದರೆ "ಕರ್ನಾಟಕದಲ್ಲಿ ಮತ್ತು ಭಾರತದಲ್ಲಿ" ಯಾವುದೇ ರಾಜವಂಶ ಹೊಸದಾಗಿ ರಾಜ್ಯ ಸ್ಥಾಪನೆ ಮಾಡಿದಾಗ ಮೊಟ್ಟ ಮೊದಲಿಗೆ ಆ ರಾಜ್ಯವಂಶ ಕೈಗೊಳ್ಳುವ ಕಾರ್ಯವೆಂದರೆ ಈ ಮೊದಲು ಗೆದ್ದ ಪ್ರದೇಶದಲ್ಲಿನ ದೇವಾಲಯಗಳಿಗೆ ಭಕ್ತಿಯಿಂದ ದತ್ತಿಯನ್ನು ಬಿಡುವುದು ಹಾಗೂ ಹೊಸದಾದ ದೇವಾಲಯಗಳ ನಿರ್ಮಾಣವನ್ನು ಮಾಡುವುದು ಬಹಳ ಮುಖ್ಯವಾದ ಕಾರ್ಯವಾಗುತ್ತಿತ್ತು. ರಾಜಸತ್ತೆಯನ್ನು ಹೊಸದಾಗಿ ನಿರ್ಮಿಸಿದಾಗ ಆ ಪ್ರಜೆಗಳ ಸಂತುಷ್ಟತೆಗಾಗಿ ಹೊಸದಾಗಿ ರಾಜಸತ್ತೆ ಸ್ಥಾಪಿಸಿದ ರಾಜವಂಶ

ಅಲ್ಲಿ ಪ್ರಸಿದ್ಧಿ ಪಡೆದ ದೇವಾಲಯಕ್ಕೆ ದತ್ತಿ ಬಿಟ್ಟುಕೊಟ್ಟು, ಆ ಮುಖೇನ ಪ್ರಜೆಗಳ ಒಲುಮೆಯನ್ನು ಪಡೆದುಕೊಳ್ಳುವುದು ಒಂದು ಉಪಾಯವಾಗಿತ್ತು.[೨೨] ಅಲ್ಲದೇ ಗೆದ್ದ ರಾಜವಂಶಗಳು ತಮ್ಮ ತಮ್ಮ ರಾಜಕೀಯ ಚಟುವಟಿಕೆಗಳಿಗೆ ಜನಸಾಮಾನ್ಯರ ಮತ್ತು ಸೈನಿಕರ ಬೆಂಬಲ ಪಡೆಯಲು ರಾಜರು ಮಾಡಿದ ಯುಕ್ತಿ ಎಂದು ಹೇಳಬಹುದು. ವಿಜಯನಗರದ ಅರಸರು ಇದಕ್ಕೆ ಹೊರತಾಗಿಲ್ಲ. ವಿಜಯನಗರದ ಅರಸರು ತಾವು ಗೆದ್ದ ಅನೇಕ ಪ್ರದೇಶಗಳಲ್ಲಿನ ದೇವಾಲಯಗಳಿಗೆ ದಾನ-ದತ್ತಿಗಳ ನೀಡಿದ ಉಲ್ಲೇಖಗಳನ್ನು ನೋಡಬಹುದು.[೨೩]

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರ ದೇವಾಲಯಗಳ ನಿರ್ಮಾಣದಲ್ಲಿ ತೊಡಗಬೇಕಾದಾಗ ಯಾವ ವಾಸ್ತುಶೈಲಿಯಲ್ಲಿ ದೇವಾಲಯವನ್ನು ನಿರ್ಮಿಸಬೇಕು ಹಾಗೂ ಯಾವ ರೀತಿಯ ಕಲ್ಲನ್ನು ಉಪಯೋಗಿಸಬೇಕು ಎಂಬ ಪ್ರಶ್ನೆ ವಿಜಯನಗರದ ಅರಸರಿಗೆ ಎದುರಾಯಿತು. ಇವರಿಗಿಂತ ಪೂರ್ವದಲ್ಲಿ ಕರ್ನಾಟಕವನ್ನು ಆಳಿದ ಹೊಯ್ಸಳರು ದೇವಾಲಯಗಳನ್ನು ಬಳಪದ ಕಲ್ಲಿನಿಂದ ಅತಿ ಸೂಕ್ಷ್ಮವಾದ ಕುಸುರಿಯ ಕೆಲಸದಿಂದ ಹೆಚ್ಚು ಸೌಂದರ್ಯಯುತವಾಗಿ ನಿರ್ಮಿಸಿದ್ದರು.[೨೪] ಆದ್ದರಿಂದಲೇ ಹೊಯ್ಸಳರ ದೇವಾಲಯಗಳು ಕಲಾ ಶ್ರೀಮಂತಿಕೆಗೆ ಕಲಾ ಸೂಕ್ಷ್ಮತೆಗೆ ಹೆಸರುವಾಸಿಯಾದವು. ಆದರೆ ಇದೇ ಕಲ್ಲನ್ನು ವಿಜಯನಗರದ ಅರಸರು ಬಳಸಲು ಸಾಧ್ಯವಾಗಲಿಲ್ಲ. ಏಕೆಂದರೆ ದಕ್ಷಿಣ ಕರ್ನಾಟಕದಲ್ಲಿ ಬಳಪದ ಕಲ್ಲು ವಿಶೇಷವಾಗಿ ದೊರೆಯುತ್ತಿತ್ತು. ಆದರೆ ವಿಜಯನಗರದ ಸ್ಥಾಪನೆಯ ರಾಜಧಾನಿಯಲ್ಲಿ ಈ ಬಳಪದ ಕಲ್ಲು ದೊರೆಯದಿದ್ದದು ಒಂದು ಸಮಸ್ಯೆಯಾಯಿತು. ಇದರಿಂದ ವಿಜಯನಗರದ ಅರಸರು ಸ್ಥಳೀಯವಾಗಿ ದೊರೆಯುವ ಹಾಗೂ ಹೆಚ್ಚು ಭಾರವನ್ನು ಹೊರಬಲ್ಲ ಶಕ್ತಿಯನ್ನು ಹೊಂದಿದ್ದ ಕಣಜ ಶಿಲೆಯನ್ನು ದೇವಾಲಯಗಳ ರಚನೆಯಲ್ಲಿ ಬಳಸಿಕೊಂಡಿರುವ ಸಾಧ್ಯತೆ ಇದೆ. ಈ ರೀತಿಯ ಬೆಣಚು ಕಲ್ಲು ರಾಜಧಾನಿಯಲ್ಲಿ ವಿಪುಲ ಪ್ರಮಾಣದಲ್ಲಿ ದೊರೆಯುತ್ತಿತ್ತಲ್ಲದೇ ಈ ಪ್ರದೇಶದಲ್ಲಿ ಹಿಂದಿನ ಅರಸರು ಇದೇ ಕಲ್ಲಿನಲ್ಲಿ ನಿರ್ಮಿಸಿದ ಅನೇಕ ದೇವಾಲಯಗಳು ಅಸ್ತಿತ್ವದಲ್ಲಿದ್ದವು. ಹಂಪೆಯ ಹೇಮಕೂಟದಲ್ಲಿನ ವಿಜಯನಗರ ಪೂರ್ವದ ಅನೇಕ ದೇವಾಲಯಗಳು ಗ್ರಾನೈಟ್ ಕಲ್ಲಿನಲ್ಲಿಯೇ ನಿರ್ಮಾಣಗೊಂಡಿದ್ದವು. ಅವುಗಳಲ್ಲಿ ಕಂಪಿಲರಾಯ ದೇವಾಲಯವೂ ಒಂದು.[೨೫] ಈ ವಿಜಯನಗರ ಸ್ಥಾಪನೆಯ ಕೆಲವೇ ವರ್ಷಗಳ ಹಿಂದೆ ಹೇಮಕೂಟದ ಬೆಟ್ಟದಲ್ಲಿ ವೀರ ಕಂಪಿಲರಾಯನು ತ್ರಿಕೂಟಾಚಲ ಶಿವದೇವಾಲಯವನ್ನು ನಿರ್ಮಿಸಿದ್ದನು.[೨೬]

ಕಣಜ ಶಿಲೆಯಲ್ಲಿ ವಿಜಯನಗರದ ಅರಸರು ದೇವಾಲಯದ ನಿರ್ಮಾಣ ಕೈಗೊಳ್ಳಲು ಇನ್ನೊಂದು ಪ್ರಮುಖ ಅಂಶವೆಂದರೆ ಬಳಪದ ಕಲ್ಲನ್ನು ಬೇರೆಡೆಯಿಂದ ತಂದು ರಾಜಧಾನಿಯಲ್ಲಿ ದೇವಾಲಯವನ್ನು ನಿರ್ಮಿಸಬೇಕೆಂದರೆ ಅದು ಅತ್ಯಂತ ವೆಚ್ಚದಾಯಕ ಕೆಲಸವಾಗಿತ್ತು. ಅಷ್ಟೊಂದು ಖರ್ಚನ್ನು ಭರಿಸಲು ಸಾಮ್ರಾಜ್ಯ ಸ್ಥಾಪನೆಯ ಹೊಸತರಲ್ಲಿ ಆರ್ಥಿಕವಾಗಿಯೂ ಸುಲಭವಾಗಿರಲಿಲ್ಲ ಮತ್ತು ಬಳಪದ ಕಲ್ಲನ್ನು

ಬೇರೆಡೆಯಿಂದ ತಂದು ರಾಜಧಾನಿಯಲ್ಲಿ ದೇವಾಲಯ ನಿರ್ಮಾಣ ಮಾಡುವುದು ಬಹಳ ಸಮಯ ವ್ಯಯ ಮಾಡುವ ವಿಧಾನವಾಗಿತ್ತು. ಆದರೆ ಸ್ಥಳೀಯವಾಗಿ ದೊರಕುವ ಬೆಣಚು ಕಲ್ಲಿನಲ್ಲಿ ದೇವಾಲಯಗಳನ್ನು ಕಟ್ಟುವುದು ಅಷ್ಟೇನು ಕಷ್ಟದ ಯೋಜನೆಯಾಗಿರಲಿಲ್ಲ. ವಿಜಯನಗರದ ಪ್ರಥಮ ರಾಜವಂಶವಾದ ಸಂಗಮ ವಂಶಸ್ಥರು ತಮ್ಮ ರಾಜ್ಯಾಡಳಿತದ ಮೊದಲ ವರ್ಷಗಳಲ್ಲಿ ಅನೇಕ ಯುದ್ಧಗಳನ್ನು ಮಾಡಬೇಕಾಯಿತು. ಮತ್ತು ತಮ್ಮ ರಾಜ್ಯದಲ್ಲಿ ಸುವ್ಯವಸ್ಥಿತವಾದ ಆಡಳಿತವನ್ನು ಸ್ಥಾಪಿಸಬೇಕಾದುದರಿಂದ ಹಣದ ಬಹುಭಾಗವನ್ನು ಈ ಕಾರ್ಯಗಳಿಗೆ ವಿನಿಯೋಗಿಸಬೇಕಾಯಿತು. ಅಲ್ಪವೆಚ್ಚದಲ್ಲಿಯೇ ಬೆಣಚು ಕಲ್ಲಿನಲ್ಲಿ ಭದ್ರ ದೇವಾಲಯಗಳನ್ನು ನಿರ್ಮಿಸಲು ಅವರು ಮುಂದಾದರು.[೨೮] ಇವೆಲ್ಲಕ್ಕಿಂತಲೂ ಮುಖ್ಯವಾಗಿ ತಮ್ಮ ಆಳ್ವಿಕೆಯನ್ನು ಸ್ಥಿರಗೊಳಿಸಿಕೊಂಡ ನಂತರ ತಮಿಳು ಪ್ರದೇಶವನ್ನು ತಮ್ಮ ಆಡಳಿತಕ್ಕೆ ಒಳಪಡಿಸಿಕೊಂಡದ್ದು. ಕ್ರಿ.ಶ.೧೩೫೯ರಲ್ಲಿ ಬುಕ್ಕರಾಯನ ಮಗ ಕುಮಾರ ಕಂಪಣ್ಣನು ತಮಿಳುನಾಡಿನ ಮೇಲೆ ದಂಡಯಾತ್ರೆ ಹೊರಟನು. ತಮಿಳು ರಾಜ್ಯದಲ್ಲಿನ ಸುಲ್ತಾನನ ಆಕ್ರಮಣಕಾರಿ ಆಡಳಿತದ ಅವ್ಯವಸ್ಥೆಗಳನ್ನು ಕೊನೆಗೊಳಿಸಿ ಸುವ್ಯವಸ್ಥೆಯನ್ನ ನೆಲೆಗೊಳಿಸುವುದು ಈ ದಂಡಯಾತ್ರೆಯ ಮುಖ್ಯ ಉದ್ದೇಶವಾಗಿತ್ತು. ಈ ಮಹತ್ ಕಾರ್ಯದಲ್ಲಿ ಕಂಪಣ್ಣ ಅತ್ಯಂತ ಸಫಲನಾದ, ತಮಿಳು ನಾಡಿನಲ್ಲಿ ಕಂಪಣ್ಣನ ದಂಡಯಾತ್ರೆ ಕೇವಲ ರಾಜಕೀಯ ವಿಜಯವಾಗಿರದೇ ಹಿಂದಿನ ದಶಕದಲ್ಲಿ ತೊಂದರೆಗೀಡಾಗಿದ್ದ ಹಿಂದೂಧರ್ಮ ದೇವಾಲಗಳ ಪುನರು ಜೀವನಕ್ಕೂ ಸಹಕಾರಿಯಾಗಿ ಪರಿಣಮಿಸಿತ್ತು.

ಈ ಉದ್ದೇಶ ಸಾಧನೆಯಲ್ಲಿ ಕಂಪಣ್ಣನ ಸಾಹಸಿ ದಂಡನಾಯಕರು ಸೈನಿಕರು ಪ್ರಜೆಗಳು ಆಡಳಿತಗಾರರು ಅಮೂಲ್ಯ ನೆರವು ನೀಡಿದರು. ಹೊಸದಾಗಿ ಉದಯಿಸಿದ ವಿಜಯನಗರ ಸಾಮ್ರಾಜ್ಯ ತಾನು ಘೋಷಿಸಿಕೊಂಡ ಧ್ಯೇಯೋದ್ದೇಶಗಳನ್ನು ಸಮರ್ಥವಾಗಿ ಪೂರೈಸಿದ್ದಕ್ಕೆ ಈ ದಂಡಯಾತ್ರೆ ಸಹಾಯಕವಾಗಿತ್ತು. ಕ್ರಿ.ಶ.೧೩೭೧ರಲ್ಲಿ ಸುಲ್ತಾನನ ಮೇಲೆ ಜಯಗಳಿಸಿದ ಕುಮಾರ ಕಂಪಣ್ಣನು ಶ್ರೀರಂಗಂ ಪ್ರದೇಶವನ್ನು ತನ್ನ ವಶಕ್ಕೆ ತೆಗೆದುಕೊಂಡನು. ಅನ್ಯ ಧರ್ಮಿಯರ ಸತತ ದಾಳಿಯಿಂದ ಶ್ರೀರಂಗಂನ ಪ್ರಸಿದ್ಧ ದೇವಾಲಯ ಸಾಕಷ್ಟು ಹಾನಿಗೀಡಾಗಿತ್ತು. ಆಗ ಶ್ರೀರಂಗನಾಥ ಮೂರ್ತಿಯನ್ನು ಅಂಜನಾದ್ರಿಗೆ ಸಾಗಿಸಲಾಗಿತ್ತು. ಕುಮಾರ ಕಂಪಣ್ಣನು ತಿರುಪತಿಯಲ್ಲಿದ್ದ ಶ್ರೀರಂಗನಾಥ ಮೂರ್ತಿಯನ್ನು ಪುನಃ ಪ್ರತಿಷ್ಠಾಪನೆ ಮಾಡಿ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಿದನು.[೨೯]

ಹೀಗೆ ಕ್ರಿ.ಶ.೧೩೭೧ರ ಸುಮಾರಿಗೆ ಇಡೀ ತಮಿಳುನಾಡು ಪ್ರದೇಶ ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಮಧುರೈ ವಿಜಯದ ನಂತರ ಶ್ರೀರಂಗಂ, ಚಿದಂಬರಂ ಮುಂತಾದ ಸ್ಥಳಗಳಲ್ಲಿ ದೇವಾಲಯಗಳು ಜೀರ್ಣೋದ್ಧಾರಗೊಂಡು ಪೂಜೆ ಪುನಸ್ಕಾರಗಳು ಆರಂಭಗೊಂಡದ್ದನ್ನು ನೋಡಬಹುದು.[೩೦]

ಮಧುರೈ ಮೀನಾಕ್ಷಿ ದೇವಾಲಯವು ಕೂಡ ಸುಲ್ತಾನರ ಆಳ್ವಿಕೆಯಲ್ಲಿ ಮುಚ್ಚಲ್ಪಟ್ಟಿದ್ದು ಯಾವುದೇ ರೀತಿಯ ಪೂಜೆ ಪುನಸ್ಕಾರಗಳು ನಡೆಯುತ್ತಿರಲಿಲ್ಲ. ಈ ಕಾಲದಲ್ಲಿ ಮತ್ತೆ ಭಕ್ತರಿಗೆ ದೇವಿಯನ್ನು ಪೂಜಿಸಲು ಅನುಕೂಲವಾಗುವಂತೆ ಬಾಗಿಲನ್ನು ತೆರೆಯಲಾಯಿತು.[೩೧]

ತಮಿಳು ಪ್ರದೇಶದಲ್ಲಿ ಚೋಳರು ಮತ್ತು ಪಾಂಡ್ಯರು ದೇವಾಲಯಗಳನ್ನು ಬೆಣಚು ಕಲ್ಲಿನಿಂದ ನಿರ್ಮಿಸುತ್ತಿದ್ದರು. ಈ ದೇವಾಲಯಗಳ ಕಲಾ ಸೊಬಗು ಬೃಹದಾಕಾರದ ವಾಸ್ತುಶೈಲಿ ವಿಜಯನಗರದ ಅರಸರನ್ನು ಬಹುವಾಗಿ ಆಕರ್ಷಿಸಿತು. ಇದರ ಪ್ರಭಾವದಿಂದ ವಿಜಯನಗರದ ಅರಸರು ಬೆಣಚು ಕಲ್ಲಿನಲ್ಲಿ ದೇವಾಲಯಗಳನ್ನು ಕಟ್ಟಲಿಕ್ಕೆ ಪ್ರೇರಣೆ ದೊರೆಯಿತು ಮತ್ತು ಆ ಭಾಗದ ದ್ರಾವಿಡ ಶೈಲಿಯನ್ನೇ ತಮ್ಮ ದೇವಾಲಯಗಳ ರಚನೆಯಲ್ಲಿ ಬಳಸಿಕೊಂಡರು.

ಹೊಯ್ಸಳರು ಈ ಹಿಂದೆ ಕರ್ನಾಟಕವನ್ನು ಆಳುತ್ತಿದ್ದರು. ಹೊಯ್ಸಳ ರಾಜರು ಬಳಪದ ಕಲ್ಲನ್ನು ಉಪಯೋಗಿಸಿ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ವಿಜಯನಗರದ ಅರಸರು ಹೊಯ್ಸಳ ದೊರೆಗಳನ್ನು ಬದಿಗೊತ್ತಿ ತಮ್ಮ ಆಳ್ವಿಕೆಯನ್ನು ಸ್ಥಾಪಿಸಿದ್ದರಿಂದ ಮತ್ತು ಹೊಯ್ಸಳ ಪ್ರದೇಶದಲ್ಲಿ ಹೊಯ್ಸಳರ ಪತನಕ್ಕೆ ವಿಜಯನಗರದ ಅರಸರೇ ಕಾರಣರು ಎಂಬ ಭಾವನೆ ಪ್ರಜೆಗಳಲ್ಲಿ ಇದ್ದುದರಿಂದ ಹೊಯ್ಸಳರು ಬಳಸಿದ ಬಳಪದ ಕಲ್ಲನ್ನು ವಿಜಯನಗರದ ಅರಸರು ಬಳಸಲು ಸಾಧ್ಯವಾಗಿಲ್ಲ ಎಂಬ ಹೇಳಿಕೆಯು ಅಷ್ಟು ಸಮಂಜಸ ಎನಿಸುವುದಿಲ್ಲ.[೩೨] ವಿಜಯನಗರ ಕ್ರಿ.ಶ.೧೩೩೬ರಲ್ಲಿ ರಾಜ್ಯ ಸ್ಥಾಪನೆಯನ್ನು ಇವರು ಮಾಡಿದಾಗಲೂ ತಾವು ಸ್ವತಂತ್ರರೆಂದು ಹೇಳಿಕೊಂಡಿಲ್ಲ. ಮಹಾ-ಮಂಡಲೇಶ್ವರರೆಂದೇ ಕರೆದು ಕೊಂಡಿದ್ದಾರೆ.[೩೩] ಇದು ಹೊಯ್ಸಳ ಮತ್ತು ವಿಜಯನಗರದ ಅರಸರ ಮಧ್ಯದ ಬಾಂಧವ್ಯವನ್ನು ಸೂಚಿಸುತ್ತದೆ. ಈ ಅಂಶಗಳನ್ನು ಅವಲೋಕಿಸಿದಾಗ ಡಾ.ಬಿ.ಎಸ್ .ಸಾಲತೊರೆಯವರು ಹೊಯ್ಸಳ ಕೊನೆಯ ಅರಸರಾದ ಮೂರನೇ ಬಲ್ಲಾಳನು ಸಂಗಮ ಸಹೋದರರಿಗೆ ೧೩೪೬ರಲ್ಲಿ ರಾಜಕೀಯ ದೀಕ್ಷೆ ತೊಡಿಸಿದರು ಎಂಬುದು ಸತ್ಯಕ್ಕೆ ಹತ್ತಿರವಾಗುತ್ತದೆ.[೩೪] ಡಿ.ವಿ.ಜಿ.ಯವರ ಅಭಿಪ್ರಾಯದಂತೆ ಸಂಗಮ-ಹರಿಹರರು ಹೊಯ್ಸಳ ಸಂತತಿಗೆ ಸೇರಿದವರಾಗಿರಬೇಕು ಅಥವಾ ಅವರ ಮಹಾಪ್ರಧಾನಿಯೇ ಪ್ರತಿನಿಧಿಯೇ ಆಗಿರಬಹುದು ಎಂಬುದು ಇಲ್ಲಿ ಉಲ್ಲೇಖರ್ಹ.

ಹೊಯ್ಸಳರು ಬಳಿಸಿದ ಬಳಪದ ಕಲ್ಲನ್ನು ಹಂಪಿಗೆ ತರುವುದಕ್ಕೆ ವಿಜಯನಗರ ಕಾಲದಲ್ಲಿ ಸಾರಿಗೆ-ಸಂಪರ್ಕದ ಅನಾನುಕೂಲವು ಒಂದು ಕಾರಣವಾಗಿರಬೇಕು. ಭಾರವಸ್ತುಗಳನ್ನು ಸಾಗಿಸಲು ಅಂದರೆ ಶಿಲೆಯನ್ನು ಸಾಗಿಸಲು ಆ ಕಾಲದಲ್ಲಿ ಅಷ್ಟೊಂದು ಸುಗಮವಾಗಿರಲಿಲ್ಲ. ಆದುದರಿಂದ ವಿಜಯನಗರದ ಅರಸರು ಸ್ಥಳೀಯವಾಗಿ ದೊರೆಯುತ್ತಿದ್ದ ಗ್ರಾನೈಟ್ಸ್‌ನ್ನು ತಮ್ಮ ದೇವಾಲಯಗಳ ನಿರ್ಮಾಣದಲ್ಲಿ ಬಳಸಿದ್ದನ್ನು ಕಾಣಬಹುದು. ತಮಿಳು ಪ್ರಭಾವದಿಂದ ದ್ರಾವಿಡ ಶೈಲಿಯನ್ನು ಇವರು ತಮ್ಮ ದೇವಾಲಯಗಳ ನಿರ್ಮಾಣದಲ್ಲಿ ಬಳಸಿದರು. ಈ ದ್ರಾವಿಡ ಶೈಲಿಯು ಹೆಚ್ಚು ಎತ್ತರವಾಗಿಯೂ ಹಾಗೂ ಗೋಪುರ ನಿರ್ಮಾಣ ದೇವಾಲಯಗಳ ಗಾತ್ರದಲ್ಲಿ ತುಂಬಾ ಬೃಹದ್ ಆಕಾರವಾಗಿತ್ತು. ಈ ಅಧಿಕ ಭಾರವನ್ನು ಹೊರುವುದು ಮರಳುಗಲ್ಲಿನಿಂದಾಗಲೀ ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಕಲ್ಲಿನಿಂದಾಗಲೀ

ಸಾಧ್ಯವಾಗಿರಲಿಲ್ಲ. ಈ ಭಾರವನ್ನು ಹೊರುವುದಕ್ಕೆ ಕಣಜ ಶಿಲೆಯೇ ಉತ್ತಮವಾದುದು ಎಂದು ವಿಜಯನಗರದ ಅರಸರು ಕಣಜ ಶಿಲೆಯಲ್ಲಿಯೇ ತಮ್ಮ ದೇವಾಲಯಗಳ ನಿರ್ಮಾಣವನ್ನು ಕೈಗೊಂಡಂತಿದೆ.

ಉತ್ತರದ ಪ್ರಬಲ ದಾಳಿಗಳನ್ನು ವಿಜಯನಗರದವರು ಪ್ರಬಲವಾಗಿ ಹಿಮ್ಮೆಟ್ಟಿಸಬೇಕಾಗಿದ್ದರಿಂದ ಇಡಿ ಸಾಮ್ರಾಜ್ಯದ ಸಮಸ್ತ ಜನರ ಒಲುಮೆಗಳಿಸಬೇಕಾದುದರಿಂದ ದೇವಾಲಯಗಳನ್ನು ಮಾಧ್ಯಮಗಳಾಗಿ ವಿಜಯನಗರದ ಅರಸರು ಉಪಯೋಗಿಸಿದ್ದರು. ದೇವರ ಪೂಜೆಗೆ ಸಂಬಂಧಿಸಿದಂತೆ ಹೊಸ ಹೊಸ ಉತ್ಸವಗಳನ್ನು ಯಜ್ಞ ಯಾಗಾದಿಗಳನ್ನು ಕೈಗೊಳ್ಳತೊಡಗಿದರು. ಸಾಮ್ರಾಜ್ಯದಲ್ಲಿ ವಾಸವಾಗಿದ್ದ ಎಲ್ಲಾ ಜನಾಂಗದವರ ಮನವೊಲಿಸಲು ಆ ಎಲ್ಲಾ ಜನಾಂಗದ ದೇವಾಲಯಗಳನ್ನು ಸಂರಕ್ಷಿಸಿ ಪುನಃ ಶ್ಚೇತನಗೊಳಿಸಿದರು. ವೈಭವೋಪೇರಿತವಾಗಿ ಪೂಜೆಪುನಸ್ಕಾರಗಳನ್ನು ಮಾಡುವುದು ವಿಜಯನಗರ ಕಾಲದಲ್ಲಿ ಸರ್ವೇ ಸಾಮಾನ್ಯವಾಗಿತ್ತು. ಆದ್ದರಿಂದಲೇ ಸಂಗೀತ ಲಲಿತಕಲೆ, ನಾಟ್ಯಕಲೆ ಮುಂತಾದವುಗಳಿಗೆ ವಿಶೇಷ ಪ್ರೋತ್ಸಾಹ ನೀಡಲಾಯಿತು.[೩೬]

ಈ ಎಲ್ಲಾ ಕಾರ್ಯಕ್ರಮಗಳಿಂದಾಗಿ ದೇವಾಲಯಗಳು ವಿಶೇಷವಾದ ಹೊಸ ರೂಪ ಪಡೆದುಕೊಂಡವು. ಹಿಂದೂ ಧರ್ಮೀಯರ ಮನಸ್ಸನ್ನು ಸಂತೋಷಪಡಿಸಲು ಧಾರ್ಮಿಕವಾದ ವೈದಿಕ ಗ್ರಂಥಗಳು ಅವುಗಳಿಗೆ ಟೀಕೆಗಳು, ಕಾವ್ಯ, ನಾಟಕ, ಪುರಾಣ, ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡವು. ದೇವಾಲಯಗಳ ಗೋಡೆಗಳ ಮೇಲೆ ಕಂಬಗಳ ಮೇಲೆ ಪೌರಾಣಿಕ ಕಲಾತ್ಮಕ ಕಥೆಗಳು ಪ್ರಾತ್ಯಕ್ಷಿಕೆಗಳನ್ನು ಮಾಡಲಾಯಿತು. ಇಡೀ ರಾಜ್ಯದ ದೇವಾಲಯದ ನಿರ್ಮಾಣದ ಶಿಲ್ಪಗಳ ರೂವಾರಿಗಳು, ಅಧಿಕಾರಿಗಳು ಇದಕ್ಕಾಗಿ ಹಗಲಿರುಳು ಪ್ರಯತ್ನಿಸಿದರು. ಜೊತೆ ಜೊತೆಗೆ ಈ ಕಾಲದಲ್ಲಿ ವೀರತ್ವಕ್ಕೆ ಶೌರ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ಕೊಡಲೆಂಬಂತೆ ಆ ಗುಣಗಳೇ ಮೈವೆತ್ತಿ ಬಂದಂತಿದ್ದ ಅರ್ಜುನ, ಗಣೇಶ, ವೀರಭದ್ರ, ಹನುಮಂತ, ಭೈರವ, ಪಂಪಾಪತಿ, ಭಕ್ತ ಪ್ರಹ್ಲಾದ ಮುಂತಾದ ಕಥೆಗಳನ್ನು ದೇವಾಲಯಗಳ ಗೋಡೆಗಳ ಮೇಲೆ ಕಂಬಗಳ ಮೇಲೆ ಚಿತ್ರಿಸಲಾಯಿತು.[೩೭] ಈ ಮೊದಲಿಗೆ ರಚನೆಗೊಂಡ ಹೊಯ್ಸಳ ದೇವಾಲಯಗಳಲ್ಲಿ ಇಂತಹ ಕಥೆಗಳು ಇದ್ದರೂ ಇಷ್ಟು ವಿಪುಲವಾಗಿ ದೇವಾಲಯಗಳ ಭಿತ್ತಿಯಲ್ಲಿ ವಸ್ತುಗಳಾಗಿರಲಿಲ್ಲ.

ಸೈನ್ಯದ ವಿವಿಧ ಅಂಗಗಳಾದ ಪದಾತಿ ಆನೆ ಕುದುರೆ ದಳಗಳ ಚಿತ್ರಗಳು ಸಿಕ್ಕುತ್ತವೆ. ಚತುರಂಗ ಬಲದಲ್ಲಿನ ರಥದ ಬಳಕೆ ವಿಜಯನಗರ ಕಾಲದಲ್ಲಿ ನಿಂತಿತ್ತು.[೩೮] ಹಾಗಾಗಿ ಆನೆ ಕುದುರೆ ಪದಾತಿಗಳು ಯುದ್ಧದ ಚಿತ್ರಗಳು ಆಯುಧಗಳ ಚಿತ್ರಗಳು ಹಿಂದಿರುವ ದೇವಾಲಯಗಳಿಗಿಂತ ಈ ಕಾಲದಲ್ಲಿ ಹೆಚ್ಚಿನ ಮಟ್ಟದಲ್ಲಿ ಚಿತ್ರಿತವಾದವು. ವಿಜಯನಗರ ಕಾಲದ ವೀರಗಲ್ಲುಗಳಲ್ಲಿ ಆನೆ ಕುದುರೆಗಳ ಚಿತ್ರವಿರುವಂತೆ ರಥಗಳ ಚಿತ್ರಗಳು ಕಂಡುಬರುವುದಿಲ್ಲ. ದೇವಾಲಯಗಳಲ್ಲು ಈ ತರದ ರಥದ ಚಿತ್ರಗಳು ಯುದ್ಧ ಸಂದರ್ಭದಲ್ಲಿ ಕಂಡುಬಂದಿಲ್ಲ.[೩೯] ಆದರೆ ಪೌರಾಣಿಕ ವಿಷಯಗಳನ್ನು ಹೇಳುವಾಗ ಈ ರಥದ ಚಿತ್ರಗಳು

ದೇವಾಲಯದ ಬಿತ್ತಿಗಳಲ್ಲಿ ಕಂಡುಬಂದಿವೆ. ಆಯುಧಗಳಲ್ಲಿ ಖಡ್ಗ, ಗುರಾಣಿ, ಫಲಕ, ಕತ್ತಿ, ದುಂದುಭಿ, ಈಟಿ, ಜೋಡಿ, ಬರ್ಚಿ, ಕಬ್ಬಿಣದ ದಂಡ, ಶಿರಸ್ತ್ರಾಣ ಮುಂತಾದ ಆಯುಧಗಳನ್ನು ವಿಜಯನಗರ ದೇವಾಲಯಗಳಲ್ಲಿ ಕಾಣಬಹುದು.[೪೦] ಈ ಆಯುಧಗಳು ಮತ್ತು ಸೈನಿಕರ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಕಾಲದಲ್ಲಿ ಮೂಡಿ ಬಂದಿರುವ ಕಾರಣವೆಂದರೆ ಪ್ರಜೆಗಳನ್ನು ವೀರ ಪುರುಷರನ್ನಾಗಿ ಮಾಡಲು ಈ ಚಿತ್ರಗಳು ಪ್ರಭಾವ ಬೀರಲಿ ಎಂಬುದಾಗಿತ್ತು. ಇವು ಪ್ರಜೆಗಳಲ್ಲಿ ಹುರುಪನ್ನು ತುಂಬಿ ಅವರು ರಾಜ್ಯ ರಕ್ಷಣೆಗಾಗಿ, ಧರ್ಮರಕ್ಷಣೆಗಾಗಿ ಜೀವನದ ಹಂಗು ತೊರೆದು ಹೋರಾಡುವಂತೆ ಮಾಡಲು ಹುರುದುಂಬಿಸುವ ಒಂದು ಸ್ಫೂರ್ತಿಯ ಸಂಕೇತವಾಗಿ ದೇವಾಲಯಗಳಲ್ಲಿ ಈ ತರದ ಚಿತ್ರಗಳು ಮೂಡಿ ಬಂದವು. ಇದಲ್ಲದೆ ಧಾರ್ಮಿಕ ಕಥೆಗಳಿಗೆ ಸಂಬಂಧಿಸಿದ ಎಲ್ಲಾ ದೇವರುಗಳ ಚಿತ್ರಗಳು ದೇವಾಲಯಗಳಲ್ಲಿ ಲಭ್ಯವಾಗಿದೆ. ಇವುಗಳಲ್ಲಿ ಶೈವ-ವೈಷ್ಣವ ಎಂಬ ಬೇಧ ಭಾವವಿಲ್ಲದೆ ಎಲ್ಲ ತೆರನಾದ ದೇವರುಗಳ ಶಿಲ್ಪಗಳನ್ನು ದೇವಾಲಯಗಳಲ್ಲಿ ಕಾಣಬಹುದು. ಬಯಕಾರ ರಾಯಪ್ಪಯ್ಯ ನಿರ್ಮಿಸಿದ ತಿಮ್ಮಲಾಪುರದ ಶೈವ ದೇವಾಲಯದಲ್ಲಿ ವಿಷ್ಣು, ಗರುಡ, ಊರ್ಧ್ವ ಪುಂಡ್ರ ಮುಂತಾದ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳನ್ನು ನೋಡಬಹುದು.[೪೧] ಅದೇ ತೆರನಾಗಿ ಆತನೇ ನಿರ್ಮಿಸಿದ ಅದೇ ಊರಿನ ಶ್ರೀ ವೇಣುಗೋಪಾಲ ಸ್ವಾಮಿ ದೇವಸ್ಥಾನದಲ್ಲಿ ಗೋಮಾತೆಯು ಶಿವಲಿಂಗಕ್ಕೆ ಹಾಲೆರೆಯುವ ಚಿತ್ರ ಶಿವಲಿಂಗ ಮುಂತಾದ ಜೈನ ಧರ್ಮಕ್ಕೆ ಸೇರಿದ ಚಿತ್ರಗಳನ್ನು ಕಾಣಬಹುದು.[೪೨] ಹೀಗೆ ದೇವಾಲಯಗಳು ಶೈವ ದೇವಾಲಯಗಳೇ ಆಗಿರಲಿ ವೈಷ್ಣವ ದೇವಾಲಯಗಳೇ ಆಗಿರಲಿ, ಅಲ್ಲಿಯ ಭಿತ್ತಿಯ ಮೇಲಿನ ಚಿತ್ರಗಳು, ಕಂಬಗಳ ಮೇಲಿನ ಚಿತ್ರಗಳು, ಶೈವ ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳೇ ಆಗಿರುತ್ತವೆ ಎಂಬುದು ಕಟು ಸತ್ಯ. ಇವು ವಿಜಯನಗರ ಕಾಲದ ಶೈವ ದೇವಾಲಯಗಳಲ್ಲಿ ಸರ್ವೇ ಸಾಮಾನ್ಯ. ಈ ರೀತಿಯ ದೇವಾಲಯ ರಚನೆಯಿಂದ ಸಮಾಜದಲ್ಲಿ ಶೈವ ವೈಷ್ಣವ ಬೇಧ ಕಡಿಮೆಯಾಯಿತು. ಎರಡು ಪಂಥಗಳ ಜನರನ್ನು ಎರಡು ದೇವಾಲಯಗಳಿಗೂ ಭಕ್ತರನ್ನ ಆಕರ್ಷಿಸಿಸುವ ಉದ್ದೇಶದಿಂದ ಈ ರೀತಿಯಾದ ರಚನೆಗಳನ್ನು ಮಾಡಿದಂತೆ ಕಂಡುಬರುತ್ತದೆ. ಇದರಿಂದ ಸಮಾಜದಲ್ಲಿ ಶೈವ ವೈಷ್ಣವ ಮತಗಳಲ್ಲಿ ಸಾಮರಸ್ಯ ತುಂಬಿತು. ಇದರಿಂದ ಸಾಮ್ರಾಜ್ಯದಲ್ಲಿ ಶಾಂತಿ ನೆಲೆಸಿತು. ಈ ಮೂಲಕ ರಾಜ್ಯದಲ್ಲಿ ಪ್ರಗತಿ ಕಾಣಲು ಸಾಧ್ಯವಾಯಿತು.

ವಿಜಯನಗರದ ಅರಸರು ಕಣದ ಶಿಲೆಯಲ್ಲಿ ದೇವಾಲಯ ನಿರ್ಮಿಸಿದರು ಎಂದು ಈ ಹಿಂದೆ ನೋಡಿದ್ದೇವೆ. ಈ ಶಿಲೆಯಲ್ಲಿ ಸೂಕ್ಷ್ಮ ಕೆತ್ತನೆ ಸಾಧ್ಯವಿಲ್ಲ. ಇದರಿಂದಾಗಿ ಹೊಯ್ಸಳ ಕಾಲದ ಮೂರ್ತಿಶಿಲ್ಪದಷ್ಟು ಈ ಶಿಲ್ಪಗಳು ಸೂಕ್ಷ್ಮವಾದ ಕೆತ್ತನೆಗಳಿಂದ ಕೂಡಿಲ್ಲ. ಕಣದ ಶಿಲೆಯಲ್ಲಿ ಸೂಕ್ಷ್ಮ ಕೆತ್ತನೆಯ ಬದಲಾಗಿ ಆಕಾರದಲ್ಲಿ ದೊಡ್ಡದಾದ ಕಲಾಕೃತಿಗಳನ್ನ ಕಾಣಬಹುದು ಈ ಮುಂಚೆ ತಮಿಳು ನಾಡಿನಲ್ಲಿ ಈ ತೆರನಾದ ಬೃಹತ್ ಮೂರ್ತಿಗಳ ಪ್ರಭಾವವು ವಿಜಯನಗರದ ಅರಸರ ಮೇಲೆ ಆಗಿದೆ.

ಆದ್ದರಿಂದ ಈ ಕಾಲದ ವಾಸ್ತುಶಿಲ್ಪದಲ್ಲಿ ಗಾತ್ರ ವೈಭವ ಪ್ರೇರಿತವಾದ ಪೌರುಷತ್ವ ಅತಿಶಯ ಅಲಂಕಾರಗಳನ್ನು ಕಾಣಬಹುದು. ಭಾರತದ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಈ ಸಾಮ್ರಾಜ್ಯ ಇಡೀ ದಕ್ಷಿಣ ಭಾರತದ ಪ್ರದೇಶವನ್ನು ಆಕ್ರಮಿಸಿತ್ತು. ವಿಭಿನ್ನ ಭಾಷೆಗಳನ್ನು ಆಡುತ್ತಿದ್ದ ಜನರು ಈ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಇಲ್ಲಿ ಭಿನ್ನ ಭಿನ್ನವಾದ ಸಂಸ್ಕೃತಿಗಳ ಮಹಾ ಸಮ್ಮಿಲನವೇ ಇಲ್ಲಿ ವಾಸವಾಗಿತ್ತು. ಈ ಎಲ್ಲಾ ಬಹುಸಂಸ್ಕೃತಿಗಳನ್ನು ದೇವಾಲಯಗಳ ನಿರ್ಮಾಣದಲ್ಲಿ ಅಳವಡಿಸಿಕೊಂಡ ವಿಜಯನಗರದ ಅರಸರು ದೇವಾಲಯದ ರಚನೆಯನ್ನು ಕೈಗೊಂಡರು ಅಲ್ಲದೇ ಈ ಪ್ರದೇಶದಲ್ಲಿ ರೂಢಿಯಲ್ಲಿದ್ದ ಅನೇಕ ವಾಸ್ತುಶಿಲ್ಪ ಶೈಲಿಗಳಲ್ಲಿ ವಿಜಯನಗರದ ಕಾಲದಲ್ಲಿ ಏಕರೂಪತೆ ಸಾಧಿಸಲು ಯತ್ನಿಸಲಾಯಿತು.[೪೩] ಈ ಕಾರಣದಿಂದಾಗಿ ಇಡೀ ದಕ್ಷಿಣ ಭಾರತದಲ್ಲಿ ಎಲ್ಲಾ ಕಡೆ ದ್ರಾವಿಡ ಶೈಲಿಯಲ್ಲಿಯೇ ದೇವಾಲಯಗಳ ನಿರ್ಮಾಣವಾಯಿತು. ಈ ಮುಂದೆ ಬಾದಾಮಿ ಚಾಲುಕ್ಯರು ಪಟ್ಟದ ಕಲ್ಲು ಐಹೊಳೆಗಳಲ್ಲಿ ನಾಗರ ದ್ರಾವಿಡ ಶೈಲಿಗಳಲ್ಲಿ ದೇವಾಲಯ ನಿರ್ಮಿಸಿದ್ದರು.[೪೪] ಅಲ್ಲದೇ ವೇಸರ ಶೈಲಿಯಲ್ಲಿಯೂ ದೇವಾಲಯ ನಿರ್ಮಿಸಿದ್ದರು. ಮುಂದೆ ಬಂದ ಕಲ್ಯಾಣ ಚಾಲುಕ್ಯರು ಪ್ರಧಾನವಾಗಿ ವೇಸರ ಶೈಲಿಯನ್ನೇ ಬಳಕೆಗೆ ತಂದರು.

ಹತ್ತು ಹನ್ನೊಂದನೇ ಶತಮಾನದಲ್ಲಿ ಹೊಯ್ಸಳರು ಕೂಡ ಹೆಚ್ಚಾಗಿ ವೇಸರ ಶೈಲಿಯಲ್ಲಿಯೇ ದೇವಾಲಯಗಳನ್ನು ನಿರ್ಮಿಸಿದರು. ಆದರೆ ಅಲ್ಲಲ್ಲಿ ದ್ರಾವಿಡ ಶೈಲಿಯಲ್ಲೂ ದೇವಾಲಯಗಳನ್ನು ಹೊಯ್ಸಳರು ನಿರ್ಮಿಸಿದ ಉದಾಹರಣೆಗಳಿವೆ. ಹೊಯ್ಸಳರು ನೊಳಂಬರು ಚೋಳರು ಕರ್ನಾಟಕ ಪ್ರದೇಶದಲ್ಲಿ ದ್ರಾವಿಡ ಶೈಲಿಯ ಅನೇಕ ದೇವಾಲಯಗಳನ್ನು ಬಸದಿಗಳನ್ನು ನಿರ್ಮಾಣ ಮಾಡಿದರು. ಈ ದೇವಾಲಯಗಳನ್ನು ಮುಖ್ಯವಾಗಿ ಕರ್ನಾಟಕದ ಕೋಲಾರ, ತಲಕಾಡು, ಆದವಾನಿ, ಹೇಮಾವತಿ ಮುಂತಾದ ಸ್ಥಳಗಳಲ್ಲಿ ದ್ರಾವಿಡ ಶೈಲಿಯಲ್ಲಿ ದೇವಾಲಯಗಳನ್ನು ಕಟ್ಟಲಾಯಿತು. ಅವನಿಲಕ್ಷ್ಮಣಮೇಶ್ವರ ರಾಮೇಶ್ವರ ಮುಂತಾರ ದೇವಾಲಯಗಳು ಕಂಬದಳ್ಳಿಯ ಪಂಚಕೂಟ ಬಸೀದಿ ಕೋಲಾರದ ಕೋಲಾರಮ್ಮನ ದೇವಾಲಯ ಮತ್ತು ಸೋಮನಾಥ ದೇವಾಲಯ ದ್ರಾವಿಡ ಶೈಲಿಯಲ್ಲಿವೆ. ಅವನೀಯ ಲಕ್ಷ್ಮಮೇಶ್ವರ ರಾಮೇಶ್ವರ ಈ ದೇವಾಲಯಗಳು ನೊಳಂಬರ ಕಾಲದ ಕಟ್ಟಡಗಳು. ಕೋಲಾರದ ಸೋಮೇಶ್ವರ ದೇವಾಲಯದ ಗರ್ಭಗೃಹ, ಶುಕನಾಶಿ, ನವರಂಗ, ಮುಖ-ಮಂಟಪಗಳನ್ನಲ್ಲದೇ ಪ್ರಕಾರವನ್ನು ಹೊಂದಿದ್ದು, ಪ್ರವೇಶದ್ವಾರದ ಮೂಲಕ ಪ್ರಕಾರವನ್ನು ಪ್ರವೇಶಿಸಬೇಕು. ಪ್ರವೇಶದ್ವಾರದ ಮೇಲೆ ಇಟ್ಟಿಗೆಗಳಿಂದ ಕಟ್ಟಿದ ಗೋಪುರವಿದೆ. ಈ ದೇವಾಲಯದಲ್ಲಿ ಹೊಯ್ಸಳ ಕಾಲದಲ್ಲಿ ನಿರ್ಮಿಸಿದ ಭಾಗವಿದೆ. ಹೊಯ್ಸಳರ ಅರಸನಾದ ವೀರ ಸೋಮೇಶ್ವರನು ತಮಿಳು ದೇವಾಲಯಗಳಿಂದ ಹೆಚ್ಚು ಪ್ರಭಾವಿತ ಆಗಿರುವ ಸಾಧ್ಯತೆ ಇದೆ. ಅಂದರೆ ವಿಜಯನಗರಕ್ಕಿಂತ ಮುಂಚಿನ ಅರಸರು ಅನೇಕಾನೇಕ ಅರಸರು ದೇವಾಲಯಗಳನ್ನು ಹೀಗೆ ಬೇರೆ ಬೇರೆ ಶೈಲಿಯಲ್ಲಿ ದೇವಾಲಯ ನಿರ್ಮಾಣ ಮಾಡಿದರು.

ಆದರೆ ವಿಜಯನಗರದ ಅರಸರು ಮುಖ್ಯವಾಗಿ ದ್ರಾವಿಡ ಶೈಲಿಯಲ್ಲಿ ದೇವಾಲಯಗಳ ರಚನೆಯನ್ನು ಕೈಗೊಂಡರು. ಆರಂಭದ ಕೆಲವು ದೇವಾಲಯಗಳು ಕದಂಬನಾಗರ ಶೈಲಿಯಲ್ಲಿ ರಚನೆಗೊಂಡುದನ್ನು ಬಿಟ್ಟರೆ ಅನಂತರದ ಬಹುತೇಕ ದೇವಾಲಯಗಳು ದ್ರಾವಿಡ ಶೈಲಿಯಲ್ಲಿಯೇ ರಚನೆಗೊಂಡಿವೆ.

## ವಿಜಯನಗರ ವಾಸ್ತುಶೈಲಿಯ ಭಾಗಗಳು

ನಾವು ದೇವಾಲಯಗಳನ್ನು ಅಭ್ಯಸಿಸುವಾಗ ಮುಖ್ಯವಾಗಿ ವಾಸ್ತುಶಿಲ್ಪ ಗ್ರಂಥಗಳನ್ನು ಆಧರಿಸಿ ಎರಡು ಮುಖ್ಯ ಸೂತ್ರಗಳ್ನು ಅಳವಡಿಸಲಾಗುತ್ತದೆ. ಅವೆಂದರೆ ಮಾನಸ ಸೂತ್ರ ಮತ್ತು ವಿನ್ಯಾಸ ಸೂತ್ರಗಳು. ಇವು ದೇವಾಲಯದ ರಚನೆಯ ಲಂಬರೇಖೆ ಮತ್ತು ಅಕ್ಷರೇಖೆಗಳಾಗಿದ್ದು. ದೇವಾಲಯದ ಭಾಗದ ಅಳತೆಯ ಪ್ರಮಾಣವನ್ನು ಅದರ ಹೊರಚಾಚುವಿಕೆಯನ್ನು ಸೂಚಿಸುತ್ತವೆ. ಇದಲ್ಲದೆ ದೇವಾಲಯದ ರಚನಾ ಕ್ರಮವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಅವೆಂದರೆ ಊರ್ಧ್ವಮುಖ ತ್ರಿರ್ಯಜ್ಞಮುಖ ಕ್ರಮಗಳೆಂದು ಹೆಸರಿಸಲಾಗಿರುವುದು.

**ಊರ್ಧ್ವಮುಖ :** ದೇವಾಲಯದ ಹೊರಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ರಚನೆಗೊಂಡಿರುವ ಕ್ರಮವನ್ನು ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೂಪದಲ್ಲಿ ಕಟ್ಟುವ ಕ್ರಮವನ್ನು ಊರ್ಧ್ವಮುಖ ಕ್ರಮವೆಂದು ಕರೆಯಲಾಗುತ್ತದೆ. ಇದು ಪ್ರಮುಖವಾಗಿ ಆರು ಭಾಗಗಳನ್ನು ಒಳಗೊಂಡಿರುತ್ತದೆ. ಆದ್ದರಿಂದ ಇದನ್ನು ಷಡ್ವರ್ಗ ಕ್ರಮವೆಂತಲೂ ಕರೆಯಲಾಗುತ್ತದೆ. ಅವುಗಳೆಂದರೆ ಅಧಿಷ್ಠಾನ, ಬಿತ್ತಿ, ಪ್ರಸ್ತಾರ, ಗ್ರೀವ, ಶಿಖರ, ಸ್ತೂಪಿ ಹೀಗೆ ಆರು ಭಾಗಗಳಿಂದ ಕೂಡಿರುವ ದೇವಾಲಯಗಳಿಗೆ ಷಡ್ವರ್ಗ ದೇವಾಲಯಗಳು ಎಂದು ಹೆಸರು.

**ತ್ರಿರ್ಯಜ್ಞಖ :** ಒಳಭಾಗದಲ್ಲಿನ ಗರ್ಭಗೃಹದಿಂದ ಹಿಡಿದು ಸುಕನಾಸಿ, ನವರಂಗ, ಮಹಾರಂಗ ಮಂಟಪಗಳನ್ನೆಲ್ಲ ದೇವಾಲಯ ಪರಿಭಾಷೆಯಲ್ಲಿ ತ್ರಿರ್ಯಜ್ಞಮುಖ ಎಂದು ಕರೆಯುತ್ತಾರೆ. ಗರ್ಭಗೃಹಕ್ಕೆ ಮುಂದುಗಡೆ ಅದಕ್ಕೆ ಹೊಂದಿಕೊಂಡಂತ್ತಿರುವ ಭಾಗಕ್ಕೆ ಅಂತರಾಳ ಎಂದು ಕರೆಯಲಾಗುತ್ತದೆ. ಇದು ಸಾಮಾನ್ಯವಾಗಿ ಎಲ್ಲಾ ವಿಜಯನಗರ ದೇವಾಲಯಗಳಲ್ಲೂ ಆಯಾತಾಕಾರವಾಗಿ ಕಂಡುಬರುತ್ತದೆ.

**ಗರ್ಭಗೃಹ :** ಗರ್ಭಗೃಹವು ದೇವಾಲಯದ ಮುಖ್ಯವಾದ ಭಾಗ. ದೇವಾಲಯವನ್ನು ಯಾವ ದೇವರ ಹೆಸರಿನಲ್ಲಿ ನಿರ್ಮಿಸಿರುತ್ತಾರೋ ಅದರ ಬಿಂಬಿವು ಇಲ್ಲಿ ಪ್ರತಿಷ್ಠಾಪಿತವಾಗಿರುತ್ತದೆ. ಇದಕ್ಕೆ ಗರ್ಭಗೃಹ ಪ್ರಸಾದ ಎಂದು ಕರೆಯಲಾಗುತ್ತದೆ.[೪೫] ಸುಪ್ರಭೇದಾಗಮವು ಇದನ್ನು ದೇವ(ತಾ) ಮಂಟಪ ಎಂದಿದೆ.[೪೬] ಆಗಮ ಶಾಸ್ತ್ರ ಗ್ರಂಥಗಳಲ್ಲಿ ಗರ್ಭಗುಡಿಯನ್ನೇ ಆಲಯವೆಂದು ಕರೆಯಲಾಗಿದೆ. ಗರ್ಭಗುಡಿಯೇ ದೇಹ. ಬಿಂಬವೇ ಅದರ ಜೀವ ಎಂದು ಸ್ಪಷ್ಟಪಡಿಸಿದೆ. ಗರ್ಭಗುಡಿಗೆ ಉತ್ತರ ಭಾರತದಲ್ಲಿ ''ದೇವುಲ್'' ಎಂದು ಹೆಸರಿದೆ. ಕನ್ನಡದ 'ದೇವಳಿ' ಎಂಬುದು ಇದಕ್ಕೆ ಸರಿಯಾದುದು. ದೇವಾಲಯಗಳನ್ನು ನಿರ್ಮಿಸುವಾಗ

ಈ ಗರ್ಭಗೃಹವನ್ನೆ ಮೊದಲಿಗೆ ಕಟ್ಟಬೇಕೆಂಬ ನಿಯಮವಿದೆ. ಈ ಗರ್ಭಗೃಹವನ್ನು ನಿರ್ಮಿಸುವಾಗ "ಗರ್ಭದಾನ" ಅಥವಾ "ಗರ್ಭನ್ಯಾಸ" ಎಂಬ ವಿಧಿಯನ್ನು ನಡೆಸುವ ವಾಡಿಕೆ ಇದೆ. ತಾಮ್ರದ ಕಲಶವನ್ನು ವಿದ್ಯುಕ್ತವಾಗಿ ಸಂಸ್ಕರಿಸಿ ಅದರಲ್ಲಿ ನವರತ್ನಗಳನ್ನೂ ಹಲವು ಧಾತುಗಳನ್ನು ಹಲವು ಔಷದ ಮೂಲಿಕೆಗಳನ್ನೂ ತಾಮ್ರದ ಕಲಶದಲ್ಲಿರಿಸಿ ಗರ್ಭಗುಡಿಯ ಅಡಿಯಲ್ಲಿ ಭೂಮಿಯೊಳಗೆ ಹುದುಗಿಸುತ್ತಾರೆ. ಇದಕ್ಕೆ "ಗರ್ಭ" ಎಂದು ಆಗಮಶಾಸ್ತ್ರಗಳು ಕರೆದಿವೆ. ಕಲಶ ಮೇಲೆ, ಶಿಲೆಯ ಪಟ್ಟಿಕೆಯನ್ನು ಹಾಕುತ್ತಾರೆ. ಈ ಶಿಲಾಪಟ್ಟಿಕೆಯ ಮೇಲೆ ಬಿಂಬವನ್ನು ಸ್ಥಾಪಿಸುತ್ತಾರೆ. ಕಲಶವು ಗರ್ಭವಾದರೆ ಬಿಂಬ ಜೀವ ಇದಕ್ಕಾಗಿ ಕಟ್ಟಿದ ಗುಡಿ ಗರ್ಭಗುಡಿ, ಅಂದರೆ ದೇಹ, ಇದೇ ಗರ್ಭಗೃಹದ ತಾತ್ಪರ್ಯ.[೪೨] ವಿಷ್ಣು ತಿಲಕವೆಂಬ ಆಗಮ ಗ್ರಂಥಗಳ ಪ್ರಕಾರ, ಶಿಲೆಯ ಗರ್ಭಗೃಹ ಉತ್ತಮವಾದುದು. ಇಟ್ಟಿಗೆ ಮಣ್ಣಿನದು ಅಧಮಾಧಮ ಎಂದು ಹೇಳಿದೆ. ಪ್ರಾಯೋಗಿಕವಾಗಿ ಇದು ಸರಿಯಾಗಿದೆ. ಶಿಲೆಯಲ್ಲಿ ನಿರ್ಮಿಸಿದ ದೇವಾಲಯವು ಹೆಚ್ಚು ಬಾಳಿಕೆ ಬರುತ್ತದೆ. ಆ ದೇವಾಲಯ ಸಾವಿರಾರು ವರ್ಷ ಹಳೆಯದಾದರೂ ಇಡೀ ಭಾರತದ ತುಂಬೆಲ್ಲ ಕಾಣಸಿಗುತ್ತವೆ. ಆದರೆ ಮಣ್ಣಿನಲ್ಲಿ ನಿರ್ಮಿಸಿದ ದೇವಾಲಯವು ಇಂದು ಯಾವುದು ಲಭ್ಯವಿಲ್ಲ ಏಕೆಂದರೆ, ಮಳೆಗಾಳಿಯಿಂದ ಇವು ನಶಿಸುವುವು. ಆದ್ದರಿಂದ ಅವು ಅದಮಾಧಮವಾದವುಗಳು ಎಂದು ಶಾಸ್ತ್ರಗ್ರಂಥಗಳು ಹೇಳಿರುವುದರಲ್ಲಿ ಸತ್ಯಾಂಶವಿರುತ್ತದೆ.

ಶೈವ ದೇವಾಲಯಗಳು ವಿಜಯನಗರ ಕಾಲದಲ್ಲಿ ಹೆಚ್ಚಾಗಿ ಚೌಕಾರವಾಗಿವೆ. ಬೇರೆ ದೇವಾಲಯಗಳು ಅಂದರೆ ಬಸದಿಗಳು ಸಪ್ತಮಾತೃಕೆಯರ ದೇವಾಲಯಗಳು, ಅನಂತಶಯನ ಮೂರ್ತಿಗಳಿರುವ ದೇವಾಲಯಗಳು ಆಯತಾಕಾರವಾಗಿರುತ್ತವೆ. ಶಿವಾಲಯಗಳು ಮಾತ್ರ ಚೌಕಾಕಾರವನ್ನು ಹೊಂದಿರುತ್ತವೆ. ಇದಕ್ಕೆ ಸುಖನಾಸಿ ಎಂದೂ ಕರೆಯುತ್ತಾರೆ. ಕರ್ನಾಟಕದ ಆರಂಭ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳಲ್ಲಿ ಗರ್ಭಗೃಹ ಮತ್ತು ಅರ್ಧ ಮಂಟಪ ಮಾತ್ರ ಕಂಡುಬರುತ್ತವೆ. ಈ ಅರ್ಧ ಮಂಟಪವು ದೇವಾಲಯದ ಮುಂದೆ ಬರುವ ಭಾಗವಾದ್ದರಿಂದ ಇದಕ್ಕೆ ಮುಖ-ಮಂಟಪವೆಂತಲೂ ಕರೆಯುತ್ತಾರೆ. ಆದರೆ ಬಾದಾಮಿ ಚಾಲುಕ್ಯ ಕಲ್ಯಾಣ ಚಾಲುಕ್ಯ ಹೊಯ್ಸಳ ವಿಜಯನಗರ ಕಾಲದಲ್ಲಿ. ದೇವಾಲಯಕ್ಕೆ ಇತರೆ ಭಾಗಗಳನ್ನು ಸೇರಿಸಿದಾಗ ಇದು ಅರ್ದ ಮಂಟಪವಾಯಿತು. ಇಲ್ಲಿ ನಿಂತು ಭಕ್ತಾದಿಗಳು ಗರ್ಭಗುಡಿಯೊಳಗೆ ನಡೆಯುವ ಪೂಜಾವಿಧಿಗಳನ್ನು ನೋಡಬಹುದು. ಗುಡಿಯು ಪ್ರಸಿದ್ಧಿ ಪಡೆದಂತೆ ಭಕ್ತರ ಸಂಖ್ಯೆ ಹೆಚ್ಚಿದಂತೆ ಈ ಮುಖಮಂಟಪ ಸಾಲದೇ ಅದಕ್ಕೆ ಸೇರಿದ ಭಾಗವೇ ಮಹಾಮಂಟಪವೊಂದು ರಚನೆಯಾಯಿತು. ಇದರಿಂದ ಮುಖ-ಮಂಟಪ ನಡುವಣ ಒಂದು ಕೋಣೆಯಾಗಿ ಅಂತರಾಳ ಎಂದೆನಿಸಿ ಕೊಂಡಿತು. ಗರ್ಭಗೃಹವನ್ನು ನವರಂಗವನ್ನು ಸೇರಿಸುವ ಒಂದು ಭಾಗ ಅಂತರಾಳವಾಯಿತು.

**ಅಂತರಾಳ :** ಅಂತರಾಳವು ಆಯತಾಕಾರದ ಭಾಗವಾಗಿದೆ. ದೇವಸ್ಥಾನದ ಗರ್ಭಗೃಹದ ಮುಂದೆ ಇದನ್ನು ನಿರ್ಮಿಸಲಾಗಿದೆ. ಗರ್ಭಗೃಹ ಮತ್ತು ಅರ್ಧಮಂಟಪವನ್ನು ಸೇರಿಸುವಂತೆ ಅಂತರಾಳದ ರಚನೆ

ಕಾಣಬಹುದು. ಮುಂದೆ ಅರ್ಧಮಂಟಪವಿಲ್ಲದೆಯೇ ಇದ್ದಾಗ ಅಂತರಾಳವು ನೇರವಾಗಿ ನವರಂಗಕ್ಕೆ ಹೊಂದಿಕೊಳ್ಳುತ್ತದೆ. ಇದಕ್ಕೆ ಸುಖನಾಸಿ ಎಂಬ ಮತ್ತೊಂದು ಹೆಸರೂ ಇದೆ. ಮೂಲ ದೇವರಿಗೆ ಸಂಬಂಧಿಸಿದ ಪರಿವಾರ ದೇವತೆಗಳನ್ನು ಅಂತರಾಳದಲ್ಲಿ ಪ್ರತಿಷ್ಠಾಪಿಸಲಾಗಿರುತ್ತದೆ. ಬಹುತೇಕವಾಗಿ ದೇವಾಲಯಗಳಲ್ಲಿ ಅಂತರಾಳ ಮತ್ತು ಅರ್ಧಮಂಟಪಗಳಲ್ಲಿ ಯಾವುದಾದರೊಂದು ಭಾಗವು ಗರ್ಭಗೃಹದ ಮುಂದೆ ರಚನೆಗೊಂಡಿರುತ್ತದೆ. ಆದರೆ ವಿಜಯನಗರ ಕಾಲದ ಕೆಲವು ದೇವಸ್ಥಾನಗಳು ಅಂತರಾಳ ಮತ್ತು ಮುಖಮಂಟಪ ಎರಡನ್ನೂ ಹೊಂದಿವೆ. ಹಂಪೆಯ ವಿರೂಪಾಕ್ಷ, ನಾಗಮಂಗಲದ ವೀರಭದ್ರ ಮುಂತಾದ ದೇವಸ್ಥಾನಗಳಲ್ಲಿ ಅಂತರಾಳ ಎರಡೂ ಅರ್ಧಮಂಟಪ ಇವೆ.

**ನವರಂಗ :** ಪ್ರಾಚೀನ ಕಾಲದಲ್ಲಿ ಗರ್ಭಗೃಹ ಮತ್ತು ಮುಖ-ಮಂಟಪ ಈ ಎರಡು ಭಾಗಗಳು ದೇವಾಲಯದ ತ್ರಿರ್ಯಜ್ಞಖ ಕ್ರಮದ ಭಾಗಗಳಾಗಿದ್ದವು. ಕಾಲನಂತರದಲ್ಲಿ ಭಕ್ತರ ಸಂಖ್ಯೆ ಹೆಚ್ಚಾಗಿ ದೇವಾಲಯಗಳು ವಿಸ್ತಾರವಾಗಿ ಬೆಳೆಯತೊಡಗಿದವು. ದೇವಾಲಯಗಳು ಬೆಳೆದಂತೆ ದೇವಾಲಯದ ಭಾಗಗಳು ಬೆಳವಣಿಗೆ ಹೊಂದಿದವು. ಭಕ್ತರ ಸಂಖ್ಯೆ ಹೆಚ್ಚಾದ್ದರಿಂದ ಮುಖ-ಮಂಟಪ ಸಾಲದೇ ಹೋದಾಗ ಅದಕ್ಕೆ ಮುಂದುಗಡೆ ಹೊಂದಿಕೊಂಡಂತೆ ರಂಗಮಂಟಪ ಅಥವಾ ನವರಂಗ ನಿರ್ಮಾಣಗೊಂಡಿತು.[೪೮] ಇದು ವಿಶಾಲವಾಗಿದ್ದು ನೂರಾರು ಭಕ್ತಾದಿಗಳು ನಿಲ್ಲುವಂತೆ ರಚನೆಗೊಂಡಿತು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಇದು ಗೋಡೆ ಇಲ್ಲದೇ ತೆರೆದ ಕೆಲವೊಂದು ದೇವಾಲಯಗಳಲ್ಲಿ ಮುಚ್ಚಿದ ಮಂಟಪವಾಗಿರುತ್ತಿತ್ತು.[೪೯] ಸಾಮಾನ್ಯವಾಗಿ ಇದರ ಮಧ್ಯದಲ್ಲಿ ನಾಲ್ಕು ಕಂಬಗಳು ಮತ್ತು ಹೊರ ಅಂಚಿನಲ್ಲಿ ಗೋಡೆಯಲ್ಲಿ ಅಂಟಿಕೊಂಡು ಹನ್ನೆರಡು ಕಂಬಗಳು ಇರುತ್ತಿದ್ದವು.

**ಮಹಾ-ರಂಗಮಂಟಪ :** ದೇವಾಲಯಗಳು ಹೆಚ್ಚು ಸಾಂಘಿಕವಾಗುತ್ತಿದ್ದರಿಂದ ವಿಜಯನಗರ ಕಾಲದಲ್ಲಿ ದೇವಾಲಯವು ಸಮಾಜದ ಒಂದು ಅವಿಭಾಜ್ಯ ಅಂಗವಾಗಿತ್ತು. ಸಮಾಜದ ಎಲ್ಲಾ ಕಾರ್ಯ ಚಟುವಟಿಕೆಗಳಿಗೂ ದೇವಾಲಯವು ಕೇಂದ್ರ ಸ್ಥಾನವಾಗಿ ಪರಿಣಮಿಸಿತು. ಇದರಿಂದಾಗಿ ದೇವಾಲಯವು ಒಂದು ಮನೋರಂಜನೆ ಕೇಂದ್ರವಾಗಿಯೂ ಬೆಳವಣಿಗೆ ಹೊಂದಿತು. ದೇವಾಲಯವು ಸಭೆ-ಸಮಾರಂಭಗಳ ಸ್ಥಾನವಾಯಿತು. ನ್ಯಾಯ ತಿರ್ಮಾನದ ಕೇಂದ್ರವು ಆಯಿತು. ಈ ಕಾರಣಕ್ಕೆ ಗರ್ಭಗೃಹ ನವರಂಗಗಳನ್ನೊಳಗೊಂಡ ದೇವಾಲಯವು ಸಾಲದೇ ಹೋಯಿತು. ವಿಜಯನಗರ ಕಾಲದಲ್ಲಿ ಆಗಲೇ ಕಾರ್ಯಚಟುವಟಿಕೆಯು ಹೆಚ್ಚಿದ್ದರಿಂದ ನವರಂಗವು ಸಾಲದಾಯಿತು. ಇದರಿಂದ ನವರಂಗದ ಮುಂದುಗಡೆ ತೆರೆದ ಮಹಾಮಂಟಪವು ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿತು. ಇದು ವಿಜಯನಗರ ಕಾಲದಲ್ಲಿ ನಿರ್ಮಾಣವಾದ ವಾಸ್ತು ರಚನೆಯಾಗಿದ್ದು, ಮಹಾ ಮಂಟಪವೂ ನವರಂಗದ ಮುಂದುಗಡೆ ತೆರೆದ ರಚನೆಯಾಗಿದೆ. ಇದರಿಂದ ಮನೋರಂಜನೆಗೆ ಸಭೆ, ಸಮಾರಂಭಗಳಿಗೆ ಮತ್ತು ನ್ಯಾಯ ತೀರ್ಮಾನಗಳಿಗೆ ಈ ಮಹಾರಂಗ ಮಂಟಪವು ಹೆಚ್ಚಾಗಿ ಬಳಕೆಯಾಗತೊಡಗಿತು.

ಆಗ ಈ ಕಾಲದಲ್ಲಿ ರಚನೆಗೊಂಡ ಗೋಪುರಗಳಿಗೆ ರಾಯಗೋಪುರಗಳೆಂದು ಹೆಸರು. ಇದು ಬಹಳಷ್ಟು ದೊಡ್ಡದಾಗಿಯೂ ಎತ್ತರವಾಗಿಯು ಇರುತ್ತದೆ. ದ್ವಾರಬಾಗಿಲು ಬಹಳಷ್ಟು ದೊಡ್ಡದಾಗಿರುತ್ತದೆ. ದೇವಾಲಯದ ರಥವು ದ್ವಾರ ಬಾಗಿಲ ಒಳಗಿಂದ ಹಾದು ಹೋಗುವಷ್ಟು ಎತ್ತರವಾಗಿರುತ್ತದೆ. ಸಾಮಾನ್ಯವಾಗಿ ಆನೆ ಹಾದು ಹೋಗಬಹುದಾದಷ್ಟು ಎತ್ತರವನ್ನು ದ್ವಾರಬಾಗಿಲು ಹೊಂದಿರುತ್ತದೆ.

ವಿಜಯನಗರ ಕಾಲದಲ್ಲಿ ದೇವಾಲಯದ ಸುತ್ತಲೂ ಪ್ರಾಕಾರ ನಿರ್ಮಾಣ ಕಡ್ಡಾಯವಾಗಿದ್ದಂತೆ ತೋರುತ್ತದೆ. ಆ ಕಾಲದ ಶೈವ-ವೈಷ್ಣವ ಮತ್ತು ಜೈನ ದೇವಾಲಯಗಳು ಈ ಪ್ರದೇಶದ ರಚನೆಯನ್ನು ಕಾಣಬಹುದು. ಅಲ್ಲದೇ ಈ ಪ್ರಾಕಾರದೊಳಗೆ ಉಪಗುಡಿಗಳನ್ನು ಸಹ ನಿರ್ಮಿಸಲಾಯಿತು. ಹಂಪೆಯ ಹೃದಯಭಾಗದಲ್ಲಿರುವ ವಿರೂಪಾಕ್ಷ ದೇವಾಲಯದ ಸುತ್ತ ಪ್ರಾಕಾರವನ್ನು ಕಾಣಬಹುದು.(ಪರಿವಾರ ದೇವತೆಗಳ) ಅಮೃತಮಂಟಪ, ಉತ್ಸವಮಂಟಪ, ಕಲ್ಯಾಣಮಂಟಪ ಮುಂತಾದ ರಚನೆಗಳನ್ನು ಪ್ರಾಕಾರದ ಒಳಗೆ ನಿರ್ಮಿಸುವ ಪದ್ಧತಿ ಈ ಕಾಲದಲ್ಲಿ ಬೆಳೆದುಬಂತು. ಈ ರೀತಿಯ ರಚನೆಗೆ "ಮಾಲಿಕಾ ರಚನೆ" ಎಂದು ಹೇಳಬಹುದು.

**ಪ್ರಾಕಾರ :** ದೇವಾಲಯದ ಎಲ್ಲಾ ಭಾಗಗಳನ್ನು ಒಳಗೊಂಡಂತೆ ಪ್ರಾಕಾರವನ್ನು ರಚಿಸಲಾಗುತ್ತದೆ. ಕೋಟೆಯ ಹೊರಗೋಡೆಯಂತೆ ಇದರ ರಚನೆಯನ್ನು ಕಾಣಬಹುದು. ಆಲಯ ರಕ್ಷಣೆ ಮತ್ತು ಶೋಭೆಯ ದೃಷ್ಟಿಯಿಂದ ಈ ಪ್ರಾಕಾರವನ್ನು ನಿರ್ಮಿಸಲಾಯಿತು.[೫೦] ಈ ಪ್ರಾಕಾರದ ಕಲ್ಪನೆ ಅಷ್ಟೇನೂ ಪ್ರಾಚೀನವಾದದಲ್ಲ. ಪ್ರಾಕಾರವು ಹೆಚ್ಚಾಗಿ ದಕ್ಷಿಣ ಭಾರತದಲ್ಲಿ ಕಂಡುಬರುತ್ತದೆ.[೫೧] ಶಾಸ್ತ್ರ ಗ್ರಂಥಗಳಲ್ಲಿ ಒಂದರೊಳಗೆ ಒಂದರಂತೆ ಒಟ್ಟು ಮೂವತ್ತೆರಡು ಪ್ರಾಕಾರಗಳನ್ನು ಹೆಸರಿಸಿದೆ. ಈ ಪ್ರಾಕಾರಕ್ಕೆ ಅಭರಣ ಸಾಲ, ನಿಹಾರ ಕೋಶ ಎಂಬ ಹೆಸರುಗಳಿಂದಲೂ ಕರೆಯಲಾಗುತ್ತದೆ.[೫೨] ಸಾಮಾನ್ಯವಾಗಿ ದಕ್ಷಿಣ ಭಾರತದಲ್ಲಿ ಐದು ಅಥವಾ ಏಳು ಪ್ರಾಕಾರಗಳು ಕಂಡುಬರುತ್ತವೆ. ತಮಿಳುನಾಡಿನ ಶ್ರೀರಂಗಂನಲ್ಲಿನ ರಂಗನಾಥ ದೇವಾಲಯವು ಒಟ್ಟು ಏಳು ಪ್ರಾಕಾರವನ್ನು ಹೊಂದಿದ್ದು. ಇದು ಇಡಿ ಊರನ್ನೆ ಒಳಗೊಂಡಿದೆ. ಗರ್ಭಗುಡಿಯ ಹತ್ತಿರದಲ್ಲಿನ ಪ್ರಾಕಾರವನ್ನು'ಅಂತರ್ವಡಪ' ತೀರ ಹೊರಗಿನ ಪ್ರಥಮವಾಗಿ ಕಾಣಸಿಗುವ ಪ್ರಾಕಾರವನ್ನು "ಮರ್ಯಾದಾಹರ" ಎಂದು ಕರೆಯುವ ವಾಡಿಕೆ ಇದೆ.[೫೩] ಆದರೆ ಕರ್ನಾಟಕದಲ್ಲಿ ಕಾಣಸಿಗುವ ದೇವಾಲಯಗಳಲ್ಲಿ ಒಂದೇ ಪ್ರಾಕಾರವಿರುವ ದೇವಾಲಯಗಳೇ ಹೆಚ್ಚು. ಇಂತಹ ಪ್ರಾಕಾರವನ್ನು ಏಕ ಸಾಲ ಎಂದು ಕರೆದಿರುತ್ತಾರೆ.[೫೪] ದೇವಾಲಯದ ಬಿತ್ತಿಯಂತೆ ಪ್ರಾಕಾರದ ಭಿತ್ತಿಯು ಕೂಡ ದೇವ ಕೋಷ್ಠಗ ಉಬ್ಬುಶಿಲ್ಪ ಇತ್ಯಾದಿಗಳಿಂದ ಅಲಂಕರಿಸಲಾಗಿರುತ್ತದೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ, ಹಂಪೆಯ ವಿರೂಪಾಕ್ಷ ದೇವಾಲಯ, ಬೇಲೂರಿನ ಚನ್ನಕೇಶವ ದೇವಾಲಯ ಇಂತಹ ಅಲಂಕೃತ ಪ್ರಾಕಾರಗಳನ್ನು ಹೊಂದಿರುವ ದೇವಾಲಯಗಳಾಗಿವೆ.

ಪ್ರಾಕಾರಗಳಿಗೆ ಹೊಂದಿಕೊಂಡಂತೆ ಮೇಲ್ಭಾಗದಲ್ಲಿ ಸುತ್ತಲೂ ಕೋಟೆಯಂತಹ ಅಲಂಕಾರವು ಇರುವುದು ಇದಕ್ಕೆ 'ಚತ್ತರ ಶಿರ್ಷೆ' ಎಂದು ಹೆಸರು ಹಂಪೆಯ ಹಜಾರ ರಾಮಸ್ವಾಮಿ ದೇವಾಲಯದಲ್ಲಿ ಈ ತೆರನಾದ ರಚನೆ ಕಂಡುಬರುತ್ತದೆ.[೫೫] ಪ್ರಾಕಾರದ ಗೋಡೆಗಳಿಗೆ ಹೊಂದಿಕೊಂಡಂತೆ ಸಾಲು ಮಂಟಪಗಳನ್ನು ಅಳವಡಿಸಿರುತ್ತಾರೆ. ಹಲವು ದೇವತೆಗಳಿಗೆ ಇವು ಸನ್ನಿಧಿಗಳು ಆಗಿರುತ್ತವೆ. ಇನ್ನೂ ಕೆಲವು ಸಾಮಾನು ಸರಂಜಾಮುಗಳನ್ನು ಇರಿಸುವ ಕೋಣೆಗಳು ಅಡುಗೆಯ ಶಾಲೆ, ಯಾತ್ರಿಕರ ನೆಲೆ ಮುಂತಾದ ಉಪಯೋಗಗಳಿಗೆ ಪ್ರಾಕಾರದ ಈ ಕೋಣೆಗಳು ಸ್ಥಳವನ್ನು ಒದಗಿಸುತ್ತವೆ. ಶಾಸ್ತ್ರಗ್ರಂಥಗಳಲ್ಲಿ ಪ್ರತಿಯೊಂದು ಪ್ರಾಕಾರಕ್ಕೂ ನಾಲ್ಕು ಕಡೆಯಲ್ಲಿ ಬಾಗಿಲುಗಳು ಇರಬೇಕೆಂದು ಹೇಳಿದೆ. ಅದೇ ತೆರನಾಗಿ ಪ್ರತಿಯೊಂದು ಬಾಗಿಲ ಮೇಲೂ ಗೋಪುರವಿರಬೇಕೆಂಬ ವಿಧಿಯಿದೆ. ಆದರೆ ದೊಡ್ಡ ದೊಡ್ಡ ಗುಡಿಗಳಲ್ಲಿ ನಾಲ್ಕು ಕಡೆ ಬಾಗಿಲುಗಳು ಇವೆ. ಗರ್ಭಗುಡಿಯ ಮುಂದಿರುವ ಬಾಗಿಲು "ಮಹಾದ್ವಾರ ಎನಿಸಿಕೊಳ್ಳುತ್ತದೆ" ಹತ್ತನೇ ಶತಮಾನದ ಹೊತ್ತಿಗೆ ತಲೆಬಾಗಿಲ ಮೇಲೆ ಗೋಪುರವನ್ನು ಕಟ್ಟುವ ಪದ್ಧತಿ ಬಳಕೆಗೆ ಬಂದಿತು. ವಿಜಯನಗರ ಕಾಲದಲ್ಲಿ ದ್ವಾರ ಗೋಪುರದ ಎತ್ತರ ಹೆಚ್ಚಾಯಿತು. ತಮಿಳುನಾಡಿನ ಚೋಳರ ಪ್ರಭಾವವು ವಿಜಯನಗರದ ದೇವಾಲಯಗಳ ಮೇಲೆ ಆಗಿರುವಂತೆ ಈ ಗೋಪುರದ ಮೇಲೂ ಆಗಿರಬಹುದು.

ಎತ್ತಿನ ಕೊಂಬುಗಳಂತಿರುವ ಈ ನಾಸಿಗಳ ನಡುವೆ ಬೆಸ ಸಂಖ್ಯೆಯಲ್ಲಿ ಕಳಶಗಳಿರುತ್ತವೆ. ಇವುಗಳನ್ನು ಗೋಪುರ ಶಿಖರ ಎನ್ನುತ್ತಾರೆ. ಗೋಪುರಗಳನ್ನು ಇಟ್ಟಿಗೆ-ಗಾರೆಗಳಿಂದ ಕಟ್ಟಿ ಗಾರೆ-ಗಚ್ಚಿನಲ್ಲಿ ಪೌರಾಣಿಕ ಶಿಲ್ಪಗಳನ್ನು ನಿರ್ಮಿಸಿ ಅಲಂಕಾರ ಮಾಡಿರುತ್ತಾರೆ. ಉತ್ತರ ಭಾರತದಲ್ಲಿ ಗೋಪುರಗಳು ಇಲ್ಲದಿರುವುದೇ ಹೆಚ್ಚು. ಗೋಪುರದ ರಚನೆ ದಕ್ಷಿಣ ಭಾರತದಲ್ಲಿಯೇ ಕಂಡುಬರುತ್ತದೆ.

**ಗೋಪುರ :** ತಮಿಳು ನಾಡಿನ ದೇವಾಲಯಗಳಿಂದ ಪ್ರಭಾವಿತರಾದ ವಿಜಯನಗರದ ಅರಸರು ಅಲ್ಲಿನ ಗೋಪುರಗಳನ್ನು ಕಂಡು ತಾವು ಪ್ರಭಾವಿತರಾದರು. ಗೋಪುರಗಳ ರಚನೆ ವಿಜಯನಗರ ಕಾಲದಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ ಹೊಸದಾಗಿ ಕಾಣಿಸಿಕೊಂಡ ಒಂದು ಬೆಳವಣಿಗೆ ತಮಿಳುನಾಡಿನಲ್ಲಿ ಇದು ಮುಂಚೆ ಪ್ರಚಲಿತವಾಗಿತ್ತು. ಇದು ಎತ್ತರವಾದಷ್ಟು ಗರ್ಭಗೃಹದ ಮೇಲಿನ ವಿಮಾನಕ್ಕೆ ಪ್ರಾಶಸ್ತ್ಯ ಕಡಿಮೆಯಾಗುತ್ತಾ ಬಂತು. ಈ ವಿಮಾನಗಳ ಹೊರ ಭಿತ್ತಿಯಲ್ಲಿ ದೇವ ಕೋಷ್ಠಕಗಳು ಕಂಡುಬರುತ್ತಿದ್ದವು. ಈ ದೇವ ಕೋಷ್ಠಕಗಳಲ್ಲಿ ದೇವತೆಗಳ ಉಬ್ಬುಶಿಲ್ಪಗಳು ರಚನೆಯಾಗಿರುತ್ತಿದ್ದವು. ವಿಮಾನಗಳಲ್ಲಿ ಕಂಡುಬರುತ್ತಿದ್ದ ಈ ತೆರನಾದ ರಚನೆಗಳು ಕ್ರಮೇಣ ಗೋಪುರಗಳಲ್ಲಿ ಸ್ಥಾನವನ್ನು ಪಡೆದುಕೊಂಡವು. ಇದರಿಂದ ವಿಮಾನ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಒಂದು ಮಟ್ಟದವರೆಗೆ ನಯವಾಗಿ ಕೆತ್ತಿದ ಕಲ್ಲುಗಳನ್ನು ಉಪಯೋಗಿಸಿ ಆ ಬಳಿಕ ಇಟ್ಟಗಿಯ ಗಾರೆಗಳಿಂದ ಉಳಿದ ಭಾಗಗಳನ್ನು ಎತ್ತರಿಸಿ ಗೋಪುರವನ್ನು ಕಟ್ಟಲಾಯಿತು.

ಪ್ರಾಕಾರದ ಪ್ರಧಾನವಾದ ಬಾಗಿಲಿಗೆ ಮಹಾದ್ವಾರವೆಂದು ಹೆಸರು. ಈ ಮಹಾದ್ವಾರದ ಮೇಲೆ ಕಟ್ಟಿರುವ ಕಟ್ಟಡವು ಗೋಪುರವೆನಿಸಿಕೊಳ್ಳುತ್ತದೆ. ಈ ಗೋಪುರಕ್ಕೆ ದ್ವಾರಗೋಪುರವೆಂತಲೂ ಕರೆಯುತ್ತಾರೆ.[೫೬]

ಮಯಮತ, ಈಶಾನ್ಯ, ಶಿವಗುರು ಮೊದಲಾದ ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಗೋಪುರದ ಉಲ್ಲೇಖವನ್ನು ಕಾಣಬಹುದು. ಆದರೆ ಇದೇ ಮುಖ್ಯವೆಂದು ಹೇಳುವುದಿಲ್ಲ. ದೇವಾಲಯವು ಬೆಳೆದಂತೆ ಗೋಪುರದ ಹಿರಿಮೆಯು ಬೆಳೆಯಿತು. ತುಂಬ ಹಳೆಯ ಗೋಪುರವೆಂದರೆ ತಮಿಳುನಾಡಿನ ತಿರುಚ್ಚಿ ಬಳಿಯಿರುವ ಕಿಲ್ಲೈ ಊರಿನ ಅವನಿಕಂದರ್ಪೇಶ್ವರ ದೇವಾಲಯದ್ದು.[೫೭] ಅರ್ವಾಚೀನ ಚೋಳರು ಪಾಂಡ್ಯರು ಕಟ್ಟಿಸಿದ ದೇವಾಲಯಗಳ ಗೋಪುರಗಳು ಬಹಳ ದೊಡ್ಡವು. ಸುಂದರವಾದವುಗಳು, ಭವ್ಯವಾದವುಗಳು ಆಗಿವೆ. ಮಧುರೆ, ಚಿದಂಬರಂ, ಕುಂಭಕೋಣಂ, ಶ್ರೀರಂಗಂ, ಗೋಪುರಗಳು ಚೋಳ, ಪಾಂಡ್ಯರ ಕಾಲದಲ್ಲಿ ನಿರ್ಮಾಣವಾಗಿದ್ದು ಭಾರತದಲ್ಲಿ ಪ್ರಸಿದ್ಧ ಪಡೆದ ಗೋಪುರಗಳ ಸಾಲಿನಲ್ಲಿ ನಿಲ್ಲುತ್ತವೆ. ಈ ಗೋಪುರವು ಮೊದಲ ಭಾಗವನ್ನು ಶಿಲೆಯಲ್ಲಿ ನಿರ್ಮಿಸಲಾಗಿದ್ದು ಮೇಲೆ ಹೋದದೆಂತೆಲ್ಲಾ ಗಾರೆ ಮತ್ತು ಇಟ್ಟಂಗಿಗಳಿಂದ ನಿರ್ಮಾಣಗೊಂಡಿರುತ್ತವೆ. ಗೋಪುರಗಳು ಹಲವಾರು ಅಂತಸ್ತುಗಳನ್ನು ಒಳಗೊಂಡಿದ್ದು ಮೇಲೆ ಹೋದಂತೆಲ್ಲಾ ಸಣ್ಣದಾಗುತ್ತಾ ಹೋಗುತ್ತವೆ. ಗೋಪುರದ ಮೇಲ್ಭಾಗದಲ್ಲಿ "ನಾಸಿ" ಎಂಬ ಕೀರ್ತಿಮುಖದಂಥ ರಚನೆ ಇದೆ. ಗೋಪುರದ ಎರಡು ತುದಿಯಲ್ಲಿ ಎತ್ತರೆತ್ತರಕ್ಕೆ ಹೋದಂತೆ ಗೋಪುರವು ಚಿಕ್ಕದಾಗುತ್ತಾ ಹೋಯಿತು. ದಕ್ಷಿಣ ಭಾರತದಲ್ಲಿ ಗೋಪುರಗಳು ಐದು ಮತ್ತು ಅದಕ್ಕೂ ಹೆಚ್ಚಿನ ಅಂತಸ್ತುಗಳನ್ನು ಹೊಂದಿವೆ. ಹಂಪೆಯ ವಿರೂಪಾಕ್ಷ ದೇವಾಲಯದ ದ್ವಾರ ಗೋಪುರವು ಅತ್ಯಂತ ಎತ್ತರವಾಗಿ ನಿರ್ಮಾಣವಾಗಿರುವ ಒಂದು ಗೋಪುರವಾಗಿದೆ. ಬಯಕಾರ ರಾಮಪ್ಪಯ್ಯನು ನಿರ್ಮಿಸಿದ ತಿಮ್ಮಲಾಪುರದ ಶಿವದೇವಾಲಯದ ಗೋಪುರವು ಮೂರು ಅಂತಸ್ತಿನಿಂದ ಕೂಡಿದೆ.

ಈ ಮೊದಲೇ ಹೇಳಿದಂತೆ ಒಂದು ದೇವಾಲಯವು ಅನೇಕ ಪ್ರಾಕಾರಗಳನ್ನು ಹೊಂದಿರುತ್ತಿತ್ತು. ಒಂದೊಂದು ಪ್ರಾಕಾರಕ್ಕೂ ಒಂದೊಂದು ಹೆಸರಿರುವಂತೆ ಒಂದೊಂದು ಪ್ರಾಕಾರದ ಗೋಪುರಕ್ಕೂ ಒಂದೊಂದು ಹೆಸರನ್ನು ಕೊಡಲಾಗಿದೆ. ಒಳಗಡೆಯಿಂದ ಪ್ರಥಮ ಪ್ರಾಕಾರದ ಗೋಪುರಕ್ಕೆ "ದ್ವಾರ ಶೋಭ" ಎಂದು ಎರಡನೆಯ ಪ್ರಾಕಾರದ ಮೇಲಿನ ಗೋಪುರಕ್ಕೆ "ದ್ವಾರಶಾಲ" ಎಂದು ಮೂರನೆಯದಕ್ಕೆ "ದ್ವಾರ ಪ್ರಸಾದ" ನಾಲ್ಕನೆಯದಕ್ಕೆ "ದ್ವಾರ ಹಮ್ಯೆ" ಐದನೇಯ ಪ್ರಾಕಾರದ ಮೇಲಿನ ಗೋಪುರವು "ಮಹಾಗೋಪುರ" ಅಥವಾ "ದ್ವಾರ ಗೋಪುರ" ಎಂದು ಶಾಸ್ತ್ರಗ್ರಂಥಗಳು ಹೆಸರಿಸಿವೆ.[೫೮] ಮೊದಲ ಗರ್ಭಗೃಹದ ಮೇಲಿನ ವಿಮಾನಕ್ಕಿಂತ ಈ ಗೋಪುರಗಳು ಚಿಕ್ಕದಾಗಿರುತ್ತಿದ್ದವು. ವಿಜಯನಗರ ಕಾಲಕ್ಕಾಗಲೇ ಗೋಪುರಗಳ ರಚನೆ ವಿಮಾನಕ್ಕಿಂತ ಎತ್ತರವಾಗಿ ಬೆಳೆದುನಿಂತವು. ದೇವಾಲಯದಲ್ಲಿ ಗೋಪುರಗಳು ಎರಡು ಕಡೆ ಕೆಲವೊಂದು ಸಲ ನಾಲ್ಕು ಕಡೆಯಲ್ಲಿ ರಚಿಸಲ್ಪಡುತ್ತಿತ್ತು. ಈ ಗೋಪುರಗಳು ವಿಜಯನಗರ ಕಾಲದಲ್ಲಿ ಹೆಚ್ಚು ಪ್ರಚಾರಗೊಂಡಿದ್ದರಿಂದ ಹಾಗೂ ಅವು ಹೆಚ್ಚಾಗಿ ನಿರ್ಮಾಣವಾದ್ದರಿಂದ ಅವು 'ರಾಯ' ಗೋಪುರವೆಂದು ಹೆಸರು ಪಡೆದವು. ಇದರಿಂದಾಗಿ ಜನರ ಆಡುಮಾತಿನಲ್ಲಿ ಗೋಪುರಗಳು. ರಾಯಗೋಪುರಗಳೆಂದು ಕರೆಸಿಕೊಳ್ಳುತ್ತಿದ್ದವು.[೫೯] ಕೆಲವೊಂದು ಊರಿನಲ್ಲಿ ದೇವಸ್ಥಾನಗಳು ಬೇರೆ

ಕಾಲದಲ್ಲಿ ನಿರ್ಮಿತವಾಗಿದ್ದರೂ ಗೋಪುರಗಳು ಮಾತ್ರ ವಿಜಯನಗರ ಕಾಲದಲ್ಲೇ ನಿರ್ಮಾಣಗೊಂಡವು. ಬೇಲೂರಿನ ಚನ್ನಕೇಶವ ದೇವಾಲಯವು ಹೊಯ್ಸಳರ ಅವಧಿಯಲ್ಲಿ ನಿರ್ಮಾಣ ಹೊಂದಿದ್ದರೂ ಅದರ ಗೋಪುರವು ರಚನೆಯಾದದ್ದು ಮಾತ್ರ ವಿಜಯನಗರ ಕಾಲದಲ್ಲಿ. ಆದ್ದರಿಂದ ಇದನ್ನು ರಾಯಗೋಪುರವೆಂದು ಕರೆಯಲಾಗುತ್ತದೆ. ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿ ಕೃಷ್ಣದೇವರಾಯನು ಕಟ್ಟಿಸಿದ ಗೋಪುರ ಮೂರು ಅಂತಸ್ಥಿನಿಂದ ಕೂಡಿದೆ. ದೇವಾಲಯದ ಮುಖ್ಯಗೋಪುರವು ಎರಡನೇ ದೇವರಾಯನ ಕಾಲದಲ್ಲಿ ನಿರ್ಮಿತವಾಗಿದ್ದು ಇದು ದಕ್ಷಿಣ ಭಾರತದ ಎತ್ತರದಲ್ಲಿ ಒಂದಾಗಿದೆ. ಇದರ ಎತ್ತರ ಸುಮಾರು ೫೬.೬ ಮೀಟರ್ ೯ ತರದಿಂದ ಕೂಡಿದ ಗೋಪುರದ ಮೇಲೆ ಕಲಶಗಳನ್ನು ಇರಿಸಲಾಗಿದೆ. ಹೀಗೆ ವಿಜಯನಗರ ಕಾಲದಲ್ಲಿ ದೇವಾಲಯಗಳ ವಿಮಾನಕ್ಕಿಂತ ಗೋಪುರಕ್ಕೆ ಹೆಚ್ಚಿನ ಪ್ರಾಶಸ್ತ್ಯ ದೊರೆಯಿತು.

**ಅಮ್ಮನವರ ಸನ್ನಿಧಿ :** ದೇವಾಲಯದ ಗರ್ಭಗೃಹದಲ್ಲಿ ಪ್ರಧಾನವಾದ ಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದ ಪಕ್ಕದಲ್ಲೇ ಸ್ತ್ರೀ ದೇವತಾ ಮೂರ್ತಿಯೂ ಇರಬಹುದು. ಇಲ್ಲವೇ ಅಮ್ಮನವರ ಸನ್ನಿಧಿಯನ್ನು ಪ್ರತ್ಯೇಕ ದೇವಾಲಯವಾಗಿ ನಿರ್ಮಿಸಬಹುದು ಎಂದು ಶಾಸ್ತ್ರಗ್ರಂಥಗಳು ತಿಳಿಸುತ್ತವೆ.[೨೦] ಹೀಗೆ ಪ್ರತ್ಯೇಕವಾಗಿ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟ ಅಮ್ಮನವರ ಸನ್ನಿಧಿಗೆ, ದೇವಿ ಮಂದಿರಗಳು, ಅಮ್ಮನವರ ಸನ್ನಿದಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಈ ಅಮ್ಮನವರ ಸನ್ನಿಧಿಯು, ದೇವಾಲಯದ ಪ್ರಧಾನ ದೇವರ ದೇವಾಲಯಕ್ಕೆ ಹತ್ತಿರದಲ್ಲೇ ಇರುತ್ತದೆ. ಈ ಅಮ್ಮನವರ ಸನ್ನಿಧಿಯ ಪ್ರಧಾನ ದೇವರ ಉತ್ತರ ದಿಕ್ಕಿನಲ್ಲಿರಬೇಕು ಅಂದರೆ, ಪ್ರಧಾನ ದೇವಾಲಯದ ದೇವರ ಎಡಭಾಗದಲ್ಲಿರಬೇಕು ಎಂಬ ನಿಯಮವಿದೆ. ಇದು ಪ್ರಧಾನಷ್ಟೇ ಹೊಂದಿರುತ್ತವೆ. ಕೆಲವೊಂದು ಸಂದರ್ಭದಲ್ಲಿ ಮುಂದೆ ಒಂದು ಚಿಕ್ಕ ಮಂಟಪದ ರಚನೆ ಇರುವುದುಂಟು. ದೇವಿಯ ಗುಡಿಗಳನ್ನು ನೈಋತ್ಯ ಮೂಲೆಯಲ್ಲಿ ಕಟ್ಟಲಾಗುತ್ತಿತ್ತು.[೨೧]

**ಜಲಪ್ರಣಾಳಿ :** ಗರ್ಭಗೃಹದ ಪ್ರಧಾನ ಮೂರ್ತಿಯನ್ನು ಅಭಿಷೇಕ ಮಾಡಿದ ನೀರು ಹೊರಕ್ಕೆ ಸಾಗಿಸಲು ಈ ಜಲಪ್ರಣಾಳಿಯನ್ನು ಅಳವಡಿಸಿರುತ್ತಾರೆ. ಇದು ಗರ್ಭಗುಡಿಯ ಒಳಭಿತ್ತಿಯ ನೆಲಮಟ್ಟದಲ್ಲಿ ಅಳವಡಿಸಲಾಗಿರುತ್ತದೆ. ಜಲ ಪ್ರಣಾಳಕ್ಕೆ ವಾರಿಮಾರ್ಗ 'ಅಂಬುಮಾರ್ಗ' ಎಂಬ ಹೆಸರುಗಳೂ ಇವೆ.[೨೨] ಪ್ರಣಾಳಿಯ ನೀರನ್ನು ಹೊರ ಹಾಕುವ ಭಾಗವನ್ನು ಸಿಂಹ ಮುಖದಿಂದ ಅಲಂಕರಿಸಿದ್ದಾರೆ. ಇದನ್ನು "ಸಿಂಹವಕ್ತ್ರ ಪ್ರಣಾಳ" ಎನ್ನುವರು. ಆನೆಯ ಮುಖವನ್ನು ಕೆತ್ತಿದ್ದರೆ "ಗಜವಕ್ತ್ರ ಪ್ರಣಾಳ", ವ್ಯಾಳದ ಮುಖವನ್ನು ಬಿಡಿಸಿದರೆ "ವ್ಯಾಳವಕ್ತ್ರ ಪ್ರಣಾಳ', ಗೋವಿನ ಮುಖದಿಂದ ಕೆತ್ತಿದ್ದರೆ "ಗೋಮುಖ ಪ್ರಣಾಳ" ಎಂದು ಕರೆಯಲಾಗುತ್ತದೆ. ಹಂಪೆಯ ವಿರೂಪಾಕ್ಷ, ಕೆಳದಿ ಅಘೋರೇಶ್ವರ ದೇವಾಲಯಗಳಿಗೆ "ಮತ್ಸ್ಯವಕ್ರು" ಪ್ರಣಾಳವನ್ನು ಅಳವಡಿಸಲಾಗಿದೆ.

**ನಂದಿಮಂಟಪ :** ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಮೂಲ ದೇವರ ವಿಗ್ರಹದ ಎದುರಿಗೆ ಅದರ ವಾಹನದ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ವಿಷ್ಣು ವಿಗ್ರಹದ ಎದುರಿಗೆ ಗರುಡನನ್ನು ಕಾರ್ತಿಕೇಯನ ಎದುರಿಗೆ ನವಿಲು ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗುತ್ತದೆ. ಇದೇ ತೆರನಾಗಿ ಶಿವಾಲಯಗಳಲ್ಲಿ ಶಿವನಿಗೆದುರಾಗಿ ಕುಳಿತಿರುವ ನಂದಿಯನ್ನಿಡಲು ರಚಿಸುವ ಮಂಟಪವೇ ನಂದಿಮಂಟಪವೆಂದು ಕರೆಯಲಾಗುತ್ತದೆ. ಇದಕ್ಕೆ ವೃಷಭ ಮಂಟಪ ಎಂತಲೂ ಕರೆಯುತ್ತಾರೆ.[೬೩] ಕೆಲವೊಂದು ದೇವಾಲಯಗಳಲ್ಲಿ ಅರ್ಧಮಂಟಪ, ನೃತ್ಯಮಂಟಪಗಳಲ್ಲೇ ನಂದಿಯನ್ನು ಪ್ರತಿಷ್ಠಾಪಿಸಲಾಗುತ್ತದೆ. ಹಂಪೆಯ ವಿರೂಪಾಕ್ಷ, ಇಕ್ಕೇರಿಯ ಅಘೋರೇಶ್ವರ ಮುಳುಬಾಗಿಲ ಸೋಮೇಶ್ವರ ಮುಂತಾದ ದೇವಾಲಯಗಳಲ್ಲಿ ಇಂತಹ ನಂದಿಮಂಟಪವನ್ನು ಕಾಣಬಹುದು.

**ರಂಗಮಂಟಪ :** ರಂಗಮಂಟಪವನ್ನು ದೇವರ ರಂಗಭೋಗ ಸೇವೆಗಾಗಿ ಕಟ್ಟಲಾಗಿರುವುದು. ಈ ರಂಗ ಮಂಟಪವು ಹೆಚ್ಚು ಜನರು ಸೇರಲು ಅವಕಾಶವಿರುವಂತೆ, ವಿಶಾಲವಾಗಿರುವುದಲ್ಲದೆ, ಮುಖಮಂಟಪದ ನಂತರ ಇರುವುದು. ಇದರಲ್ಲಿ ಕೂಡಾ ಪ್ರೇಕ್ಷಕರು ಕುಳಿತುಕೊಳ್ಳಲು ಅನುಕೂಲವಾಗುವಂತೆ ಸುತ್ತ ರಕ್ಷಾಸನವೂ ನೃತ್ಯಕ್ಕೆ ಅನುಕೂಲವಾಗುವಂತೆ ಮಧ್ಯೆ ವೃತ್ತಾಕಾರದ ರಚನೆಯೂ ಇರುವುದು ಹೆಚ್ಚು ಜನರು ಸೇರುವ ಸ್ಥಳವಾದುದ್ದರಿಂದ ಈ ಮಂಟಪವನ್ನು ವಿಶೇಷಾಸಕ್ತಿಯಿಂದ ಆಕರ್ಷಣೀಯವಾಗಿ ರಚಿಸಲಾಗುತ್ತದೆ. ಇಂತಹ ರಂಗ ಮಂಟಪವನ್ನು ಅರಸೀಕೆರೆಯ ಶಿವಾಲಯದಲ್ಲಿ ಕಾಣಬಹುದು.[೬೪] ವಿಜಯನಗರ ಕಾಲದಲ್ಲಿ ರಂಗಮಂಟಪವು ಹೆಚ್ಚು ವಿಶಾಲವೂ, ಎತ್ತರವಾದದ್ದು ಆಗಿರುತಿತ್ತು. ಹೆಚ್ಚು ಸಂಖ್ಯೆಯ ಕಂಬಗಳನ್ನು ಹೊಂದಿದ್ದು, ಇದು ಅಧಿಷ್ಠಾನವೆಂದು ರಚನೆಯಾಗಿರುತ್ತಿತ್ತು.

**ಕಲ್ಯಾಣ ಮಂಟಪ :** ದೇವತೆಗಳ ಕಲ್ಯಾಣೋತ್ಸವಕ್ಕಾಗಿ ಪ್ರತ್ಯೇಕವಾಗಿ ಒಂದು ಮಂಟಪವನ್ನೇ ನಿರ್ಮಿಸಲಾಗುತಿತ್ತು. ಈ ಮಂಟಪಕ್ಕೆ "ಕಲ್ಯಾಣ ಮಂಟಪ"ಎಂದು ಕರೆಯುತ್ತಾರೆ. ಈ ಕಲ್ಯಾಣ ಮಂಟಪವನ್ನು ಸಾಮಾನ್ಯವಾಗಿ ದೇವಾಲಯದ ಹತ್ತಿರ ಪ್ರತ್ಯೇಕವಾಗಿ ನಿರ್ಮಿಸಲಾಗುತ್ತಿತ್ತು. ಈ ಮಂಟಪದ ಮಧ್ಯದಲ್ಲಿ ವೇದಿಕೆ ಇದ್ದು ಸುತ್ತಲೂ ಕಂಬಗಳು ಇರುತ್ತವೆ. ಕಂಬಗಳು ಮತ್ತು ವಿತಾನಗಳನ್ನು ವಿಶೇಷವಾಗಿ ಅಲಂಕಾರ ಮಾಡಿರುತ್ತಾರೆ. ವಿಜಯನಗರ ಕಾಲದ ಎಲ್ಲಾ ದೇವಾಲಯಗಳಲ್ಲಿ ಈ ಕಲ್ಯಾಣ ಮಂಟಪಗಳನ್ನು ನಿರ್ಮಿಸಿದ್ದರು.[೬೫] ವೈದಿಕ ಧರ್ಮದ ಉನ್ನತಿಯನ್ನು ಎತ್ತಿಹಿಡಿಯಲು ವಿಜಯನಗರ ಕಾಲದಲ್ಲಿ ದೇವಾಲಯದ ಪೂಜೆಗಳಲ್ಲಾದ ಬದಲಾವಣೆಯೇ ಈ ರೀತಿಯ ಮಂಟಪಕ್ಕೆ ಕಾರಣವಿರಬೇಕು. ಕೋಲಾರದ ಸೋಮೇಶ್ವರ ದೇವಾಲಯ ಹಂಪೆಯ ವಿರೂಪಾಕ್ಷ, ಪ್ರಸನ್ನ ವಿರೂಪಾಕ್ಷ ದೇವಾಲಯಗಳಲ್ಲಿ ಈ ರೀತಿಯ ಕಲ್ಯಾಣ ಮಂಟಪಗಳನ್ನು ಕಾಣಬಹುದು.

## ಊರ್ಧ್ವಮುಖ ರಚನೆ

ದೇವಾಲಯಗಳ ಊರ್ಧ್ವಮುಖವು ಕ್ರಮದಲ್ಲಿ ಅಂದರೆ, ಕೆಳಗಿನಿಂದ ಮೇಲಕ್ಕೆ ಪ್ರಧಾನವಾಗಿ ಆರು, ಭಾಗಗಳಿಂದ ಕೂಡಿರುತ್ತವೆ.

**ಉಪಪೀಠ :** ದೇವಾಲಯದ ಎತ್ತರವನ್ನು ಹೆಚ್ಚಿಸುವುದಕ್ಕಾಗಿ ಉಪಪೀಠದ ರಚನೆಯನ್ನು ಕಾಣಬಹುದು. ಉಪಪೀಠವು ದೇವಾಲಯಕ್ಕೆ ರಕ್ಷಣೆ ಸೌಂದರ್ಯವನ್ನು ಹೆಚ್ಚಿಸುತ್ತವೆ. ಅಧಿಷ್ಠಾನದ ಕೆಳಗಡೆ ಈ ಉಪಪೀಠದ ರಚನೆಯನ್ನು ಕಾಣಬಹುದು. ಅಧಿಷ್ಠಾನದ ಕೆಳಗೆ ಈ ಭಾಗವು ಕಡ್ಡಾಯ ಭಾಗವೇನಲ್ಲ. ವಿಜಯನಗರ ಕಾಲದಲ್ಲಿ ದೇವಾಲಯದ ಎತ್ತರ ಹೆಚ್ಚಿದ್ದರಿಂದ, ಹಾಗೆಯೇ ದೇವಾಲಯದ ಭವ್ಯತೆಗೆ ಪ್ರಾಮುಖ್ಯತೆ ಕೊಟ್ಟಿದ್ದರಿಂದ ಈ ಉಪಪೀಠವು ವಿಜಯನಗರ ಕಾಲದಲ್ಲಿ ಕಡ್ಡಾಯವಾಗಿ ನಿರ್ಮಿಸಲಾಗುತಿತ್ತು.[೬೬] ಉಪಪೀಠದಲ್ಲಿ ನಿರ್ಮಿಸಿದ ಅಂಗಗಳನ್ನು ಮೇಲಿಂದ ಅಷ್ಟಾಂಗ, ವೇದಭದ್ರ, ಸುಭದ್ರ, ಪ್ರತಿಭದ್ರ 'ಮಂಚಭದ್ರ' ಎಂದು ಹೆಸರಿಸಲಾಗುತ್ತದೆ.

**ಅಧಿಷ್ಠಾನ :** ಸಾಮಾನ್ಯವಾಗಿ ಎಲ್ಲಾ ಕಟ್ಟಡಗಳು ಒಂದು(ಬೇಸ್ ಮೆಂಟ್) ಕಟ್ಟಡದ ಅಥವಾ ವಸ್ತುವಿನ ಮೇಲೆ ನಿಂತಿರುತ್ತವೆ. ದೇವಾಲಯದ ಕಟ್ಟಡವು ನಿಲ್ಲುವುದಕ್ಕೆ ಆಧಾರವಾಗಿ ನಿರ್ಮಿಸಿದ ಭಾಗವನ್ನು "ಅಧಿಷ್ಠಾನ" ಎಂದು ಕರೆಯಲಾಗುತ್ತದೆ. ಒಂದು ದೇವಾಲಯದಲ್ಲಿ ಗೋಡೆಯ ಕೆಳಭಾಗದಲ್ಲಿ ನಿರ್ಮಿಸಿದ ಭಾಗಕ್ಕೆ ಅಧಿಷ್ಠಾನ ಎಂದು ಕರೆಯಲಾಗುತ್ತದೆ. ವಿಜಯನಗರ ಕಾಲದಲ್ಲಿ ಈ ಅಧಿಷ್ಠಾನಕ್ಕಿಂತ ಕೆಳಭಾಗದಲ್ಲಿ ಉಪಪೀಠವಿರುತ್ತದೆ. ಇದು ನೆಲದೊಳಗೆ ಸೇರಿಕೊಂಡಿರುತ್ತದೆ. ಆದರೆ, ಕೆಲವೊಂದು ದೇವಾಲಯದಲ್ಲಿ ಈ ಅಧಿಷ್ಠಾನವೇ ನೆಲಕ್ಕೆ ಹೊಂದಿಕೊಂಡ ದೇವಾಲಯದ ಮೊದಲ ಭಾಗವಾಗಿರುತ್ತದೆ. ದೇವಾಲಯದ ಊರ್ಧ್ವಮುಖ ಕ್ರಮದಲ್ಲಿ ಅಧಿಷ್ಠಾನವೇ ಮೊದಲ ಭಾಗವಾಗಿರುತ್ತದೆ. ದೇವಾಲಯಕ್ಕೆ ಉಪಪೀಠವನ್ನು ನಿರ್ಮಿಸಿದ್ದರೂ ಉಪಪೀಠವು 'ಷಡ್ವರ್ಗ ಕ್ರಮಕ್ಕೆ' ಸೇರುವುದಿಲ್ಲ.[೬೭] ಅಧಿಷ್ಠಾನಕ್ಕೆ ಆದ್ಯಂಗ, ಮಸೂರಕ, ವಸ್ತ್ವಾಧಾರ ಧರಾತಲ, ತಲಕುಟ್ಟಿಯ ಎಂಬ ಪರ್ಯಾಯ ಪದಗಳು ಇವೆ ಎಂದು ಮಯಮತ ಕಾಶ್ಯಪಶಿಲ್ಪಗ್ರಂಥಗಳು ಹೇಳುತ್ತವೆ.

ಅಧಿಷ್ಠಾನದ ಮುಖ್ಯ ಕೆಲಸವೆಂದರೆ ದೇವಾಲಯದ ಭಾರವನ್ನು ಹೊರಬೇಕಾಗಿರುವುದರಿಂದ ಈ ಭಾಗವನ್ನು ಭದ್ರವಾಗಿ ರಚಿಸಲಾಗುತ್ತಿತ್ತು. ಅದೇ ತೆರನಾಗಿ ದೇವಾಲಯವು ಸುಂದರಗೊಳ್ಳಲು ಚತುರ ಶಿಲ್ಪಿಗಳು ಅನೇಕ ಕರಕುಶಲ ಕೆತ್ತನೆಗಳಿಂದ ಆಕರ್ಷಣೀಯವಾಗಿಯೂ, ನಯವಾಗಿಯೂ ರಚಿಸುತ್ತಿದ್ದರು.

ಹೆಚ್ಚಾಗಿ ಕರ್ನಾಟಕದಲ್ಲಿ ನಿರ್ಮಾಣವಾದ ದೇವಾಲಯಗಳ ಅಧಿಷ್ಠಾನವು ಚೌಕ ಅಥವಾ ಆಯತಾಕಾರವಾಗಿರುವುದು. ವಿರಳವಾಗಿ ಗಜಪುಷ್ಠಾಕಾರ, ವೃತ್ತಕಾರ ಕಂಡುಬರುತ್ತವೆ, ಆದರೆ ವಿಜಯನಗರ ಕಾಲದಲ್ಲಿ ಬಹಳಷ್ಟು ದೇವಾಲಯಗಳ ಅಧಿಷ್ಠಾನ ಚೌಕ ಅಥವಾ ಆಯತಾಕಾರದಲ್ಲೇ ಇವೆ.

ಅಧಿಷ್ಠಾನವು ಉಪಾನ, ಜಗತೀ, ಖುರ-ಕುಂಬ, ಪದ್ಮ, ಕುಂದ, ಕಂಪ, ಆಲಿಂಗ ಆಂತರಿಕ, ಪ್ರತಿವಾಜನ, ಕಪೋತ ಮತ್ತು ಪಟ್ಟಿಕಾ ಮುಂತಾದ ಭಾಗಗಳನ್ನು ಹೊಂದಿರುತ್ತವೆ.

ಮೇಲಿನ ಎಲ್ಲಾ ಭಾಗಗಳು ಒಂದೇ ಅಧಿಷ್ಠಾನದಲ್ಲಿ ಕಂಡುಬರುವುದಿಲ್ಲ. ಅಧಿಷ್ಠಾನವನ್ನು ರಚಿಸುವಾಗ ಅಗಲ, ಉದ್ದ, ಎತ್ತರಗಳನ್ನು ಹೆಚ್ಚುಕಮ್ಮಿ ಮಾಡುವುದರಿಂದ ಕೆಲವು ಅಂಗಗಳನ್ನು ಮಾತ್ರ ರಚಿಸಿ, ಕೆಲವೊಂದು ಅಂಗಗಳನ್ನು ಬಿಟ್ಟುಬಿಡುತ್ತಾರೆ. ಹೀಗೆ ಬೇರೆ ಬೇರೆ ಅಂಗಗಳಿಂದ ಅಧಿಷ್ಠಾನವು ಬೇರೆ ಬೇರೆ ರೂಪವನ್ನು ಪಡೆಯುತ್ತವೆ. ಇವುಗಳನ್ನು ಅನೇಕ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತದೆ. ಮಾನಸಾರವು ಅರವತ್ತನಾಲ್ಕು ಪ್ರಕಾರದ ಅಧಿಷ್ಠಾನವನ್ನು ಹೆಸರಿಸಿದೆ. ಕಾಶ್ಯಪಶಿಲ್ಪವು ಇಪ್ಪತ್ತೆರಡು ವಿವಿಧ ಅಧಿಷ್ಠಾನವನ್ನು ಹೆಸರಿಸಿದೆ. ಮಯಮತ ಶಾಸ್ತ್ರಗ್ರಂಥವು ಹದಿನಾಲ್ಕು ಪ್ರಕಾರದ ಅಧಿಷ್ಠಾನವು ಹೇಳಿದೆ. ಸುಪ್ರಭೇದಾಗಮವು ನಾಲ್ಕು ರೀತಿಯ ಅಧಿಷ್ಠಾನವನ್ನು ತಿಳಿಸುತ್ತದೆ. ಆದರೆ ಈ ಶಾಸ್ತ್ರಗ್ರಂಥಗಳ ಅಧಿಷ್ಠಾನಗಳನ್ನು ಎರಡು ಪ್ರಕಾರವಾಗಿ ವಿಂಗಡಿಸಲಾಗಿದೆ. ಈ ವಿಂಗಡನೆಗೆ ಮುಖ್ಯ ಕಾರಣ. ಅಧಿಷ್ಠಾನದಲ್ಲಿ ಅಳವಡಿಸಿರುವ ಕುಮುದದ ಮೇಲೆ ನಿರ್ಧರಿಸಲಾಗುತ್ತದೆ. ವೃತ್ತ ಕುಮುದದಿಂದ ಕೂಡಿರುವ ಎಲ್ಲಾ ಅಧಿಷ್ಠಾನಗಳನ್ನು "ಪ್ರತಿಬಂಧ ಅಧಿಷ್ಠಾನ" ಎಂದು ಕರೆಯಲಾಗುತ್ತಿದೆ. ತ್ರಿಪಟ್ಟ ಕುಮುದವಿರುವ ಎಲ್ಲಾ ಅಧಿಷ್ಠಾನಗಳು ಪಾದಬಂಧ ಅಧಿಷ್ಠಾನ ಎಂದು ಕರೆಯಿಸಿಕೊಳ್ಳುತ್ತವೆ. ಕುಮುದ ಇಲ್ಲದೇ ನಿರ್ಮಾಣಗೊಂಡ ಅಧಿಷ್ಠಾನವನ್ನು "ಮಂಚಕ" ರೀತಿಯ ಅಧಿಷ್ಠಾನ ಎಂದು ಕರೆಯಲಾಗುತ್ತದೆ.

ಮುಖ್ಯವಾಗಿ ಗ್ರಂಥಗಳು ಹೇಳಿರುವ ಅಧಿಷ್ಠಾನಗಳಲ್ಲಿ ಪಾದಬಂಧ, ಪ್ರತಿಬಂಧ, ಪದ್ಮಬಂಧ ಕಪೋತ ಬಂಧ, ಶ್ರಬಂಧ, ಮಂಚಬಂಧ ಅಧಿಷ್ಠಾನಗಳು ಕಂಡುಬರುತ್ತವೆ. ಒಟ್ಟಾರೆಯಾಗಿ ಒಂದೊಂದು ಕಾಲಘಟ್ಟದಲ್ಲಿ ಒಂದೊಂದು ಪ್ರಕಾರದ ಅಧಿಷ್ಠಾನವು ಪ್ರಾಮುಖ್ಯತೆಯನ್ನು ಪಡೆಯಿತು ಎನ್ನಬಹುದು. ಪ್ರಾಚೀನ ಕಾಲದಲ್ಲಿ ಮಂಚಕ ಅಧಿಷ್ಠಾನವು ಗಂಗರ ಕಾಲದಲ್ಲಿ ಪಾದಬಂಧ ಮತ್ತು ಕಪೋತ ಬಂಧ ಅಧಿಷ್ಠಾನ ಕಂಡುಬರುತ್ತದೆ. ಆದರೆ, ವಿಜಯನಗರ ಕಾಲದಲ್ಲಿ ಸಾಮಾನ್ಯವಾಗಿ ಎಲ್ಲಾ ದೇವಾಲಯಗಳು ಅಧಿಷ್ಠಾನವನ್ನು ಹೊಂದಿದ್ದವು. ಈ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು "ಶ್ರೀಬಂಧ' ಅಧಿಷ್ಠಾನವನ್ನು ಹೊಂದಿವೆ.

**ಭಿತ್ತಿ :** ದೇವಾಲಯದ ರಕ್ಷಣೆಗಾಗಿ ನಿರ್ಮಿಸಿದ ಗೋಡೆಯನ್ನು ಭಿತ್ತಿ ಎಂದು ಕರೆಯಲಾಗುತ್ತಿದೆ. ಪ್ರಾಚೀನ ಕಾಲದಲ್ಲಿ ಸರಳವಾಗಿರುತ್ತಿದ್ದ ಈ ಭಿತ್ತಿಯ ರಚನೆ, ಕಾಲ ಬೆಳೆದಂತೆ, ದೇವಾಲಯಗಳು ಬೆಳೆದವು, ದೇವಾಲಯವು ಬೆಳೆದಂತೆ, ಭಿತ್ತಿಯ ಅಲಂಕಾರವೂ ಹೆಚ್ಚತೊಡಗಿತು. ದೇವಾಲಯದ ಷಡ್ವರ್ಗ ಕ್ರಮದಲ್ಲಿ ಭಿತ್ತಿಗೆ ಎರಡನೇ ಸ್ಥಾನ. ಮೊದಲನೆಯದು ಅಧಿಷ್ಠಾನವಾಗಿದೆ. ಪ್ರಸ್ತಾರ ಮತ್ತು ಅಧಿಷ್ಠಾನಗಳ ನಡುವಿನ ಭಾಗವೇ 'ಭಿತ್ತಿ'. ಭಿತ್ತಿಗೆ "ಕುಂಡ್ಯ" 'ಜಂಘಾವರ್ಗ" "ಪಾದವರ್ಗ" ಎಂದು ಶಾಸ್ತ್ರಗ್ರಂಥಗಳಲ್ಲಿ ಹೆಸರಿಸಲಾಗಿದೆ.[೬೮]

ಭಿತ್ತಿಯ ರಚನೆಯ ಉದ್ದೇಶ ಗರ್ಭಗೃಹದಲ್ಲಿ ಸ್ಥಾಪಿಸಲ್ಪಟ್ಟ ಮೂಲ ದೇವರ ರಕ್ಷಣೆಗಾಗಿ ನಿರ್ಮಿಸಲ್ಪಟ್ಟಿದ್ದು. ಇದನ್ನು ಅಧಿಷ್ಠಾನದ ಮೇಲೆ ನಿರ್ಮಿಸಲಾಗುತ್ತದೆ. ಅಧಿಷ್ಠಾನಕ್ಕನುಸಾರವಾಗಿ ವೃತ್ತಾಕಾರ, ಚೌಕಾಕರ, ಆಯತಾಕಾರ ಗಜಪೃಷ್ಠಾಕಾರದಲ್ಲಿಯೂ ಈ ಭಿತ್ತಿಯ ರಚನೆಯನ್ನು ಕಾಣಬಹುದು. ಕೆಲವೊಂದು ದೇವಾಲಯಗಳ ಭಿತ್ತಿಗಳ ಮೇಲೆ ಉಬ್ಬುಶಿಲ್ಪಗಳನ್ನೂ ಇನ್ನೂ ಕೆಲವು ದೇವಾಲಯಗಳ ಭಿತ್ತಿಗಳ ಮೇಲೆ ಶಾಸನಗಳನ್ನೂ ನಿರ್ಮಿಸಲಾಗಿದೆ. ಅಧಿಷ್ಠಾನದ ನಿರ್ಮಾಣದ ಆಕಾರದ ಮೇಲೆ ಬಿತ್ತಿಯೂ ಮುಂಚಾಚಿರುತ್ತದೆ. ಇಲ್ಲವೇ ಒಳಗೆ ಸಂದಿರುತ್ತದೆ. ಭಿತ್ತಿಯ ಮಧ್ಯದಲ್ಲಿ ಒಂದು ಭಾಗ ಮಾತ್ರ ಮುಂಚಾಚಿದ್ದಲ್ಲಿ 'ಭದ್ರ-ಕರ್ಣ'ಗಳೆಂಬ ಭಾಗಗಳುಂಟಾಗುತ್ತವೆ. ಇವುಗಳಲ್ಲಿ ಮಧ್ಯೆ ಮುಂಚಾಚಿದ ಭಾಗವು ಭದ್ರ ಎನಿಸಿದರೆ, ಅದರ ಪಕ್ಕದಲ್ಲಿ ಹಿಂದೆ ಸರಿದದ್ದು "ಕರ್ಣ" ಎನಿಸಿಕೊಳ್ಳುತ್ತದೆ.

ಭಿತ್ತಿಯು "ವೇದಿಯನ್ನು" ಒಳಗೊಂಡಿರುತ್ತವೆ. ಇದು ಭಿತ್ತಿಗೆ ಆಧಾರವಾಗಿರುವ ಅಂಗ ಇದು ಅಧಿಷ್ಠಾನದ ಮೇಲೆ ನಿರ್ಮಾಣವನ್ನು ಹೊಂದಿರುತ್ತದೆ. ಅಧಿಷ್ಠಾನದಲ್ಲಿರುವಂತೆ ಕಂಪಗಳ ಕಂಪ, ಪಟ್ಟಿಕಾ ಕಂಪ ಎಂಬ ಅಂಗಗಳನ್ನು ಇದು ಹೊಂದಿರುತ್ತವೆ.[೧೯] ಈ ವೇದಿಯು ವ್ಯಾಳಿ, ಬೆಳ್ಳಿ ಇತ್ಯಾದಿಗಳಿಂದ ಅಲಂಕರಣ ಹೊಂದಿರುತ್ತದೆ.

**ಕುಂಡ್ಯಸ್ತಂಭ :** ಭಿತ್ತಿಯಲ್ಲಿನ ಇನ್ನೊಂದು ಅಂಗ ದೇವಾಲಯದ ಭಾರವನ್ನು ಹೊರಲು ಭಿತ್ತಿಯ ಮಧ್ಯದಲ್ಲಿ ಈ ಸ್ತಂಭಗಳನ್ನು ನಿರ್ಮಿಸಲಾಗುತ್ತದೆ. ಕುಂಡ್ಯಸ್ತಂಭಕ್ಕೆ ಉಬ್ಬುಕಂಬ, ಬಿತ್ತಿಸ್ತಂಭ, ಕುಂಡ್ಯಪಾದ, ಭಿತ್ತಿಪಾದ ಎಂದು ಹೆಸರುಗಳಿಂದ ಕರೆಯಲಾಗುತ್ತದೆ.[೨೦]

ಈ ಕುಂಡ್ಯಸ್ತಂಭಗಳು ಅಧಿಷ್ಠಾನದ ಅಥವಾ ವೇದಿಯ ಮೇಲೆ ನಿರ್ಮಾಣಗೊಂಡಿರುತ್ತವೆ. ಇವುಗಳ ಪೂರ್ಣಭಾಗ ಮಾತ್ರ ಹೊರಗೆ ಕಾಣುವುದಿಲ್ಲ ಅರ್ಧಭಾಗ ಮಾತ್ರ ತೋರುತ್ತದೆ. ಉಳಿದ ಭಾಗ ಗೋಡೆಯ ಒಳಗಡೆ ಸೇರಿಹೋಗಿರುತ್ತದೆ. ಈ ಸ್ತಂಭಗಳು ಚೌಕಾಕಾರವಾಗಿರುವುವಾದರೂ ದೇವಾಲಯದ ಒಳಗಿರುವ ಸ್ತಂಭಗಳ ಆಕಾರವನ್ನನುಸರಿಸಿ ಇವು ಬೇರೆ ಬೇರೆ ರೂಪದಲ್ಲೂ ಇರಬಹುದು.

ವಿಜಯನಗರ ಕಾಲದಲ್ಲಿ ಈ ಗೋಡೆಗಂಬಗಳು ಸಾಮಾನ್ಯವಾಗಿ ಚೌಕಾಕಾರದಲ್ಲೇ ರಚನೆಗೊಂಡಿವೆ. ತಿಮ್ಮಲಾಪುರದ ಬಯಕಾರ ರಾಮಪ್ಪಯ್ಯನು ನಿರ್ಮಿಸಿದ ಶಿವದೇವಾಲಯವು ಈ ರೀತಿಯಾದ ಚೌಕಾಕಾರದಲ್ಲಿ ರಚನೆಗೊಂಡಿವೆ.

**ದೇವಕೋಷ್ಠ :** ಕೋಷ್ಠಕ ಹೊರಗೋಡೆಯಲ್ಲಿ ಕುಂಡ್ಯಸ್ತಂಭಗಳ ನಡುವಿಭಾಗದಲ್ಲಿ ಇರುವ ಗೂಡುಗಳಿಗೆ ಕೋಷ್ಠ ಎಂದು ಹೆಸರು. ಇವುಗಳನ್ನು ಗೋಡೆಯು ಸುಂದರವಾಗಿರಲೆಂದು ರಚಿಸಲಾಗುತ್ತದೆ. ಅಕ್ಕಪಕ್ಕದ ಎರಡು ಕಂಬಗಳು ಸೇರುವಂತೆ ಮೇಲ್ಭಾಗದಲ್ಲಿ ಕಪೋತವಿರುತ್ತದೆ ಮಧ್ಯಭಾಗವು ಹೆಚ್ಚು ಆಳವಿಲ್ಲದೆ. ಹುಸಿಗೂಡಿನಂತೆ ಇರುತ್ತದೆ.[೨೧]

**ಪ್ರಸ್ತರ :** ಷಡ್ವರ್ಗ ಕ್ರಮದಲ್ಲಿ ಮೂರನೆಯ ಭಾಗವೇ ಪ್ರಸ್ತಾರ. ಇದು ಭಿತ್ತಿಯ ಮೇಲಿನ ಭಾಗವಾಗಿದೆ. ಇದು ಬಿತ್ತಿಯ ಸ್ತಂಭ ಮೇಲಿನ ಬೋದಿಗೆಯ ಮೇಲಿಂದ ಪ್ರಾರಂಭವಾಗಿ ಸ್ತಂಭದಿಂದ ಸ್ತಂಭಕ್ಕೆ ಸಂಪರ್ಕವನ್ನು ಏರ್ಪಡಿಸುವುದು ಪ್ರಸ್ತಾರಕ್ಕೆ ಮಂಚ, ಪ್ರಚ್ಛಾದನ ಲುಪಾ, ಇನ್ನಿತರ ಹೆಸರುಗಳಿಂದಲೂ ಇದನ್ನು ಕರೆಯಲಾಗುತ್ತದೆ.

**ಪ್ರಸ್ತಾರ :** ಭಿತ್ತಿಯ ಮೇಲಿನ ಭಾಗಕ್ಕೆ ಪ್ರಸ್ತಾರ ಎಂದು ಹೆಸರು. ಇದು ದೇವಾಲಯದ ಷಡ್ವರ್ಗ ಕ್ರಮದಲ್ಲಿ ಮೂರನೆಯ ಭಾಗ. ಈ ಪ್ರಸ್ತಾರವು ಭಿತ್ತಿಯ ಸ್ತಂಭ ಅಥವಾ ಬೋದಿಗೆಯ ಮೇಲಿಂದ ಆರಂಭವಾಗುತ್ತದೆ ಮತ್ತು ಸ್ತಂಭದಿಂದ ಸ್ತಂಭಕ್ಕೆ ಸಂಪರ್ಕ ಕಲ್ಪಿಸುತ್ತದೆ.[೨೨] ಪ್ರಸ್ತಾರವನ್ನು ಮಂಚ, ಪ್ರಚ್ಛಾದನ, ಲುಪಾ ಎಂಬ ಹೆಸರುಗಳಿಂದಲೂ ಕರೆಯಲಾಗುತ್ತದೆ.[೨೩] ಪ್ರಸ್ತಾರದಲ್ಲಿ ಎತ್ತರ ಎಂಬುವ ಮೊದಲ ಅಂಗವಿರುತ್ತದೆ. ಇದು ಸರಳವಾಗಿದ್ದು ಭಿತ್ತಿಯಲ್ಲಿ ಇರುವ ಸ್ತಂಭಗಳ ಮೇಲೆ ಒಂದು ಸ್ತಂಭದಿಂದ ಇನ್ನೊಂದು ಸ್ತಂಭಕ್ಕೆ ಚಾಚಿದ ಪಟ್ಟಿಯಡಿರುವ ಅಂಗವಾಗಿದೆ.

ಪ್ರಸ್ತಾರದಲ್ಲಿ ಎತ್ತರ ವಾಜನ ವಲಭೀ ಕಪೋತ, ಆಲಿಂಗ ಅಂತರಿಕ, ಪ್ರತೀ ಮತ್ತು ವಾಜನ ಈ ಭಾಗಗಳು ಇರುತ್ತವೆ. ವಿಜಯನಗರ ಕಾಲದಲ್ಲಿ ವಲಭೀ ಭಾಗವಿದೆ. ಪದ್ಮಗಳು ಹೆಚ್ಚಾಗಿ ಕಂಡುಬರುತ್ತಿದ್ದು ಇವು ವಾಜನ ಮತ್ತು ಕಪೋತಗಳೆರಡನ್ನೂ ಸೇರಿಸುತ್ತವೆ.

ಪ್ರಸ್ತಾರದಲ್ಲಿ ಎರಡನೆಯ ಅಂಗವಾಗಿರುವ ವಾಜನವು ''ಉತ್ತರ'ದ ಮೇಲೆ ಬರುವ ಭಾಗವಾಗಿದೆ. ಇದರ ಮೇಲೆ 'ವಲಭೀ' ಎಂಬ ಭಾಗವಾಗಿದೆ. ವಾಜನ ಮತ್ತು ಕಪೋತಗಳ ನಡುವೆ ಇಳಿಜಾರಾಗಿ ಇರುವ ಸ್ಥಾನಕ್ಕೆ 'ವಲಭೀ' ಎಂದು ಹೆಸರು. 'ವಲಭೀ'ಯಲ್ಲಿ ಶಿಲ್ಪಗಳನ್ನು ಕೆತ್ತಲಾಗುತ್ತದೆ. ಇಲ್ಲಿ ಹಂಸಗಳನ್ನು ಕೆತ್ತಿದರೆ 'ಹಂಸವಲಭೀ' ಎಂದೂ ಭೂತ ನಾಯಕರಿದ್ದಾಗ 'ಭೂತವಲಭೀ' ಎಂದು ಕರೆಯಲಾಗುತ್ತದೆ. ವಿಜಯನಗರ ಕಾಲದಲ್ಲಿ ಕಂಡುಬರುವ ದೇವಾಲಯಗಳ ಈ 'ವಲಭೀ' ಭಾಗವು ಇರುತ್ತದೆ. ವಿಜಯನಗರ ಕಾಲದಲ್ಲಿ 'ವಲಭೀ' ಭಾಗದಲ್ಲಿ ಪದ್ಮದಳಗಳನ್ನು ಸಾಲಾಗಿ ಕೆತ್ತಿರುವುದನ್ನು ನಾವು ಕಾಣಬಹುದು.[೨೪]

**ಕಪೋತ :** ''ಕಪೋತ'' ಎಂಬುವುದು ಪ್ರಸ್ತಾರದಲ್ಲಿ ಮುಖ್ಯವಾದ ಅಂಗ. ವಲಭೀ ಮೇಲೆ ಹೊರಬಾಗಿದಂತೆ ಇದರ ರಚನೆ ಇರುತ್ತದೆ. ಮಳೆಯ ನೀರು 'ಭಿತ್ತಿ'ಯ ಮೇಲೆ ಬೀಳದಂತೆ ತಡೆಯಲು ಇದು ಸಹಾಯಕವಾಗುತ್ತದೆ. ಪ್ರಸ್ತಾರದಲ್ಲೇ ಇದು ಹೆಚ್ಚು ಹೊರಕ್ಕೆ ಚಾಚಿದ ಭಾಗವಾಗಿದೆ. ಆದ್ದರಿಂದ ಪ್ರಸ್ತಾರದಲ್ಲೇ ಎದ್ದುಕಾಣುವ ಭಾಗವಾಗಿದೆ. ವಿಜಯನಗರ ಕಾಲದ ದೇವಾಲಯಗಳಲ್ಲಿ ಕಪೋತವು ರೋಮನ್ ಲಿಪಿಯ 'ಎಸ್ ' ಅಕ್ಷರದಂತೆ ಕಂಡುಬರುತ್ತದೆ.[೨೫] ಆದರೆ ಮಂಟಪದ ಮೇಲೆ ಹೆಚ್ಚಾಗಿ ಈ ರೀತಿಯ ರಚನೆಯನ್ನು ಕಾಣಬಹುದು.

ಪ್ರಸ್ತಾರದಲ್ಲಿ 'ಉತ್ತರ'ದಿಂದ ಪ್ರಾರಂಭವಾಗುವ ಅಂಗಗಳು ಹೆಚ್ಚಾಗಿ 'ಕಪೋತ'ದವರೆಗೂ ಹೊರ ಚಾಚಿರುತ್ತವೆ. ವಾಜನವನ್ನು ಬಿಟ್ಟು ನಂತರದ ಭಾಗಗಳು ಹೆಚ್ಚು ಹೆಚ್ಚು ಒಳಗಡೆ ಸರಿದಿರುತ್ತವೆ. ಕಪೋತದ ಮೇಲೆ ಆಲಿಂಗ, ಆಂತರಿಕ ಮತ್ತು ಪ್ರತೀ ಎಂಬ ಭಾಗಗಳನ್ನು ಕಾಣಬಹುದು.

**ಗ್ರೀವ :** ಗ್ರೀವವು ಪ್ರಸ್ತರದ ಮೇಲಿನ ರಚನೆ. ಇದನ್ನು ಕಂಠ, ಕಂಧರ ಎಂದೂ ಕರೆಯುತ್ತಾರೆ. ಗ್ರೀವವು ದೇವಾಲಯ ರಚನಾ ಷಡ್ವರ್ಗ ಕ್ರಮದಲ್ಲಿ ನಾಲ್ಕನೆಯ ಭಾಗವಾಗಿದೆ. 'ಗ್ರೀವ'ದ ಮೇಲೆ ಶಿಖರವನ್ನು ರಚಿಸಲಾಗುತ್ತದೆ. ಗ್ರೀವದ ರಚನೆಯನ್ನು ಶಿಖರದ ಆಕಾರಕ್ಕೆ ತಕ್ಕಂತೆ ಬದಲಾವಣೆ ಮಾಡಿ ರಚಿಸಲಾಗುತ್ತದೆ. ಗ್ರೀವದಲ್ಲಿ "ಗ್ರೀವ ಪಿಂಡಿ" ಎಂದರೆ ಗ್ರೀವ ಗೋಡೆ ಎಂದು ಅರ್ಥ. ಗ್ರೀವದ ನಾಲ್ಕೂ ದಿಕ್ಕುಗಳಲ್ಲಿ ಕೋಷ್ಠಕಗಳಿರುತ್ತವೆ. ಈ ಕೋಷ್ಠಕಗಳಲ್ಲಿ ಉಬ್ಬುಶಿಲ್ಪಗಳನ್ನು ನೆಲೆಗೊಳಿಸಿರುತ್ತಾರೆ. ಗ್ರೀವದಲ್ಲಿ ರಚಿಸಲಾಗಿರುವ ಈ ಕೋಷ್ಠಕಗಳಿಗೆ "ಗ್ರೀವಕೋಷ್ಠ"ಗಳೆಂದು ಕರೆಯುತ್ತಾರೆ.[೭೬] ಈ ಕೋಷ್ಠಗಳಲ್ಲಿರುವ ಶಿಲ್ಪಗಳಿಗೆ 'ಗ್ರೀವ ದೇವತೆ' ಎಂದು ಹೆಸರು. ಸಾಮಾನ್ಯವಾಗಿ ವಿಜಯನಗರ ಕಾಲದ ಎಲ್ಲಾ ದೇವಾಲಯಗಳಲ್ಲೂ ಈ ಗ್ರೀವದ ರಚನೆ ಕಂಡುಬರುತ್ತದೆ. ಸಾಮಾನ್ಯವಾಗಿ ಬ್ರಹ್ಮರಂಧ್ರ ಶಿಲೆಯ ಮೇಲೆ ಈ ಗ್ರೀವದ ರಚನೆ ಕಂಡುಬರುತ್ತದೆ.[೭೭]

**ಶಿಖರ :** ಗ್ರೀವದ ಮೇಲೆ ರಚಿಸಲಾಗುವ ಗುಮ್ಮಟ ಆಕಾರದ ಭಾಗಕ್ಕೆ 'ಶಿಖರ' ಎಂದು ಹೆಸರು. ಶಿಖರವು ಊರ್ಧ್ವಮುಖ ದೇವಾಲಯ ರಚನಾಕ್ರಮದಲ್ಲಿ ಐದನೆಯ ಭಾಗವಾಗಿದೆ. ವಾಸ್ತುಶೈಲಿಯನ್ನು ನಿರ್ಧರಿಸುವಾಗ ಕಟ್ಟಡದ ಔನ್ನತಿಯನ್ನು ಪ್ರದರ್ಶಿಸುವ ಈ ಶಿಖರದ ವಿನ್ಯಾಸವನ್ನು ಪ್ರಧಾನವಾಗಿ ಗಮನಿಸಬೇಕು. 'ಶಿಲ್ಪರತ್ನ' ಮತ್ತು "ಈಶಾನ್ಯ ಶಿವಗುರು" ಎಂಬ ಶಾಸ್ತ್ರ ಗ್ರಂಥಗಳಲ್ಲಿ ಶಿಖರ ಪದದ ಉಲ್ಲೇಖವಿದೆ. 'ಶಿಲ್ಪರತ್ನ' ಮತ್ತು 'ಈಶಾನ್ಯ ಶಿವಗುರು' ಗ್ರಂಥಗಳು ನಾಗರವೆಂದರೆ, ಚಲುರಸ್ರ(ಚೌಕ) ವೇಸರವೆಂದರೆ ವೃತ್ತಾಕಾರದ್ದು. ದ್ರಾವಿಡವೆಂದರೆ ಬಹುಭುಜವುಳ್ಳದ್ದು ಅಂದರೆ ಆರು ಅಥವಾ ಎಂಟು ಭುಜ ಉಳ್ಳದ್ದೆಂದು ಹೇಳುತ್ತದೆ.[೭೮]

ಶಿಖರವು ಯಾವುದೇ ಆಕಾರದಲ್ಲಿದ್ದರೂ ಅದು 'ನಾಸಿ'ಗಳನ್ನು ಒಳಗೊಂಡಿರುತ್ತದೆ. ಇವು ಶಿಖರದ ನಾಲ್ಕು ದಿಕ್ಕುಗಳಲ್ಲಿ ಕಂಡುಬರುತ್ತವೆ. ಇವುಗಳಿಗೆ 'ಮಹಾನಾಸಿ' ಎಂದು ಕರೆಯಲಾಗುತ್ತದೆ. ಶಿಖರವು ಎಂಟು ಮುಖವಿದ್ದಾಗ 'ನಾಲ್ಕು ಮಹಾನಾಸಿ'ಗಳ ಪಕ್ಕದಲ್ಲಿ ಮತ್ತೆ ನಾಲ್ಕು 'ಅನುನಾಸಿ'ಗಳನ್ನು ರಚಿಸಲಾಗಿರುತ್ತದೆ.

ವಿಜಯನಗರ ಕಾಲದಲ್ಲಿ ಸಾಮಾನ್ಯವಾಗಿ ದ್ರಾವಿಡಶೈಲಿಯ ಶಿಖರಗಳನ್ನೇ ಕಾಣುತ್ತೇವೆ. ಇವು ಬಹುಬುಜಗಳನ್ನು ಹೊಂದಿದ ಶಿಖರವಾಗಿವೆ. ಈ ಕಾಲದಲ್ಲಿ ಕೆಲವೊಂದು ದೇವಾಲಯಗಳು ಕದಂಬ ನಾಗರಶೈಲಿಯಲ್ಲಿ ನಿರ್ಮಾಣಗೊಂಡಿವೆ. ಆದರೆ ಅವು ಜಿನಾಲಯಗಳು.[೭೯]

ವಿಜಯನಗರ ಕಾಲದಲ್ಲಿ ದೇವಾಲಯಗಳು ಶಿಖರಗಳನ್ನು ಹೊಂದಿವೆಯಾದರೂ ಇವುಗಳಿಗೆ ಅಷ್ಟೇನೂ ಪ್ರಾಮುಖ್ಯತೆ ಇಲ್ಲ.[೮೦] ಇದು ಬಹಳ ಎತ್ತರವಿಲ್ಲದ ಭಾಗವಾಗಿದೆ. ಶಿಖರದ ಮೇಲೆ ವೃತ್ತಾಕಾರದ ಇಲ್ಲವೇ ಅಷ್ಟಕೋನಾಕಾರ ಸ್ತೂಪಿ ಇದ್ದು ಅದರ ಮೇಲ್ಭಾಗದಲ್ಲಿ ಕಳಶವನ್ನು ಸ್ಥಾಪಿಸಲಾಗುತ್ತಿತ್ತು.

**ಸ್ತೂಪಿ :** ವಿಮಾನದ ಮೇಲ್ಭಾಗದಲ್ಲಿರುವ ಭಾಗಕ್ಕೆ ಸ್ತೂಪಿ ಎಂದು ಹೆಸರು, ಇದಕ್ಕೆ ಕುಂಬ, ಘಟ, ಕಲಶ ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಪ್ರಾಚೀನ ಭಾರತದ ದೇವಾಲಯಗಳ ಮೇಲೆ ಸ್ತೂಪಿಗಳ ಶಿಲೆಗಳಿಂದ ನಿರ್ಮಾಣವಾಗಿರುತ್ತವೆ. ಉತ್ತರ ಭಾರತದ ದೇವಾಲಯಗಳಲ್ಲಿ ಈಗಲೂ 'ಅಮಲಸಾರ' ಮೊದಲಾದವು ಶಿಲೆಯ ನಿರ್ಮಾಣಗಳೇ.[೮೧] ಆದ್ದರಿಂದ ಮೊದಲಿಗೆ ಸ್ತೂಪಿಗಳನ್ನು ಶಿಲೆಯಿಂದಲೇ ನಿರ್ಮಾಣ ಮಾಡಿರಬೇಕು. ತನ್ನ ಬದುಕಿನ ಎಲ್ಲಾ ರಂಗದಲ್ಲಿ ಶಿಲೆಯನ್ನು ಬಳಸಿದ ಮಾನವ ಸ್ತೂಪಿಯ ರಚನೆಯಲ್ಲೂ ಶಿಲೆಯನ್ನು ಬಳಸಿರುವ ಸಾಧ್ಯತೆ ಇದೆ. ಎತ್ತರವಾಗಿದ್ದ ವಿಮಾನಗಳ ಮೇಲೆ ಚೂಪಾದ ಈ ಭಾಗ ದೇವಾಲಯಗಳಿಗೆ ಅಗತ್ಯವಾಗಿಯೇ ಇತ್ತು. ನಂತರದ ಕಾಲಘಟ್ಟದಲ್ಲಿ ತಾಮ್ರ ಮತ್ತು ಹಿತ್ತಾಳೆ ಲೋಹದ ಹೊದಿಕೆಯಿರುವ ಸ್ತೂಪಿಗಳನ್ನು ಕಾಣುತ್ತೇವೆ. ಸ್ತೂಪಿಯು ಷಡ್ವರ್ಗ ಕ್ರಮದಲ್ಲಿ ಆರನೆಯ ಮತ್ತು ಕೊನೆಯ ಭಾಗ.[೮೨] ಇದು ಸಾಮಾನ್ಯವಾಗಿ ದುಂಡಾದ ಆಕಾರದಲ್ಲಿರುತ್ತದೆ. ಕೆಲವೊಂದು ಸಲ ದೇವಾಲಯದ ಒಟ್ಟು ವಿನ್ಯಾಸ ಅನುಸರಿಸಿ ಸ್ತೂಪಿಯನ್ನು ನಿರ್ಮಾಣ ಮಾಡಲಾಗುತ್ತದೆ. ವಿಜಯನಗರ ಕಾಲದಲ್ಲಿ ಶಿಖರಕ್ಕೆ ಅಷ್ಟೇನೂ ಪ್ರಾಮುಖ್ಯತೆಯನ್ನು ಕೊಟ್ಟಿರಲಿಲ್ಲ.[೮೩] ಆದರೂ ವಿಮಾನದ ಮೇಲೆ ಸ್ತೂಪಿ ಕಡ್ಡಾಯವಾಗಿ ಇರುತ್ತಿತ್ತು. ಸ್ತೂಪಿಯು ವಿಜಯನಗರ ಕಾಲದಲ್ಲಿ ವೃತ್ತಾಕಾರವನ್ನು ಕೆಲವೊಂದು ಸಲ ಅಷ್ಟಕೋನಾಕೃತಿಯ ರಚನೆಯನ್ನು ನೋಡಬಹುದು.

## ೩.೩. ವಿಜಯನಗರ ಕಾಲದಲ್ಲಿ ನಿರ್ಮಿಸಿದ ಶೈವ ದೇವಾಲಯಗಳ ಪಟ್ಟಿ

| ಕ್ರ.ಸಂ. | ದೇವಸ್ಥಾನವಿರುವ ಗ್ರಾಮ | ದೇವಾಲಯದ ಹೆಸರು | ಶಾಸನದ ಕಾಲ | ಶಾಸನದ ಉಲ್ಲೇಖ | ಕಟ್ಟಿಸಿದವರ ಹೆಸರು | ಇತರೆ ಉಲ್ಲೇಖ |
|---|---|---|---|---|---|---|
| ೧. | ಅರಸಿಕೇರಿ | ಮಲೇ ಮಲ್ಲೇಶ್ವರ | ಕ್ರಿ.ಶ.೧೩೬೮ | EC X, ಅರಸಿಕೇರಿ ೧ | ಮಹಾಜನಗಳು | |
| ೨. | ಹಂಪಿ | ಬರತೆಯ ಮೈಲಾರ | ಕ್ರಿ.ಶ.೧೩೮೦ | ಕವಿಶಾಸಂ ೩, ಹಂಪಿ ೩೬೫ | ಬುದ್ಧೆಯ ನಾಯ್ಕ | ಕೊಳವನು ಮಾಡಿಸಿ ದೇವಾಲಯ ನಿರ್ಮಿಸಿ ಭೂಮಿದಾನ ನೀಡಿದ್ದಾರೆ. |
| ೩. | ಅರಾಭಿಕೊತ್ತನೂರು | ವೀರಭದ್ರ | ಕ್ರಿ.ಶ.೧೪೦೪ | EC X, KI 73 | ಯರಗಿಶೆಟ್ಟಿ | ಭೂಮಿದಾನ |
| ೪. | ಗುಲಗಂಜಿ | ವಿಶ್ವೇಶ್ವರ | ಕ್ರಿ.ಶ.೧೪೦೮ | EC X GD 59 | ಗೋವಿಂದರಾಜ ಒಡೆಯರು | ಭೂಮಿದಾನ |
| ೫. | ಗೋಡಬಾನು | ಕಲ್ಲಿನಾಥ | ಕ್ರಿ.ಶ.೧೪೨೯ | EC XI CD.99 | ಗೋವಿಂದರಾಜ ಒಡೆಯರು ದಾನ ಮಾಡಿದ | ಭೂಮಿಯನ್ನು |
| ೬. | ನಿಂಬಾಪುರ | ಸೌಮ್ಯ ಸೋಮೇಶ್ವರ | ಕ್ರಿ.ಶ.೧೪೫೦ | SII, No.453, ಕ.ವಿ. ಶಾ.ಸಂ.೩, ನಂ.೪೭೩ | ಪ್ರೌಢದೇವರಾಯ | ಗ್ರಾಮದಾನ |
| ೭. | ತಿರುವದಿ ಕುಂದಾಪುರ ತಾಲ್ಲೂಕು | ಮಠದ ನಿರ್ಮಾಣ | ಕ್ರಿ.ಶ.೧೪೭೨ | SII, No.464 | ನಾರಾಯಣ ಶ್ಯಾನಭೋಗ | ಭೂಮಿದಾನ |
| ೮. | ಬಸರೂರು | ರುದ್ರಾಕ್ಷಿ ಒಡೆಯರ ಮಠ (ಮಹಾದೇವರ ಸನ್ನಿಧಿಯಲ್ಲಿ) | ಕ್ರಿ.ಶ.೧೪೮೭ | SII, No.473 | ಪಡುವಣಕೇರಿಯ ಶೆಟ್ಟಿಗಳು | ಭೂಮಿದಾನ |
| ೯. | ನಾಗೇನಹಳ್ಳಿ | ನಾಗೇಶ್ವರ ದೇವಾಲಯ | ಕ್ರಿ.ಶ.೧೫೧೬ | SII, No.504 | ಶ್ರೀಕೃಷ್ಣದೇವರಾಯ | ಗ್ರಾಮದಾನ |

| | | | | | | |
|---|---|---|---|---|---|---|
| ೧೦. | ಬಸರೂರು | ಮಠದ ನಿರ್ಮಾಣ | ಕ್ರಿ.ಶ.೧೫೧೯ | SII, No.511 | ತಿರುಮಳಶೆಟ್ಟಿ | ಭೂಮಿ ಮತ್ತು ಬಂಗಾರ ದಾನವಾಗಿ ನೀಡಲಾಯಿತು |
| ೧೧. | ಬಸರೂರು | ಮಠದ ನಿರ್ಮಾಣ | ಕ್ರಿ.ಶ.೧೫೨೦ | SII, No.512 | ತಿರುಮಲ ರಾವುತಿ | ಭೂಮಿದಾನ |
| ೧೨. | ಹೊಸಪೇಟೆ | ಕಾಶಿವಿಶ್ವನಾಥ ದೇವಾಲಯ | ಕ್ರಿ.ಶ.೧೫೨೧ | ಕ.ವಿ.ಶಾ.ಸಂ.೧ ಹೊಸಪೇಟೆ ತಾ.ನಂ.೪ | ಶ್ರೀಕೃಷ್ಣದೇವರಾಯ | ಭೂಮಿದಾನ |
| ೧೩. | ಕುರೆಕುಪ್ಪೆ | ವಿರೂಪಾಕ್ಷ ದೇವಾಲಯ (ಈಶ್ವರ ದೇವಾಲಯ) | ಕ್ರಿ.ಶ.೧೫೨೩ | SII, No.514 | ಹೆಗ್ಗರಸರನ ಮಕ್ಕಳು | ಭೂಮಿದಾನ ವೃತ್ತಿದಾನ |
| ೧೪. | ಹರಳಿಕೋಟೆ | ವೀರಭದ್ರ ದೇವಾಲಯ | ಕ್ರಿ.ಶ.೧೫೨೩ | EC VI CH No.99 | ಕೃಷ್ಣದೇವರಾಯನ ಮಂತ್ರಿ ಸಾಳವ | ಭೂಮಿಯನ್ನು ದಾನ ಮಾಡಿದ |
| ೧೫. | ಬಸರೂರು | ಮಠದ ನಿರ್ಮಾಣ | ಕ್ರಿ.ಶ.೧೫೨೮ | SII, No.525 | ಸೋವಣಶೆಟ್ಟಿಯ ಮಗ ಸಂಕರಸ ಶೆಟ್ಟಿ | ಭೂಮಿದಾನ |
| ೧೬. | ಹಂಪೆ | ನಾಗಭೂಷಣಲಿಂಗ | ಕ್ರಿ.ಶ.೧೫೩೩ | ಕ.ವಿ.ಶ.ಸಂ. ಹೊಸಪೇಟೆ | ತಿಮ್ಮಯ್ಯನು | |
| ೧೭. | ಹಾವಿನಹಾಳು ವಿರಾಪುರ | ಬುಕ್ಕೇಶ್ವರ | ಕ್ರಿ.ಶ.೧೫೩೪ | SII, No.565 | ಅಚ್ಯುತದೇವರಾಯ | ಗ್ರಾಮದಾನ |
| ೧೮. | ಕೋಗಳಿ | ವೀರಭದ್ರ ದೇವಾಲಯ | ಕ್ರಿ.ಶ.೧೫೩೪ | ಕ.ವಿ.ಶಾ.ಸಂ.೧ ಹಗರಿಬೊಮ್ಮನಹಳ್ಳಿ ೧೦ | ಕೊಟ್ಟೂರಿನ ತಿಪ್ಪೆಶೆಟ್ಟಿ ಮಕ್ಕಳಾದ ಬಸೆಟ್ಟಿ | |
| ೧೯. | ತಿಮ್ಮಲಾಪುರ(ಹೊಸಪೇಟೆ ತಾ.) | ತ್ರಿಕುಟಾಚಲ ಶಿವದೇವಾಲಯ | ಕ್ರಿ.ಶ.೧೫೩೯ | ಕ.ವಿ.ಶಾ.ಸಂ.೧ ಹೊಸಪೇಟೆ ತಾ.ನಂ.೫೩ | ಬಯಕಾರ ರಾಮಪ್ಪ | ಅಗ್ರಹಾರ ನಿರ್ಮಾಣ |

| | | | | | | |
|---|---|---|---|---|---|---|
| ೨೦. | ತಿಮ್ಮಲಾಪುರ(ಹೊಸಪೇಟೆ ತಾ.) | ಶ್ರೀಮಲ್ಲಿಕಾರ್ಜುನ ದೇವಾಲಯ | ಕ್ರಿ.ಶ.೧೫೩೯ | ಕ.ವಿ.ಶಾ.ಸಂ.೧ ಹೊಸಪೇಟೆ ತಾ.ನಂ.೫೦ | ಬಯಕಾರ ರಾಮಪ್ಪನ ಅಧಿಕಾರಿ ನಮಃ ಶಿವಾಯ | |
| ೨೧. | ಹಂಪೆ | ಮುದುವೀರಣ್ಣ(ಉದ್ದನ ವೀರಭದ್ರ) | ಕ್ರಿ.ಶ.೧೫೪೫ | ಕ.ವಿ.ಶ.ಸಂ.೩, ಸಂ.೮೪ | ಜಂಗಮಯ್ಯ | ಚಿನ್ನಾಭರಣಗಳ ದಾನ |
| ೨೨. | ಅನಂತಪುರಂ(ಹೊಸಪೇಟೆ ತಾಲ್ಲೂಕು) | ಮಲ್ಲಿಕಾರ್ಜುನ ದೇವಾಲಯ | ಕ್ರಿ.ಶ.೧೫೪೭ | SII, No.623 | ಹರಪಣ್ಣ | ಗ್ರಾಮದಾನ |
| ೨೩. | ಬಸರೂರು(ಸಣ್ಣಕೆರೆಕಟ್ಟೆ) | ಮಠದ ನಿರ್ಮಾಣ | ಕ್ರಿ.ಶ.೧೫೪೮ | SII, No.632 | ಕಲ್ಲುಶೆಟ್ಟಿ | ಭೂಮಿದಾನ |
| ೨೪. | ತಿಮ್ಮಲಾಪುರ | ಕಾಶಿವಿಶ್ವನಾಥ ದೇವಾಲಯ | ಕ್ರಿ.ಶ.೧೫೫೩ | ಕ.ವಿ.ಶಾ.ಸಂ.೧ ಹೊಸಪೇಟೆ ತಾ.ನಂ.೫೪ | ಲಕ್ಷ್ಮಣಭಟ್ಟರ ಹೆಂಡತಿ ಗೋಪಮ್ಮ | |
| ೨೫. | ಪುರ | ರಾಮೇಶ್ವರ | ಕ್ರಿ.ಶ.೧೬ನೇ ಶತಮಾನ | EC VIII HN.1 | ಗೋವಿಂದರಾಜ ಒಡೆಯರು | ಭೂಮಿದಾನ |
| ೨೬. | ಕನಕಗಿರಿ | ಪೇಟೆ ಬಸವಣ್ಣ | ಕ್ರಿ.ಶ. | ಕ.ವಿ.ಶಾಸಂ.೩ ಹಂಪಿ ೩೬೫ | | |

## ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರಗೊಂಡ ಶೈವ ದೇವಾಲಯಗಳ ಪಟ್ಟಿ

| ಕ್ರ.ಸಂ. | ದೇವಸ್ಥಾನವಿರುವ ಗ್ರಾಮ | ದೇವಾಲಯದ ಹೆಸರು | ಶಾಸನದ ಕಾಲ | ಶಾಸನದ ಉಲ್ಲೇಖ | ಕಟ್ಟಿಸಿದವರ ಹೆಸರು | ಇತರೆ ಉಲ್ಲೇಖ |
|---|---|---|---|---|---|---|
| ೦೧. | ಕುಡುತಿನಿ | ವೀರಭದ್ರ ದೇವಸ್ಥಾನ | ಕ್ರಿ.ಶ.೧೫೩೨ | SII, IX(ii) No.553 | ಕೊಂಡಪ್ಪ | ಭೂಮಿದಾನ |
| ೦೨. | ಕಂಪ್ಲಿ | ವಿರೂಪಾಕ್ಷ ದೇವಸ್ಥಾನ | ಕ್ರಿ.ಶ.೧೫೫೨ | SII, IX(ii) No.648 | ಯಜಮಾನ ಸಂಕರಸರು | ಗ್ರಾಮ ದಾನ |
| ೦೩. | ಶಂಕರನಾರಾಯಣ | ಶಂಕರನಾರಾಯಣ ದೇವಸ್ಥಾನ | ಕ್ರಿ.ಶ.೧೫೬೨ | SII, IX(ii) No.674 | ಕೆಳದಿ ಸದಾಶಿವರಾಯನಾಯಕ | ಭೂಮಿದಾನ |
| ೦೪. | ಕುರುಗೋಡು | ಬಸವಣ್ಣ ದೇವಸ್ಥಾನ | ಕ್ರಿ.ಶ.೧೫೧೨ | ಕವಿಶಾಸಂ ೧, ಬಳ್ಳಾರಿ ೧೦ | ಮಾದಪ್ಪನಾಯಕ ಮಗಳಾದ ಮಲ್ಲಮ್ಮ | ತೋಟವನ್ನು ದಾನವಾಗಿ ನೀಡಿದ್ದಾಳೆ |
| ೦೫. | ಹಂಪಿ | ವಿರೂಪಾಕ್ಷ ದೇವಸ್ಥಾನ | ಕ್ರಿ.ಶ.೧೫೧೦ | ಕವಿಶಾಸಂ ೩, ಬಳ್ಳಾರಿ ೩೪ | ಕೃಷ್ಣದೇವರಾಯ | ಭೂಮಿದಾನ |
| ೦೬. | ಮಳವಳ್ಳಿ | ಅರ್ಕೇಶ್ವರ ದೇವಸ್ಥಾನ | ಕ್ರಿ.ಶ.೧೪೬೫ | EC VII, ML.3 | ಪ್ರೌಢದೇವರಾಯ | ಗೋಪುರ ನಿರ್ಮಾಣ ಮತ್ತು ಚಿನ್ನವನ್ನು ದಾನವನ್ನು ನೀಡಲಾಗಿದೆ. |
| ೦೭. | ಕೆಳಗೇರಿ | ಮಲ್ಲಿಕಾರ್ಜುನ ದೇವಸ್ಥಾನ | ಕ್ರಿ.ಶ.೧೫೦೦ | EC VII, NG.58 | ದೇವರಾಯ | ನಂದಾದೀಪಕ್ಕೆ ದಾನ |
| ೦೮. | ನಾಗಮಂಗಲ | ವೀರಭದ್ರ ದೇವಸ್ಥಾನ | ಕ್ರಿ.ಶ.೧೫೪೯ | EC VII, NG.8 | ಕೃಷ್ಣದೇವರಾಯ | ಪುನರುಜ್ಜೀವನ |

# ಕರ್ನಾಟಕ ಶೈವ ದೇವಾಲಯಗಳ ಕೋಷ್ಟಕ

## ಉಡುಪಿ ಜಿಲ್ಲೆ

| | | | |
|---|---|---|---|
| ಬಾರಕೂರು | ಪಂಚಲಿಂಗೇಶ್ವರ | | |
| ಹುಲಿಯಾರು | ಸಿದ್ದೇಶ್ವರ | ARSIE., 1931-32;283 | |
| ಹುಲಿಯಾರು | ಮಹಾಲಿಂಗೇಶ್ವರ | ARSIE., 1931-32;317 | |
| ಉದಯವರ | ಬೈರವ | ARSIE., 1901., 108-C | |

## ಉತ್ತರ ಕನ್ನಡ ಜಿಲ್ಲೆ

ಭಟ್ಕಳ ತಾಲ್ಲೂಕು

| | | | |
|---|---|---|---|
| ಮೂಡಣಭಟ್ಕಳ | ಶಂಕರ ನಾರಾಯಣ | PRICI-1930-40. Ki., 111.7 | |
| ಮುರುಡೇಶ್ವರ | ಮುರುಡೇಶ್ವರ | PRICI-1939-40. 73;Ki. III-10 | |

## ಕೋಲಾರ

ಬಂಗಾರು ಪೇಟೆ ತಾಲ್ಲೂಕು

| | | | |
|---|---|---|---|
| ಬೂದಿಕೋಟೆ | ಸೋಮೇಶ್ವರ | | |
| ರಾಮಸಾಗರ | ವಿರೂಪಾಕ್ಷ | EC X BP 11 | ೧೫ನೇ ಶತಮಾನ |
| ರಾಮಸಾಗರ | ವೀರಭದ್ರ | 1941 P-54 | ೧೫ನೇ ಶತಮಾನ |
| ತಾಳಪಳ್ಳಿ | ಸೋಮೇಶ್ವರ | EC X BP 14 | |

| | | | |
|---|---|---|---|
| **ಚಿಕ್ಕಬಳ್ಳಾಪುರ ತಾಲ್ಲೂಕು** | | | |
| ನಂದಿ | ಭೋಗ ನಂದೇಶ್ವರ | 1914 P-12 | |
| **ಚಿಂತಾಮಣಿ ತಾಲ್ಲೂಕು** | | | |
| ಕೈವಾರ | ಭೀಮೇಶ್ವರ | EC X Ct. 94;<br>1935. P-36 | |
| **ಗೌರಿಬಿದನೂರು ತಾಲ್ಲೂಕು** | | | |
| ಬೊಮ್ಮಸಂದ್ರ | ಸೋಮೇಶ್ವರ | EC X Gd-61 | ೧೫೨೩ |
| ಗುಲಗಂಜಿ | ವಿಶ್ವೇಶ್ವರ | EC X Gd-59 | ೧೪೦೮ |
| ಹಲ್ಲೂರು | ಸೋಮೇಶ್ವರ | EC X Gd-68 | ೧೫೦೫ |
| **ಕೋಲಾರ ತಾಲ್ಲೂಕು** | | | |
| ದೊಮ್ಮಸಂದ್ರ | ಸೋಮನಾಥ | EC X Kl-22 | ೧೩೫೭ |
| ಅರಾಭಿಕೊತ್ತನೂರು | ವೀರಭದ್ರ | EC X Kl-73 | ೧೪೦೪ |
| ಕೋಲಾರ | ಸೋಮೇಶ್ವರ | 1902. P-10 | ೧೪ನೇ ಶತಮಾನ |
| ಸುಳಿದೇನಹಳ್ಳಿ | ಗೌರೀಶ್ವರ | EC X Kl-22 | |
| ವಕ್ಕಾಲೇರಿ | ಮಾರ್ಕಂಡೇಶ್ವರ | EC X Kl-122 | |
| ಬೆಳ್ಳೂರು | ಕಾಮೇಶ್ವರ (ಈಶ್ವರ) | EC XVII MR-147. | 1941 |

**ಮಳುಬಾಗಿಲು ತಾಲ್ಲೂಕು**

| | | | | |
|---|---|---|---|---|
| ಗುಡಿಪಲ್ಲಿ | ಸೋಮೇಶ್ವರ | EC X Mb-237 | ೧೫ನೇ ಶತಮಾನ | |
| ಕವಟನಹಳ್ಳಿ | ಸೋಮೇಶ್ವರ | EC X Mb-29 | | |
| ವಿರೂಪಾಕ್ಷಿ | ವಿರೂಪಾಕ್ಷ | EC X Mb-96 | | |
| ಮಳುಬಾಗಿಲು | ವಿದ್ಯಾಶಂಕರ | EC X Mb-11 P-30 | | |
| ಕುರುಡುಮಲ್ಲೆ | ಗಣೇಶ | ........................ | | |
| ಕುರಡಮಲ್ಲೆ | ನಟೇಶ್ವರ | ....................... | | |
| ಕುರುಡುಮಲ್ಲೆ | ಸೋಮೇಶ್ವರ | | | |

**ಶಿಡ್ಲಗಟ್ಟ ತಾಲ್ಲೂಕು**

| | | | | |
|---|---|---|---|---|
| ಇರುಗಪ್ಪನಹಳ್ಳಿ | ಬಸವಣ್ಣ | EC X Sd-99 | | |
| ಸದಲಿ | ಈಶ್ವರ | 1941 P-41 | | |

## ಚಾಮರಾಜನಗರ ಜಿಲ್ಲೆ

**ಚಾಮರಾಜನಗರ ತಾಲ್ಲೂಕು**

| | | | | |
|---|---|---|---|---|
| ಹರಳುಕೋಟೆ | ವೀರಭದ್ರ | EC., IV., 1975 Ch-387 | ಕ್ರಿ.ಶ. ೧೫೨೩ | ಸಾಳುಗೋವಿಂದ |
| ಹೊಮ್ಮ | ಮೂಲಶಾಂತೇಶ್ವರ | EC., IV., 1975 Ch-148 | ೧೪ನೇ ಶತಮಾನ | ಕಂಪರಸ |
| ಕುದೇರು | ಮಲ್ಲಿಕಾರ್ಜುನ | EC., IV., 1975 Ch-356 | ೧೫ನೇ ಶತಮಾನ | |
| ಉಮ್ಮತ್ತೂರು | ಭುಜಂಗೇಶ್ವರ | ARSIE 1917., P-13 | ೧೬ನೇ ಶತಮಾನ | |

| | | | | |
|---|---|---|---|---|
| **ಗುಂಡ್ಲುಪೇಟೆ ತಾಲ್ಲೂಕು** | | | | |
| ತೆರಕಣಾಂಬಿ | ಮೂಲಸ್ಥಾನೇಶ್ವರ | ARSIE 1917., P-23 | ೧೫ನೇ ಶತಮಾನ | ರಥೋತ್ಸವ |
| ತ್ರಿಯಂಬಕಪುರ | ತ್ರಿಯಂಬಕೇಶ್ವರ | EC., III., 1974., G-135 | ೧೫ನೇ ಶತಮಾನ | ಸಾಳುಗೋವಿಂದರಾಜ ದಾನ ನೀಡಿದ್ದು |
| **ಯಳಂದೂರು ತಾಲ್ಲೂಕು** | | | | |
| ಯಳಂದೂರು | ಗೌರೀಶ್ವರ | EC., III., 1974 | | |
| | | **ಚಿಕ್ಕಮಗಳೂರು ಜಿಲ್ಲೆ** | | |
| **ಚಿಕ್ಕಮಗಳೂರು ತಾಲ್ಲೂಕು** | | | | |
| ಖಾಂಡ್ಯ | ಮಾರ್ಕಾಂಡೇಶ್ವರ | EC. XI, No. 184. P-116 | ೧೫೩೯ | ಅಚ್ಯುತದೇವರಾಯ |
| ಕುರುವಂಗಿ | ರಾಮೇಶ್ವರ | EC. XI, CM 85 | ೧೫೪೯ | ರಾಮರಾಯ ಸದಾಶಿವರಾಯ |
| **ಕಡೂರು ತಾಲ್ಲೂಕು** | | | | |
| ಬಲಸೂರು | ರಾಮೇಶ್ವರ | EC. VI Kd-31 | ೧೬ನೇ ಶತಮಾನ | |
| **ಕೊಪ್ಪ ತಾಲ್ಲೂಕು** | | | | |
| ಬಾಳೇಹಳ್ಳಿ | ವೀರಭದ್ರ | ARSIE 1916 P-10 | ೧೩೬೮ | |
| ಲಿಂಗಾಪುರ | ವಿರೂಪಾಕ್ಷಲಿಂಗ | EC., VI KP 17 | ೧೫೫೩ | |

| | | | | |
|---|---|---|---|---|
| **ನರಸಿಂಹರಾಜ ಪುರ ತಾಲ್ಲೂಕು** | | | | |
| ಬಾಳೇಹೊನ್ನರು | ವೀರಭದ್ರ | | ೧೬ನೇ ಶತಮಾನ | |
| ಕಳಸ | ಕಳಕೇಶ್ವರ | EC. VI, Mg-41 | ೧೬ನೇ ಶತಮಾನ | |
| **ಶೃಂಗೇರಿ ತಾಲ್ಲೂಕು** | | | | |
| ಹಲಗೂರು | ಮಲ್ಲಿಕಾರ್ಜುನ | -------------- | ೧೫ನೇ ಶತಮಾನ | |
| ಶೃಂಗೇರಿ | ವಿದ್ಯಾಶಂಕರ | EC.XI ಶಂ.೧ P-೨೪೧ | ೧೩೪೬ | ಗ್ರಾಮಗಳ ದಾನ |

## ಚಿತ್ರದುರ್ಗ ಜಿಲ್ಲೆ

| | | | |
|---|---|---|---|
| **ಚಳ್ಳಿಕೇರಿ ತಾಲ್ಲೂಕು** | | | |
| ಕಮ್ಮಸಮುದ್ರ | ಮೈಲಾರ ವೀರಭದ್ರ | EC.XI Cl. 461 | |
| **ಚಿತ್ರದುರ್ಗ ತಾಲ್ಲೂಕು** | | | |
| ಚಿತ್ರದುರ್ಗ | ಸಂಪಿಗೆ ಸಿದ್ದೇಶ್ವರ | EC.XI cd.2., 1929, P-15 | |
| ಚಿತ್ರದುರ್ಗ | ಹಿಡಂಬೇಶ್ವರ | EC.XI cd.14., 1929, P-15 | ೧೪೧೧ |
| ಗೋಡಬಾನು | ಕಲ್ಲಿನಾಥ | EC.XI cd.2., 29 | ೧೪೨೯ |
| **ಹಿರಿಯೂರು ತಾಲ್ಲೂಕು** | | | |
| ಸೋಮೇರ ಹಳ್ಳಿ | ಸೋಮೇಶ್ವರ | EC.XI Hr-52 | |

| | | | |
|---|---|---|---|
| **ಹೊಳಲ್ಕೆರೆ ತಾಲ್ಲೂಕು** | | | |
| ಡುಮಿ | ವೀರಭದ್ರ | EC.XI HK-15 | ೧೫೩೦ |
| ಗಂಧೇರಿ | ವೀರಭದ್ರ | EC.XI HK-20 | ೧೫೩೦ |
| ಕಡುರು | ವೀರಭದ್ರ | EC.XI HK-71 | ೧೫೪೦ |
| **ಜಗಲೂರು ತಾಲ್ಲೂಕು** | | | |
| ಕೊಡದಗುಡ್ಡ | ವೀರಭದ್ರ | ------------------- | ೧೬ನೇ ಶತಮಾನ |
| **ಮೊಳಕಾಲ್ಮೂರು ತಾಲ್ಲೂಕು** | | | |
| ಜಟಂಗ ರಾಮಶ್ವೇರ | ಜಟಂಗ | EC.XI MK-31 | ೧೪ನೇ ಶತಮಾನ |

## ತುಮಕೂರು ಜಿಲ್ಲೆ

| | | | |
|---|---|---|---|
| **ಗುಬ್ಬಿ ತಾಲ್ಲೂಕು** | | | |
| ಬಿದರೆ | ಕಲ್ಲೇಶ್ವರ | EC XII Gb. 561 | ೧೪೩೦ |
| ಸಂಪಿಗೆ | ಮಲ್ಲಿಕಾರ್ಜುನ | EC XII Gb. 29 | ೧೪೭೦ |
| **ಕುಣಿಗಲ್ಲು ತಾಲ್ಲೂಕು** | | | |
| ಸೋಮದೇವರ ಪಾಳ್ಯ | ಚಂದ್ರಮೌಳೇಶ್ವರ | EC XII Kg. 44 | ೧೬ನೇ ಶತಮಾನ |
| ಅಮೃತೂರು | ಚಂದ್ರಮೌಳೇಶ್ವರ | ARSIE 1945 P-57 | |
| ಕುಣಿಗಲ್ಲು | ಸೋಮೇಶ್ವರ | ARSIE 1919 P-131 | |
| ಎಡೆಯೂರು | ಸಿದ್ಧಲಿಂಗೇಶ್ವರ | EC XII Kg-49 | ೧೪೮೦ |

| | | | |
|---|---|---|---|
| **ಪಾವಗಡ ತಾಲ್ಲೂಕು** | | | |
| ಹರಿಹರಪುರ | ಹರಿಹರೇಶ್ವರ | EC XII. P-33 | ೧೬ನೇ ಶತಮಾನ |
| **ಶಿರಾ ತಾಲ್ಲೂಕು** | | | |
| ಕಲ್ಲಶೆಟ್ಟಿಹಳ್ಳಿ | ಶಿವ | EC XII SI. 100 | |
| ನಡುರ | ಕಲ್ಲೇಶ್ವರ | EC XII SI. 51 | ೧೬ನೇ ಶತಮಾನ |
| ತಾಯುರು | ಮಲ್ಲೇಶ್ವರ | EC XII SI. 105 | ೧೩೯೦ |
| **ತುಮಕೂರು ತಾಲ್ಲೂಕು** | | | |
| ಬೈರಸಂದ್ರ | ಬಸವಣ್ಣ | ...................... | ೧೬ನೇ ಶತಮಾನ |
| ಕೊತ್ನಹಳ್ಳಿ | ಕೋಡಿ ಬಸವಣ್ಣ | EC XII TM-3 | ೧೫೧೫ |
| | | **ದಕ್ಷಿಣ ಕನ್ನಡ ಜಿಲ್ಲೆ** | |
| **ಕುಂದಾಪುರ ತಾಲ್ಲೂಕು** | | | |
| ಹೊಸ ಅಂಗಡಿ | ನೀಲಕಂಠೇಶ್ವರ | ARIE 1978-79-172 | ೧೫೪೧ |
| ಹೊಸ ಅಂಗಡಿ | ವಿರೂಪಾಕ್ಷ | ARIE 1978-79-173 | |
| ಬಸರೂರು | ಮಹಾಲಿಂಗೇಶ್ವರ | S.II., IX., (ii) No.525 | ೧೫೨೮ |
| ಬಸರೂರು | ಮಠ | S.II., IX., (ii) No.511 | ೧೫೧೯ |

| | | | |
|---|---|---|---|
| **ಮಂಗಳೂರು ತಾಲ್ಲೂಕು** | | | |
| ಕದ್ರಿ | ಮಂಜುನಾಥ | S.I.I., VII., 190 | |
| ಕರ್ನಾಡ | ಶಿವ | ARSIE., 1901., 85.,<br>S.I.I. IV (ii) 205 | |
| **ಪುತ್ತೂರು ತಾಲ್ಲೂಕು** | | | |
| ಪುತ್ತೂರು | ಮಹಾಲಿಂಗೇಶ್ವರ | ARSIE., 1930-31;344 | ೧೫ನೇ ಶತಮಾನ |
| **ಕುಮಟ ತಾಲ್ಲೂಕು** | | | |
| ಥನ್ಯ | ಈಶ್ವರ | ARIE., 1970-71., 183 | |

**ದಾವಣಗೆರೆ ಜಿಲ್ಲೆ**

| | | | |
|---|---|---|---|
| **ಹರಿಹರ ತಾಲ್ಲೂಕು** | | | |
| ಹರಿಹರ | ದೇಮೇಶ್ವರ | EC.XI Dg-46 | |
| **ಹರಪನಹಳ್ಳಿ ತಾಲ್ಲೂಕು** | | | |
| ಬಾಗಳಿ | ವೀರಭದ್ರ | S.I.I. | ೧೬ನೇ ಶತಮಾನ |
| **ಚನ್ನಗಿರಿ ತಾಲ್ಲೂಕು** | | | |
| ನಿಟಗೇರಿ | ವೀರಭದ್ರ | EC.,VII Ci-28 | ೧೪ನೇ ಶತಮಾನ |
| ಸೂಳೆಕೆರೆ | ಸಿದ್ದೇಶ್ವರ | ARSIE 1937 P-57 | |

**ಹೊನ್ನಾಳಿ ತಾಲ್ಲೂಕು**

| | | | | | |
|---|---|---|---|---|---|
| | ಕುರುವದ ಗಡ್ಡೆ | ರಾಮೇಶ್ವರ | EC.,VII HI-6 | ೧೩೯೦ | |
| | ಮಲೆಬೆನ್ನೂರು | ಬೈರವ ದೇವರ ದೇವಸ್ಥಾನ | ಟಿ.ಗಿರಿಜಾ; ಇದು ನಮ್ಮ ಜಿಲ್ಲೆ ಪುಟ. ೪೪೯ | ೧೪೩೮ | ಗ್ರಾಮದಾನ |

## ಬಳ್ಳಾರಿ ಜಿಲ್ಲೆ

**ಬಳ್ಳಾರಿ ತಾಲ್ಲೂಕು**

| ಕ್ರ.ಸಂ. | ಗ್ರಾಮದ ಹೆಸರು | ದೇವಸ್ಥಾನದ ಹೆಸರು | ಶಾಸನೀಯ ಉಲ್ಲೇಖ | ಕಾಲ | ಇತರೆ |
|---|---|---|---|---|---|
| ೦೧. | ಚಿಟಿಕಿನಹಾಳು | ಪ್ರಸನ್ನ ವಿರೂಪಾಕ್ಷ | SII, IX(ii) No.559 | ೧೬ನೇ | ಅಚ್ಯುತರಾಯ |
| ೦೨. | ಹಾವಿನಾಳು, ವೀರಾಪುರ | ವೀರಭದ್ರ | ಕವಿಶಾಸಂ.೧, ಬಳ್ಳಾರಿ ೬೬ SII, IX(ii) No.553 | ೧೫೩೨ | ಅಚ್ಯುತರಾಯ |
| ೦೩. | ಕುರುಗೋಡು | ಬಸವೇಶ್ವರ | ಕವಿಶಾಸಂ.೧, ಬಳ್ಳಾರಿ ೧೭ | ೧೫೨೮ | ಕೃಷ್ಣದೇವರಾಯ |

**ಹೂವಿನ ಹಡಗಲಿ**

| | | | | | |
|---|---|---|---|---|---|
| ೦೧. | ತಿಮ್ಮಲಾಪುರ | ಮಲ್ಲಿಕಾರ್ಜುನ | ARSIE, 1918, 304 | ೧೫೪೯ | |
| | ತಿಮ್ಮಲಾಪುರ | ಶಿವ | ARSIE, 1918, 304 | ೧೫೪೯ | |
| | ಸೋಗಿ | ಕಲ್ಲಿನಾಥ | SII, IX(ii) No.503 | ೧೫೧೬ | |

**ಹೊಸಪೇಟೆ ತಾಲ್ಲೂಕು**

| | | | | | |
|---|---|---|---|---|---|
| ೦೧. | ಹಂಪಿ ಹೇಮಕೂಟದ ಶಿವದೇವಾಲಯ | ಹೇಮಕೂಟದ ಶಿವ ದೇವಸ್ಥಾನ | ARSIE, 1907, 501 | ೧೪೯೭ | |
| | ಹಂಪಿ | ವಿರೂಪಾಕ್ಷ ದೇವಸ್ಥಾನ | VPR., 1983-84, No.13 | | |
| | ಹಂಪಿ | ಚಂದ್ರಮೌಳೇಶ್ವರ | Art Jurnal Mysore University C.IV., Pp.197-202 | | |
| | ಹಂಪಿ | ಮುದ್ದುವೀರಣ್ಣ | SII, IX(ii), 266 | ೧೫೪೫ | ಜಂಗಮಯ್ಯ |
| | ಹಂಪಿ | ಪ್ರಸನ್ನ ವಿರೂಪಾಕ್ಷ | ARSIE, 1907, 500 | ೧೬ನೇ ಶತಮಾನ | |
| | ಬುಕ್ಕಸಾಗರ | ವಿರೂಪಾಕ್ಷ | MAR, 1913, P.120<br>ಕವಿಶಾಸಂ.೧, ಹೊಸಪೇಟೆ ೪೦ | | ಅಣ್ಣಪ್ಪೊಡೆಯ ಭೂಮಿದಾನ |
| | ಹೊಸಪೇಟೆ | ಸಣ್ಣಕ್ಕಿ ವೀರಭದ್ರ | SII, IX(ii), 539 | ೧೫೩೧ | ಅಚ್ಯುತದೇವರಾಯ |
| | ಹೊಸಪೇಟೆ | ಕಾಶಿವಿಶ್ವನಾಥ | ಕವಿಶಾಸಂ.೧, ಹೊಸಪೇಟೆ<br>SII, XVII, No.24 | ೧೫೪೦ | ಅಚ್ಯುತದೇವರಾಯ |
| | ಕುರೇಕುಪ್ಪೆ | ಈಶ್ವರ | ARSIE, 1922, N0.727 | ೧೫೨೩ | |
| | ಕಂಪ್ಲಿ | ಪಂಪಾಪತಿ | SII, XVII, No.29 | ೧೫೫೨ | |
| | ಮಲ್ಲಪನಗುಡಿ | ಮಲ್ಲಿಕಾರ್ಜುನ | ಕವಿಶಾಸಂ.೧, ಹೊಸಪೇಟೆ | | |
| | ನಿಂಬಾಪುರ | ಸೌಮ್ಯಸೋಮೇಶ್ವರ | SII, XVII, No.26 | ೧೪೫೦ | ಅರವಟ್ಟಿಗೆ ಸ್ಥಾಪನೆ |
| | ತಿಮ್ಮಲಾಪುರ | ತ್ರಿಕೂಟಾಚಲ ಶಿವದೇವಾಲಯ | ಕವಿಶಾಸಂ.೧, ಹೊಸಪೇಟೆ ೫೩ | ೧೫೫೮ | ಎರಡನೆಯ ದೇವರಾಯ |

| | | | | |
|---|---|---|---|---|
| ತಿಮ್ಮಲಾಪುರ | ಮಲ್ಲಿಕಾರ್ಜುನ | ಕವಿಶಾಸಂ.೧, ಹೊಸಪೇಟೆ ೫೦ | ೧೫೩೯ | ಬಯಕಾರ ರಾಮಪ್ಪಯ್ಯ |
| ತಿಮ್ಮಲಾಪುರ | ವೀರಭದ್ರ | ಕವಿಶಾಸಂ.೧, ಹೊಸಪೇಟೆ ೫೩ | ೧೫೩೯ | ಬಯಕಾರ ರಾಮಪಯ್ಯ |
| ತಿಮ್ಮಲಾಪುರ | ಕಾಶಿವಿಶ್ವನಾಥ | ಕವಿಶಾಸಂ.೧, ಹೊಸಪೇಟೆ ೫೪ | ೧೫೫೩ | ಗೋಪಮ್ಮ |
| ಅಂತಾಪುರ | ಮಲ್ಲಿಕಾರ್ಜುನ | ಕವಿಶಾಸಂ.೧, ಹೊಸಪೇಟೆ ೨೨ | ೧೫೪೭ | ಹರಪಣ್ಣ |
| **ಹಗರಿಬೊಮ್ಮನಹಳ್ಳಿ ತಾಲ್ಲೂಕು** | | | | |
| ಕೋಗಳಿ | ವೀರಭದ್ರ | ಕವಿಶಾಸಂ.೧, ಎಚ್.ಬಿ.ಹಳ್ಳಿ ೧೦ | ೧೫೩೪ | ತಿಪ್ಪೇಶೆಟ್ಟಿ |
| **ಸೊಂಡೂರು ತಾಲ್ಲೂಕು** | | | | |
| ಅಂತಪುರ | ಮಲ್ಲಿಕಾರ್ಜುನ ದೇವಾಲಯ | ಕವಿಶಾಸಂ.೧, ಸೊಂಡುರೂ ೧<br>SII, IX(ii), No.623 | ೧೬ನೇ | ತಿಮ್ಮರಸಯ್ಯ |
| ಕುರೇಕುಪ್ಪೆ | ವಿರೂಪಾಕ್ಷ ದೇವಾಲಯ | ಕವಿಶಾಸಂ.೧, ಸೊಂಡೂರು ೨೦ | ೧೫೨೩ | ಭೂಮಿದಾನ |
| ಚೋರನೂರು | ವೀರಭದ್ರ | ಕವಿಶಾಸಂ.೧, ಸೊಂಡೂರು ೨೩ | | |
| **ಕೂಡ್ಲಿಗಿ ತಾಲ್ಲೂಕು** | | | | |
| ಗಜಾಪುರ | ವಸಂತ ಮಲ್ಲಿಕಾರ್ಜುನ | ಕವಿಶಾಸಂ.೧, ಕೂಡ್ಲಿಗಿ ೪ | ೧೫೫೨ | ಗ್ರಾಮದಾನ |

**ಬೆಂಗಳೂರು ಜಿಲ್ಲೆ**

| | | | | |
|---|---|---|---|---|
| **ಬೆಂಗಳೂರು ತಾಲ್ಲೂಕು** | | | | |
| ಚಿಕ್ಕಬೆಟ್ಟನಹಳ್ಳಿ | ಸೋಮೇಶ್ವರ | EC. IX, BN.73 | ೧೪ನೇ ಶತಮಾನ | |
| ಅಲಸೂರು | ಸೋಮೇಶ್ವರ | EC. IX, BN.73 | ೧೪ನೇ ಶತಮಾನ | |
| ಬೆಂಗಳೂರು | ಗವಿಗಂಗಾಧರೇಶ್ವರ | EC. IX, BN.73 | ೧೪ನೇ ಶತಮಾನ | |

| | | | | |
|---|---|---|---|---|
| **ಚನ್ನಪಟ್ಟಣ ತಾಲ್ಲೂಕು** | | | | |
| ಚನ್ನಪಟ್ಟಣ | ನೀಲಕಂಠೇಶ್ವರ | ARSIE, 1909, P.10 | ೧೫ನೇ ಶತಮಾನ | |
| ಕೃಷ್ಣಪುರ | ಈಶ್ವರ | EC., IX, Bn.sup.cp.224 | | |
| **ಹೊಸಕೋಟೆ ತಾಲ್ಲೂಕು** | | | | |
| ಗುಬ್ಬಿ | ಸೋಮೇಶ್ವರ | EC. IX, HT.144 | ೧೪೨೯ | |
| ಹೊಸಳ್ಳಿ | ದೇಮೇಶ್ವರ | EC. IX, HT.34 | ೧೯ನೇ ಶತಮಾನ | |
| ನಂದಗುಡಿ | ಮಲ್ಲೇಶ್ವರ | ARSIE, 1941, P.71 | ೧೯ನೇ ಶತಮಾನ | |
| **ಕನಕಪುರ ತಾಲ್ಲೂಕು** | | | | |
| ಬನ್ನಿಮುಕ್ಕೊಂಡ್ಲು | ರಾಮೇಶ್ವರ | EC. IX, KN No.59 | ೧೫೩೩ | |
| ಚೌಡಳ್ಳಿ | ಬಸವ | EC. IX, KN No.61 | ೧೯ನೇ ಶತಮಾನ | |
| **ನೆಲಮಂಗಲ ತಾಲ್ಲೂಕು** | | | | |
| ಹೆಸರಗಟ್ಟ | ಚಂದ್ರಮೌಳೇಶ್ವರ | EC. IX, NI No.31 | ೧೫೩೩ | |
| ಶಿವಗಂಗೆ | ಗಂಗಾಧರ | ARSIE, 1915, P.10 | ೧೯ನೇ ಶತಮಾನ | |
| | | **ಮೈಸೂರು ಜಿಲ್ಲೆ** | | |
| **ಹೆಗ್ಗಡ ದೇವನಕೋಟೆ** | | | | |
| ಸಾಗರೆ | ಶಂಕರೇಶ್ವರ | EC., III., 1974., Hg-91 | ೧೫ನೇ ಶತಮಾನ | ಗೋವಿಂದಾಚಾರ್ಯ ದಾನ ನೀಡಿದ್ದು |

| | | | | |
|---|---|---|---|---|
| **ಮೈಸೂರು ತಾಲ್ಲೂಕು** | | | | |
| ಸಿಂಧುವಳ್ಳಿ | ಸೋಮೇಶ್ವರ | EC., III., 1974., My-199 | | |
| **ನಂಜನಗೂಡು ತಾಲ್ಲೂಕು** | | | | |
| ನಂಜನಗೂಡು | ಶ್ರೀಕಂಠೇಶ್ವರ | EC., III., 1974., Ng | | |
| ನೇರಳೆ | ವೀರಭದ್ರ | EC., III., 1974., NJ-335 | ೧೫ನೇ ಶತಮಾನ | |

**ಮಂಡ್ಯ ಜಿಲ್ಲೆ**

| | | | | |
|---|---|---|---|---|
| **ಕೃಷ್ಣರಾಜ ಪೇಟೆ ತಾಲ್ಲೂಕು** | | | | |
| ಸಂತೇಬಾಚನಹಳ್ಳಿ | ವೀರಭದ್ರ | EC VI., 1977, Kr., 64 | | |
| ಆಲೂರು | ಬಸವ | EC VII., Mu-58 | ೧೫೫೭ | ರಾಮರಾಯ |
| ಬೊಪ್ಪಸಂದ್ರ | ಸಿದ್ದೇದೇವರು | EC VII., Mu-110 | ೧೪ನೇ ಶಥಮಾನ | ಮಲ್ಲಿಕಾರ್ಜುನ |
| ರಾಂಮ್‌ಪುರ | ರಾಮೇಶ್ವರ | EC VII., Mu-24 | ೧೫ನೇ ಶತಮಾನ | |
| **ಮಳವಲ್ಲಿ ತಾಲ್ಲೂಕು** | | | | |
| ಬೆಳಕವಾಡಿ | ಶಂಭುಲಿಂಗನಗುಡಿ | EC VII., Ml-96 | ೧೫ನೇ ಶತಮಾನ | ಗ್ರಾಮದಾನ |
| ಕುಂದೂರು | ಮೂಲಶಾಂತೇಶ್ವರ | EC VII., M1-129 | ೧೪ನೇ ಶತಮಾನ | ವೀರಚಿಕ್ಕರಾಜ ದತ್ತಿನೀಡಿದ್ದು |
| ಮಳವಳ್ಳಿ | ಅರ್ಕೇಶ್ವರ | EC VII., M1-3 | ೧೪೬೫ | ನಂದಾದೀಪಕ್ಕೆ ದಾನ |
| ಮಾರೇಹಳ್ಳಿ | ಅಮೃತೇಶ್ವರ | EC VII., No.-78 | ೧೫೩೦ | ಅಚ್ಚುತದೇವರಾಯ ಉತ್ಸವದಾನ |

| | | | |
|---|---|---|---|
| **ನಾಗಮಂಗಲ ತಾಲ್ಲೂಕು** | | | |
| ಬೆಳ್ಳೂರು | ವೀರಭದ್ರ | | |
| ಭಕ್ತರಹಳ್ಳಿ | ಮಲ್ಲೇಶ್ವರ | | |
| ಕೆಲಗೇರಿ | ಮಲ್ಲಿಕಾರ್ಜುನ | EC VII., 1979.Ng-58 | ೧೫ನೇ ಶತಮಾನ ಜೀರ್ಣೋದ್ಧಾರ |
| ನಾಗಮಂಗಳ | ವೀರಭದ್ರ | EC VII., 1979.Ng-8 | ೧೬ನೇ ಶತಮಾನ |
| ಸುಬ್ಬರಾಯಕೊಪ್ಪಲು | ಸಿದ್ದೇಶ್ವರ | EC VII., 1979.Ng-42 | ೧೫ನೇ ಶತಮಾನ |
| **ಶ್ರೀರಂಗಪಟ್ಟಣ ತಾಲ್ಲೂಕು** | | | |
| ಶ್ರೀರಂಗಪಟ್ಟಣ | ಗಂಗಾಧರೇಶ್ವರ | EC VII., 1979, Sr | |

**ಶಿವಮೊಗ್ಗ ಜಿಲ್ಲೆ**

| | | | |
|---|---|---|---|
| **ಹೊಸನಗರ ತಾಲ್ಲೂಕು** | | | |
| ಕಡೂರು | ಈಶ್ವರ | EC.,VIII Nr-34 | ೧೪ನೇ ಶತಮಾನ |
| ಸಂಪಿಗೆಕೋಟೆ | ಶಂಭುಲಿಂಗ | .................... | ೧೫ನೇ ಶತಮಾನ |
| **ಸಾಗರ ತಾಲ್ಲೂಕು** | | | |
| ಕನಲಿ | ಈಶ್ವರ | ....................... | ೧೬ನೇ ಶತಮಾನ |
| **ಶಿಕಾರಿಪುರ ತಾಲ್ಲೂಕು** | | | |
| ಗೊಡವಕೊಪ್ಪ | ಮೈಲಾರಲಿಂಗ | EC.,VIII SK-313 | ೧೩೯೬ |
| ತೊರ್ಗಸೆ | ಮಲ್ಲಿಕಾರ್ಜುನ | ....................... | ೧೬ನೇ ಶತಮಾನ |

| | | | | |
|---|---|---|---|---|
| **ಸೊರಬ ತಾಲ್ಲೂಕು** | | | | |
| ಚತ್ರಾಹಳ್ಳಿ | ಕಲ್ಲೇಶ್ವರ | ...................... | ೧೪೩೪ | |
| ಅಂಕವಳ್ಳಿ | ಶ್ರೀಕಂಠೇಶ್ವರ | EC.,VIII sb-39 | ೧೫೨೯ | |
| ದೇವಸ್ಥಾನವಕ್ಕಲು | ಕೈಭಟೇಶ್ವರ | EC.,VIII sb-278 | ೧೫೧೮ | |
| ಕೊಡಕವಿ | ಸಿದ್ಧರಾಮೇಶ್ವರ | EC.,VIII sb-17,18 P-20 | ೧೩೬೭ | |
| **ತೀರ್ಥಹಳ್ಳಿ ತಾಲ್ಲೂಕು** | | | | |
| ಅರುಗ | ಕಲ್ಲಿನಾಥ | EC.,VIII Ti-9 | ೧೫ನೇ ಶತಮಾನ | |
| ಅರುಗ | ವೀರಭದ್ರ | EC.,VIII Ti-16 | ೧೩೭೭ | |
| | | **ಹಾಸನ ಜಿಲ್ಲೆ** | | |
| **ಅರಸಿಕೆರೆ ತಾಲ್ಲೂಕು** | | | | |
| ಅರಸಿಕೆರೆ | ಮಲೆಮಲ್ಲಿಕಾರ್ಜುನ | EC.X ಅರಸಿಕೆರೆ ೧., | ೧೯೯೭ | ಬುಕ್ಕರಾಯನ |

ಕಾಲದಲ್ಲಿ

ದೇವಸ್ಥಾನಿಮಿದೆರು

| | | | |
|---|---|---|---|
| **ಅರಕಲಗೋಡು ತಾಲ್ಲೂಕು** | | | |
| ಕೇರಲಾಪುರ | ವೀರಭದ್ರ | | ೧೪ನೇ ಶತಮಾನ |
| ರಾಮನಾಥಪುರ | ಸುಬ್ರಮಣ್ಯಂ | ARIE 1942, P-32 | |
| **ಬೇಲೂರು ತಾಲ್ಲೂಕು** | | | |
| ಪುಷ್ಪಗಿರಿ | ಮಲ್ಲಿಕಾರ್ಜುನ | EC V. Bl, 184 | ...................... |
| **ಹಾಸನ ತಾಲ್ಲೂಕು** | | | |
| ಹಾಸನ | ವಿರೂಪಾಕ್ಷ | EC V Hn-1 | ೧೫೩೦ |
| ಪುರ | ರಾಮೇಶ್ವರ | EC V Hn 15 | ೧೬ನೇ ಶತಮಾನ |
| ಶಾಂತಿಗ್ರಾಮ | ಧರ್ಮೇಶ್ವರ | EC VII Hn 166 | ೧೬ನೇ ಶತಮಾನ |

**ಅಡಿಟಿಪ್ಪಣಿಗಳು**


೧. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ**, ಪು.೮

೨. ಆಚಾರ್ಯ ಪಿ.ಕೆ., **Indian Archctecltre**

೩. ಬ್ರೂನೋ ಡೆಗೆನ್ಸ್, **ಮಯಮತ**, ೧೯೭೦, ಪು.೩೫

೪. ರಾಮಚಂದ್ರರಾವ್ ಎಸ್.ಕೆ., **ಭಾರತದ ದೇವಾಲಯದ ನೆಲೆ ಹಿನ್ನೆಲೆ**, ೧೯೮೦, ಪು.೭

೫. ಅದೇ,

೬. ಗೋಪಾಲ್ ಬಿ.ಆರ್., **ಕರ್ನಾಟಕದ ಕಲೆಗಳು, ವಾಸ್ತು**, ಸಂಪುಟ ೪, ೧೯೮೦, ಪು.೫

೭. ದೇವರಕೊಂಡಾರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೪, ಪು.೩೦

೮. ಸುರೇಶ್ ಕೆ.ಎಂ.(ಸಂ), **ದೇವಾಲಯ ಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮, ಪು.೩೧

೯. ಅದೇ, ಪು.೩೧

೧೦. ಗೋಪಾಲ ಬಾ.ರಾ., **ವಿಜಯನಗರ ವಾಸ್ತುಶಿಲ್ಪ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೮೩, ಪು.೧೦

೧೧. ಪ್ರರ್ಸಿಬ್ರೌನ್ **Indian Architecture perct brown and hindu Period**

೧೨. ಗೋಪಾಲ ಬಾ.ರಾ. ಪೂರ್ವೋಕ್ತ, ಪು.೧೦

೧೩. ಅದೇ, ಪು.೧೦

೧೪. ಅದೇ, ಪು.೧೦

೧೫. ರಾಮಚಂದ್ರರಾವ್ ಎಸ್.ಕೆ., **ಭಾರತ ದೇವಾಲಯಗಳ ನೆಲೆ ಹಿನ್ನೆಲೆ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೮೦, ಪು.೧೮.

೧೬. ಅದೇ, ಪು.೨೨

೧೭. ಗೋಪಾಲ ಬಾ.ರಾ., ಪೂರ್ವೋಕ್ತ, ಪು.೧೩

೧೮. ನರಸಿಂಹಮೂರ್ತಿ ಎ.ವಿ., **ಚಾಲುಕ್ಯ ವಾಸ್ತುಶಿಲ್ಪ ಪರಿಚಯ**, ೧೯೭೬, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ಪು.೧೦

೧೯. ಸುರೇಶ್ ಕೆ.ಎಂ.(ಸಂ), **ಕರ್ನಾಟಕ ದೇವಾಲಯ ಕೋಶ, ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.xvii

೨೦. ಸೂರ್ಯನಾಥ ಕಾಮತ್, **ವಿಜಯನಗರ ಸಾಮ್ರಾಜ್ಯ**, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೯೧, ಪು.೪೪

೨೧. ದೀಕ್ಷಿತ್ ಜಿ.ಎಸ್., **ಸಂಗಮ ಕಾಲದ ವಿಜಯನಗರ**, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೯೧,

ಪು.೧೬೦

೨೨. ಭೂಸನೂರಮಠ(ಸಂ), ವಿಜಯಕಲ್ಯಾಣ, ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ ಕೊಟ್ಟೂರುಸ್ವಾಮಿ ಮಠ, ಹಂಪಿ, ೧೯೮೮, ಪು.೧೭೬

೨೩. ರಘುನಾಥ ಭಟ್ ಎಚ್.ಆರ್., ಹೊಯ್ಸಳ ವಾಸ್ತುಶಿಲ್ಪ ಪರಿಚಯ, ೧೯೭೯, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೭೯, ಪು.೩೨

೨೪. EC, Vol.III, 1974, GV.135

೨೫. ARSIE, 1907 No.507

೨೬. ರಾಜಶೇಖರ ಎಸ್., ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್ಸ್, ಧಾರವಾಡ, ಪು.೧೬೪

೨೭. ಅದೇ, ಪು.೧೬೫

೧೨೮. ರಾಮನ್, ವಿಜಯನಗರ ಸಾಮ್ರಾಜ್ಯದ ಪ್ರಾರಂಭಕಾಲದಲ್ಲಿನ ತಮಿಳುನಾಡಿನಲ್ಲಿನ ಸಾಮಾಜಿಕ ರಾಜಕೀಯ ಪರಿಸ್ಥಿತಿಗಳು ಸಂಗಮ ಕಾಲದ ವಿಜಯನಗರ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು, ಪು.೨೯

೨೯. A.E. VI, No.33

೩೦. ARSIE, 1916, No.64

೩೧. ಸತ್ಯನಾಥ್ ಅಯ್ಯರ್, ದಿ ನಾಯಕ್ಸ್ ಆಫ್ ಮಧುರೈ, ಪು.೩೭೪ ಮತ್ತು ಕೃಷ್ಣಸ್ವಾಮಿ ಪಿಳ್ಳೈ ಎ ತಮಿಳು ಕಂಟ್ರಿ ಅಂಡರ್ ದಿ ವಿಜಯನಗರ ರೂಲು, ಅಣ್ಣಾಮಲೈನಗರ, ೧೯೬೪

೩೨. ಭೂಸನೂರಮಠ ಸಿ.ಸಂ. ವಿಜಯಕಲ್ಯಾಣ, ಕವಿ ಹರಿಹರ ಮಾರಕ ಸಂಶೋಧನ ಕೇಂದ್ರ, ಹಂಪೆ, ೧೯೮೮, ಪು.೧೭೭

೩೩. ಇ.ಸಿ., ಮುಳಬಾಗಿಲು, ನಂ.೩೪

೩೪. ಸಾಲತ್ತೊರೆ ಬಿ.ಎ., ಮತ್ತು ರಾಯರು ಡಿ.ಪಿ., ಕನ್ನಡ ನಾಡಿನ ಚರಿತ್ರೆ ಭಾಗ ೧, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೭, ಪು.೬೩

೩೫. ನಾಯಕ ಹಾ.ಮಾ.(ಸಂ), ವಿದ್ಯಾರಣ್ಯರು ಮತ್ತು ಅವರ ಕಾಲ ಪು.೨೪೧

೩೬. ಗೋಪಾಲ ಬಾ.ರಾ.ವಿಜಯನಗರ ಪೂರ್ವೋಕ್ತ, ಪು.೧೨

೩೭. ಅದೇ, ಪು.೧೨

೩೮. ಶ್ರೀಕಂಠಯ್ಯ ಕೆ., ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನದ ಚಿತ್ರಗಳು, ಗೀತಾ ಬುಕ್‌ಹೌಸ್, ಮೈಸೂರು, ಪು.೧೦೩

೩೯. ಅದೇ, ಪು.೧೦೩

೪೦. ಅದೇ, ಪು.೧೦೩

೪೧. ಶಿವದೇವಾಲಯದ ಮಹಾರಂಗ ಮಂಟಪದ ಕಂಬಗಳ ಮೇಲೆ ಈಗಲೂ ನೋಡಬಹುದು.

೪೨. ವೇಣುಗೋಪಾಲಸ್ವಾಮಿಯ ದೇವಾಲಯದ ಮಹಾರಂಗಮಂಟಪದ ಕಂಬಗಳಲ್ಲಿ ನೋಡಲು ಸಿಗುತ್ತದೆ.

೪೩. ಗೋಪಾಲ ಬಾ.ರಾ., ಪೂರ್ವೋಕ್ತ, ಪು.೧೨

೪೪. ರಘುನಾಥಭಟ್ ಎಚ್.ಆರ್., **ಹೊಯ್ಸಳ ವಾಸ್ತುಶಿಲ್ಪ ಪರಿಚಯ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೭೯, ಪು.೧೫

೪೫. ದೀಪ್ತಾಗಮ ಅಧ್ಯಾಯ ೬, ಶ್ಲೋಕ ೧೭, ಪು.

೪೬. ಸುಪ್ರಭೇದಾಗಮ, ಅಧ್ಯಾಯ ೩೧, ಶ್ಲೋಕ ೯೪

೪೭. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ೧೯೮೧, ಪು.೫೧

೪೮. ಅದೇ, ಪು.೫೯

೪೯. ಸುರೇಶ್ ಕೆ.ಎಂ., ಪೂರ್ವೋಕ್ತ, ಪು.

೫೦. ಬ್ರುನೋಡ್ರಗೆನ್ಸ್(ಸಂ) **ಮಯಮತ ಪಾಂಡಿಚೇರಿ,** ೧೯೭೦, ಪು.೨೩

೫೧. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೬೧

೫೨. ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೧೧೧

೫೩. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೬೧

೫೪. ಬ್ರುನೋಜ್ರಗೆನ್ಸ್, ಪೂರ್ವೋಕ್ತ, ಪು.೨೩

೫೫. ಅದೇ, ಪು.೨೩

೫೬. ಸುಪ್ರಭೇದಾಗಮ ೩೧, ೧೩೭ ಅಥವಾ ಮಯಮತ ಬು ೨೩.೨೬

೫೭. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೬೪

೫೮. ಆಚಾರ್ಯ ಪಿ.ಕೆ.(ಸಂ), **ಮಾನಸಾರ,** ಮಾನಸಾರ ಸಿರಿಸ್ ನವದೆಹಲಿ, ೧೯೭೯, ಪು.೨೪

೫೯. ಬಳ್ಳಾರಿ ಜಿಲ್ಲೆಯ ಜನ ವಿಜಯನಗರ ಕಾಲದ ಗೋಪುರವನ್ನು ರಾಯ ಗೋಪುರವೆಂದು ಕರೆಯುವುದು ಈ ಭಾಗದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ

೬೦. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೬೩

೬೧. ಗೋಪಾಲ್ ಬಾ.ರಾ., ಪೂರ್ವೋಕ್ತ, ಪು.೫೪

೬೨. ಮಯಮತ, ಪೂರ್ವೋಕ್ತ,

೬೩. ಅಪರ್ಣ ಕೂ.ಸ., ಪೂರ್ವೋಕ್ತ, ಪು.೮೦

೬೪. ಅದೇ, ಪು.೮೧

೬೫. ಗೋಪಾಲ ಬಾ.ರಾ., ಪೂರ್ವೋಕ್ತ, ಪು.೧೬

೬೬. ಅಪರ್ಣ ಕೂ.ಸ. ಪೂರ್ವೋಕ್ತ, ಪು.೧೬

೬೭. ಅದೇ, ಪು.೧೭

೬೮. ಅಪರ್ಣ ಕೂ.ಸ., ಪೂರ್ವೋಕ್ತ, ಪು.೩೦

೬೯. ಭಟ್ ಎನ್.ಆರ್.(ಸಂ), ಅಜಿತಾಗಾಮ, ಅಧ್ಯಾಯ ೧೪, ಶ್ಲೋಕ ೨, ೪

೭೦. ಅಪರ್ಣ ಕೂ.ಸ., ಪೂರ್ವೋಕ್ತ, ಪು.೩೨

೭೧. ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಪು.೪೮

೭೨. ಸುಪ್ರಭೇದಾಗಮ ಅಧ್ಯಾಯ ೩೧, ಶ್ಲೋಕ ೧೦೭

೭೩. ಆಚಾರ್ಯ ಪಿ.ಕೆ.(ಸಂ), ಮಾನಸಾರ, ಅಧ್ಯಾಯ ೧೬, ಶ್ಲೋಕ ೯,೧೦

೭೪. ಅಪರ್ಣ ಕೂ.ಸ., ಪೂರ್ವೋಕ್ತ, ಪು.೪೪

೭೫. ಅದೇ, ಪು.೪೪

೭೬. ಅದೇ, ಪು.೪೬

೭೭. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.

೭೮. ಅದೇ, ಪು.೩೫

೭೯. ರಾಜಶೇಖರ ಸಿಂದಗಿ, ಕರ್ನಾಟಕ ವಾಸ್ತುಶಿಲ್ಪ ಚಿತ್ರಣ, ಪು.೧೮೩

೮೦. ಅದೇ, ಪು.೧೮೩

೮೧. ರಾಮಚಂದ್ರರಾವ್ ಎಸ್.ಕೆ., ಪೂರ್ವೋಕ್ತ, ಪು.೮೦

೮೨. ಕೌರವಾಗಮ, ಅಧ್ಯಾಯ ೩೯, ಶ್ಲೋಕ, ೨೦

೮೩. ರಾಜಶೇಖರ ಎಸ್., ಪೂರ್ವೋಕ್ತ, ಪು.೧೧೮

# ಪ್ರಮುಖ ಶೈವದೇವಾಲಯಗಳು

## ೧. ಅರಾಭಿಕೊತ್ತನೂರಿನ ವೀರಭದ್ರ ದೇವಾಲಯ

ಕೋಲಾರ ಜಿಲ್ಲೆ ವಿಜಯನಗರ ಕಾಲದಲ್ಲಿ ಪ್ರಮುಖವಾದ ಸಾಮ್ರಾಜ್ಯದ ಪ್ರದೇಶವಾಗಿತ್ತು. ಈ ಕೋಲಾರ ಜಿಲ್ಲೆಯಲ್ಲಿ ಬರುವ ಅರಾಭಿಕೊತ್ತನೂರು ಕೋಲಾರ ತಾಲೂಕಿಗೆ ಸೇರಿದೆ. ಆರಾಭಿಕೊತ್ತನೂರಿನಲ್ಲಿ ಸೋಮೇಶ್ವರ, ಬಸವಣ್ಣ, ಬೀರೇಶ್ವರ, ವೆಂಕಟೇಶ್ವರ ಎಂಬ ದೇವಸ್ಥಾನಗಳನ್ನು ಕಾಣಬಹುದು. ಅರಾಭಿಕೊತ್ತನೂರಿನಲ್ಲಿ ಬರುವ ವೀರಭದ್ರ ದೇವಸ್ಥಾನವು ವಿಜಯನಗರ ಕಾಲದಲ್ಲಿ ಕಟ್ಟಲ್ಪಟ್ಟಿದ್ದು. ಈ ದೇವಾಲಯವನ್ನು ವಿಜಯನಗರದ ರಾಜನಾದ ಎರಡನೇ ದೇವರಾಯನ ಕಾಲದಲ್ಲಿ ನಿರ್ಮಿಸಲಾಗಿದೆ.[೧] ಈ ದೇವಸ್ಥಾನವು ಊರಿನ ಹೊರಗೆ ಇದೆ. ಈಗ ಈ ದೇವಾಲಯದ ಮುಂದೆ ಊರು ಬೆಳೆದಿದೆ. ಅರಾಭಿಕೊತ್ತನೂರಿನಲ್ಲಿ ಬಸವಣ್ಣ ವೀರಭದ್ರ ದೇವಾಲಯಗಳನ್ನು ಸಂಪೂರ್ಣವಾಗಿ ಕೆಡವಿ ಮತ್ತೆ ನಿರ್ಮಿಸಲಾಗಿದೆ. ವೆಂಕಟೇಶ್ವರ ದೇವಸ್ಥಾನ ಮತ್ತು ಸೋಮೇಶ್ವರ ದೇವಸ್ಥಾನಗಳನ್ನು ಗರ್ಭಗೃಹ ಮತ್ತು ನವರಂಗದ ಕಂಬಗಳನ್ನು ಬಿಟ್ಟು ಉಳಿದ ಎಲ್ಲಾ ದೇವಾಲಯದ ಭಾಗಗಳನ್ನು ಹೊಸದಾಗಿ ನಿರ್ಮಿಸಲಾಗಿದೆ. ಈ ವೀರಭದ್ರ ದೇವಾಲಯವನ್ನು ೧೯೯೧ರಲ್ಲಿ ಹೊಸದಾಗಿ ಪ್ರತಿಷ್ಠೆ ಮಾಡಲಾಗಿದೆ. ದೇವಾಲಯದ ಮುಂದಿನ ದೀಪಸ್ತಂಭವನ್ನು ಮಾತ್ರ ಮೂಲದಂತೆ ಉಳಿಸಲಾಗಿದೆ. ಈಗಿನ ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪಗಳನ್ನು ಮಾತ್ರ ಹೊಂದಿದೆ. ದೇವಾಲಯದ ಅವಶೇಷಗಳನ್ನು ದೇವಾಲಯದ ಸುತ್ತಲೂ ನೋಡಬಹುದು(ಚಿತ್ರ ೧).

ದೇವಾಲಯದ ಗರ್ಭಗೃಹದಲ್ಲಿನ ಮೂಲ ವೀರಭದ್ರ ವಿಗ್ರಹವನ್ನು ಸ್ಥಳಾಂತರಿಸಲಾಗಿದೆ. ಈ ಮೂಲ ವೀರಭದ್ರನ ಶಿಲ್ಪವು ಬಸವಣ್ಣ ದೇವಸ್ಥಾನದ ಪಕ್ಕದಲ್ಲಿ ವೀರಗಲ್ಲುಗಳಿಗಾಗಿ ನಿಲ್ಲಿಸಿದ ಮಂಟಪದ ಹಿಂಬದಿಯಲ್ಲಿ ವೀರಭದ್ರನ ವಿಗ್ರಹವು ಸುಮಾರು ನಾಲ್ಕು ಅಡಿಯಿದೆ. ವೀರಭದ್ರನು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಒಂದು ಕೈಯಲ್ಲಿ ಬಿಲ್ಲು, ಖಡ್ಗ, ಗದೆ ಇದೆ. ಇನ್ನೊಂದು ಕೈ ಮುರಿದು ಹೋಗಿದೆ. ಎಡಗಡೆಯ ಪಾದದ ಬುಡದಲ್ಲಿ ಟಗರಿನ ಮುಖದ ದಕ್ಷಯಜ್ಞನನ್ನು ಚಿತ್ರಿಸಲಾಗಿದೆ. ಈ ವೀರಭದ್ರನ ಶಿಲ್ಪದ ಹಿಂದೆ ಸುಮಾರು ಆರು ಅಡಿ ಎತ್ತರದ ವೀರಗಲ್ಲುಗಳನ್ನು ಕಾಣಬಹುದು. ದೇವಾಲಯಗಳಿರುವ ಈ ಪ್ರದೇಶವು ಒಂದೇ ಪ್ರಾಕಾರವನ್ನು ಹೊಂದಿದಂತೆ ತೋರುತ್ತದೆ. ಇಲ್ಲಿ ಒಟ್ಟು ಇದೇ ತೆರನಾದ ಐದು ವೀರಗಲ್ಲುಗಳನ್ನು ಕಾಣಬಹುದು. ವೀರಭದ್ರನ ಎದುರಿಗೆ ನೂರು ಅಡಿ



೧

೨



೧).ಗರ್ಭ ಗೃಹ ೨). ಅಂತರಾಳ ೩). ಸಭಾ ಮಂಟಪ (ನವರಂಗ)

೧. ಅರಾಭಿಕೊತ್ತನೂರಿನ ವೀರಭದ್ರ ದೇವಸ್ಥಾನ ತಲನಕ್ಷೆ

ದೂರದಲ್ಲಿ ಒಂದು ಪುಷ್ಕರಣಿ ಇದೆ. ಪುಷ್ಕರಣಿಯ ಮಧ್ಯದಲ್ಲಿ ಸುಂದರವಾದ ಒಂದು ಮಂಟಪದ ರಚನೆಯಿದೆ. ಮಂಟಪವನ್ನು ನಾಲ್ಕು ಕಂಬಗಳ ಸಹಾಯದಿಂದ ರಚಿಸಲಾಗಿದ್ದು, ಈ ಮಂಟಪವು ಮೇಲೆ ಶಿಖರವನ್ನು ಹೊಂದಿದೆ. ವೀರಭದ್ರ ದೇವಾಲಯದ ಹಿಂದೆ ಹೆಬ್ಬಂಡೆಯಲ್ಲಿ ವಿಜಯನಗರ ಕಾಲದ ಶಾಸನವಿದೆ(ಚಿತ್ರ ೨).

## ೨. ಅಲಸೂರಿನ ಸೋಮೇಶ್ವರ ದೇವಸ್ಥಾನ

ಬೆಂಗಳೂರಿನ ಪ್ರತಿಷ್ಠಿತ ಬಡಾವಣೆಗಳಲ್ಲಿ ಒಂದಾದ ಅಲಸೂರು ಐತಿಹಾಸಿಕ ಮಹತ್ವದ ಸ್ಥಳ. ಈ ಬೆಂಗಳೂರನ್ನು ಕಟ್ಟಿದ ಒಂದನೇ ಕೆಂಪೇಗೌಡನು ಅಲಸೂರಿನಲ್ಲಿ ಆಳ್ವಿಕೆ ನಡೆಸಿದನು. ಒಂದನೆಯ ಕೆಂಪೇಗೌಡನು ಹದಿನಾರನೇಯ ಶತಮಾನದಲ್ಲಿ ವಿಜಯನಗರದ ಸಾಮಂತ ಅರಸನಾಗಿದ್ದನು. ಯಲಹಂಕ ಪ್ರಭುಗಳು ಎಂದು ಪ್ರಸಿದ್ಧರಾದ ಇವರು ಮೊದಲಿಗೆ ಮಾಗಡಿಯನ್ನು, ನಂತರ ಬೆಂಗಳೂರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು.

ಅಲಸೂರಿನ ಬಡಾವಣೆಯಲ್ಲಿ ದೇವಸ್ಥಾನದ ಕಡೆಗೆ ನಡೆಯುತ್ತಾ ಹೋದರೆ, ಸೋಮೇಶ್ವರ ದೇವಸ್ಥಾನದ ಅತೀ ದೊಡ್ಡ ಗೋಪುರವು ನೋಡುಗರನ್ನು ಆಕರ್ಷಿಸುತ್ತದೆ. ಈ "ರಾಯ" ಗೋಪುರವು ಆರು ತಲಗಳನ್ನು ಹೊಂದಿದೆ. ಇದರ ರಚನೆಯು ವಿಜಯನಗರ ರಾಜರು ನಿರ್ಮಿಸುತ್ತಿದ್ದ ರಾಯಗೋಪುರದ ಮಾದರಿಯಲ್ಲಿದೆ. ಈಗ ಈ ಗೋಪುರವನ್ನು ಪುನರುಜ್ಜೀವನಗೊಳಿಸಿ ತೈಲವರ್ಣವನ್ನು ಹಚ್ಚಿರುತ್ತಾರೆ. ಗೋಪುರದ ತಲಗಳಲ್ಲಿ ವಿಷ್ಣು, ಮಹಾವಿಷ್ಣು, ಉಗ್ರನರಸಿಂಹ, ಲಕ್ಷ್ಮೀಸಮೇತನಾದ ವಿಷ್ಣು ಶಿವಪಾರ್ವತಿಯರು ಇಂದ್ರ, ಚಂದ್ರ, ಗಣೇಶ, ರಾವಣ, ಆಂಜನೇಯ ಕೊನೆಯಲ್ಲಿ ಗೋಪುರದ ಗ್ರೀವದಲ್ಲಿ ನಾಲ್ಕು ದಿಕ್ಕಿಗೂ ಬಸವಗಳಿರುವುದನ್ನು ಕಾಣಬಹುದು. ಇವುಗಳನ್ನು ಗ್ರೀವ ದೇವತೆಗಳೆಂದು ಕರೆಯಲಾಗುತ್ತದೆ. ದೇವಸ್ಥಾನದ ದ್ವಾರದ ಎಡಬಲಗಳಲ್ಲಿ ನಂದಿ ಭೃಂಗದ ವಿಗ್ರಹಗಳನ್ನು ಕಾಣಬಹುದು. ಈ ವಿಗ್ರಹಗಳ ಎತ್ತರವು ನಾಲ್ಕು ಅಡಿ ಇದೆ. ಈ ದ್ವಾರ ಮಂಟಪವು ಮುಖ್ಯವಾಗಿ ಆರು ಕಂಬಗಳನ್ನೂ ಹೊಂದಿದೆ. ಮೊದಲ ದ್ವಾರಬಾಗಿಲಿನಲ್ಲಿ ಲತಾಸುರುಳಿಯನ್ನು ಹಿಡಿದು ನಿಂತಿರುವ ಬಾಲಕಿಯರ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಮಂಟಪದ ದೇವಸ್ಥಾನದ ಕಡೆಯ ಬಾಗಿಲ ಕಡೆಯ ಬಾಗಿಲಿನಲ್ಲಿ ಲತಾ ತೋರಣವನ್ನು ಹೊತ್ತು ನಿಂತಿರುವ ಬಾಲಿಕೆಯರ ಶಿಲ್ಪಗಳನ್ನು ಚಿತ್ರಿಸಲಾಗಿದೆ.

ದೇವಾಲಯವನ್ನು ಪ್ರವೇಶಿಸಿದರೆ ವಿಶಾಲವಾದ ಹಜಾರವಿದೆ. ಇಡೀ ದೇವಸ್ಥಾನವನ್ನು ಹತ್ತು ಅಡಿ ಎತ್ತರದ ಪ್ರಾಕಾರವು ಸುತ್ತುವರೆದಿದೆ. ದ್ವಾರಬಾಗಿಲ ಮುಂದೆ ಪ್ರಥಮವಾಗಿ ಕಾಣುವುದೇ ಹನ್ನೆರಡು ಅಡಿಯಷ್ಟು ಎತ್ತರವಾದ ಬಲಿಪೀಠವು ಹೆಚ್ಚು ಅಲಂಕೃತವಾಗಿ ರಚನೆಗೊಂಡಿದೆ. ಬಲಿಪೀಠದ ಕೆಳಗೆ ಅಧಿಷ್ಠಾನದ ರಚನೆಯನ್ನು ಹೊಂದಿದೆ. ಬಲಿಪೀಠದ ತುದಿಯಲ್ಲಿ ತಿರುವಿ ಹಾಕಲಾದ ಪದ್ಮದ




೧). ಗರ್ಭ ಗೃಹ ೨).ಪ್ರದಕ್ಷಣಾ ಪಥ ೩).ಅರ್ಧ ಮಂಟಪ ೪). ನವರಂಗ ೫).ಮುಖ ಮಂಟಪ ೬).ದ್ವಜ ಸ್ತಂಭ
೭).ಬಲಿ ಪೀಠ ೮). ನಂದಿ ಮಂಟಪ

೨. ಅಲಸೂರಿನ ಸೋಮೇಶ್ವರ ದೇವಸ್ಥಾನದ ತಲನಕ್ಷೆ

ರಚನೆಯನ್ನು ಕಾಣಬಹುದಾಗಿದೆ. ದೇವಸ್ಥಾನದ ಪೌಳಿಯಲ್ಲಿ ಹಲವಾರು ದೇವರುಗಳ ದೇವಸ್ಥಾನಗಳು ನಿರ್ಮಾಣವಾಗಿವೆ. ಈ ಎಲ್ಲಾ ದೇವಸ್ಥಾನಗಳು ಪರಿವಾರ ದೇವತೆಗಳಾಗಿವೆ. ಮುಖ್ಯ ದೇವಸ್ಥಾನವಾದ ಸೋಮೇಶ್ವರ ದೇವಸ್ಥಾನವು ಭವ್ಯವಾಗಿ ರಚನೆಗೊಂಡಿದೆ. ದೇವಸ್ಥಾನವು ಚೋಳರ ಕಾಲದ್ದೆಂದು ಅರ್ಚಕರು ಹೇಳುತ್ತಾರೆ. ಗರ್ಭಗೃಹದ ಶಿಲ್ಪಗಳು ಇದನ್ನು ಪುಷ್ಠೀಕರಿಸುತ್ತವೆ. ಆದರೆ ದೇವಸ್ಥಾನದ ರಚನೆಯೆಲ್ಲಾ ವಿಜಯನಗರ ಶೈಲಿಯಲ್ಲೇ ಇದೆ. ಒಂದನೆಯ ಕೆಂಪೇಗೌಡನು ಅಲಸೂರಿನ ಈ ಸೋಮೇಶ್ವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದನೆಂದು ದೇವಸ್ಥಾನದಲ್ಲಿರುವ ಶಾಸನವು ಹೇಳುತ್ತದೆ.

ಬಲಿಪೀಠ ಮುಂದೆ ರಚನೆಗೊಂಡಿರುವುದು ಧ್ವಜಸ್ತಂಭ. ಇದು ಬಲಿಪೀಠದಂತೆಯೇ ರಚನೆಯನ್ನು ಹೊಂದಿದೆ. ನಡುವೆ ಒಂದು ಸಣ್ಣ ರಂಧ್ರವನ್ನು ಬಿಡಲಾಗಿದೆ. ರಂಧ್ರದಲ್ಲಿ ಸ್ತಂಭವನ್ನು ನಿಲ್ಲಿಸಲಾಗಿದೆ. ಸ್ತಂಭದ ಕೆಳಗಿನ ಭಾಗವು ಶಿಲಾಭಾಗವಾಗಿದ್ದು, ಪ್ರಾಚೀನಕಾಲದ ರಚನೆಯನ್ನು ಹೊಂದಿದೆ. ಇದರ ಮೇಲಿನ ಸ್ತಂಭವನ್ನು ಶಿಥಿಲವಾದಾಗಲೆಲ್ಲ ತೆಗೆದು ಹೊಸದಾದ ಸ್ತಂಭವನ್ನು ನಿಲ್ಲಿಸುತ್ತಾರೆ. ಸ್ತಂಭವನ್ನು ಕಾಷ್ಠದಿಂದ ಮಾಡಲಾಗಿರುತ್ತದೆ. ಈ ಕಾಷ್ಠಸ್ತಂಭಕ್ಕೆ ಹಿತ್ತಾಳೆಯ ಕವಚವನ್ನು ತೊಡಿಸಲಾಗಿದೆ. ಧ್ವಜಸ್ತಂಭದ ಮುಂದುಗಡೆಯಲ್ಲಿ ನಂದಿಮಂಟಪವು ರಚನೆಗೋಂಡಿದೆ. ನಾಲ್ಕು ಸರಳವಾದ ಕಂಬಗಳ ಸಹಾಯದಿಂದ ನಂದಿಮಂಟಪವು ರಚನೆಗೊಂಡಿದೆ. ಕಂಬಗಳು ಆರು ಅಡಿ ಎತ್ತರವನ್ನು ಹೊಂದಿವೆ. ಮೇಲ್ಗಡೆಯಲ್ಲಿ ವಿಜಯನಗರ ಶೈಲಿಯಲ್ಲಿ ಗೋಪುರವನ್ನು ರಚಿಸಲಾಗಿದೆ, ಗೋಪುರವು ಚಿಕ್ಕದಾಗಿದೆ.

ನಂದಿಮಂಟಪದ ಎದುರಿನಲ್ಲಿ ರಚನೆಗೊಂಡಿರುವುದೇ ಸೋಮೇಶ್ವರ ದೇವಸ್ಥಾನ. ದೇವಸ್ಥಾನವು ಸುಮಾರು ಐದು ಅಡಿ ಎತ್ತರವಾದ ಅಧಿಷ್ಠಾನದಿಂದ ನಿರ್ಮಿಸಲಾಗಿದೆ. ಅಧಿಷ್ಠಾನವು ದೇವಾಲಯದ ಸುತ್ತಲೂ ಕಂಡುಬರುವುದು. ಈ ಅಧಿಷ್ಠಾನವು ಸಾಲಾಗಿ ಬಳೆಯ ಆಕಾರದ ರಚನೆಯನ್ನು ಹೊಂದಿದೆ. ಇದಕ್ಕೆ 'ಕಟಿಕಾವೃತ' ಕುಮುದ ಎಂದು ಕರೆಯಲಾಗಿದೆ.[೨]

ಕಟಿಕಾವೃತ ಕುಮುದವನ್ನು ಹೊಂದಿರುವ ಅಧಿಷ್ಠಾನದ ಮೇಲೆ ರಂಗಮಂಟಪವನ್ನು ರಚಿಸಲಾಗಿದೆ. ಇದು ಅತ್ಯಂತ ಸುಂದರವಾಗಿ ಮೂಡಿಬಂದಿದೆ. ವಿಶಾಲವಾದ ರಂಗಮಂಟಪವು ನಲವತ್ತೆಂಟು ಕಂಬಗಳನ್ನೊಳಗೊಂಡಿದೆ. ರಂಗಮಂಟಪಕ್ಕೆ ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಸೋಪಾನವನ್ನು ರಚಿಸಲಾಗಿದೆ. ಪೂರ್ವದಿಕ್ಕಿನಲ್ಲಿರುವ ಸೋಪಾನವು ಸಿಂಹಸೋಪಾನವಾದರೆ, ದಕ್ಷಿಣದಲ್ಲಿರುವ ಸೋಪಾನವು ಸಹ ಸಿಂಹದಸೋಪಾನವೇ ಇದೆ. ಉತ್ತರದಲ್ಲಿ ಮಾತ್ರ ಆನೆಯ ಸೋಪಾನವನ್ನು ಹೊಂದಿರುವುದು ಸೋಪಾನಕ್ಕೆ ಹೊಂದಿಕೊಂಡಂತಿರುವ ಎರಡೆರಡು ಕಂಬಗಳು ಒಟ್ಟು ಆರು ಕಂಬಗಳು ಯಾಳಿ ಸ್ತಂಭಗಳಾಗಿವೆ. ಇವು ವಿಜಯನಗರ ಕಾಲದಲ್ಲಿ ರಚನೆಗೊಂಡ ವಿಶಿಷ್ಟಕಂಬಗಳು ಯಾಳಿ ಕಂಬದ ಹಿಂದೆ ಪೂರ್ಣ ಕಂಬವಿದೆ, ಅದರ ಮುಂದೆ ಕೆಳಭಾಗದಲ್ಲಿ ಪೀಠವಿದೆ. ಪೀಠದ ಮೇಲ್ಗಡೆಯಲ್ಲಿ ಆನೆ ಇದೆ.

ಆನೆಯು ಸಿಂಹವನ್ನು ಹೊತ್ತಂತೆ ರಚನೆಗಳನ್ನು ಕಾಣಬಹುದು. ಸಿಂಹದ ಮೇಲೆ ಒಬ್ಬ ಸವಾರನು ಸವಾರಿ ಮಾಡುವಂತೆ ಕೆತ್ತಲಾಗಿದೆ. ಸವಾರನು ಸಿಂಹದ ಬಾಯಿಯಲ್ಲಿ ಮೂಗುದಾರವನ್ನು ಹಾಕಿ ಅದನ್ನು ಹಿಡಿದು ಸವಾರಿ ಮಾಡುವಂತೆ ಕೆತ್ತಲಾಗಿದೆ(ಚಿತ್ರ ೩).

ಯಾಳಿ ಕಂಬಗಳ ಪಕ್ಕದಲ್ಲಿ ವಿಜಯ ವಿಠಲ ಸ್ವಾಮಿ ದೇವಸ್ಥಾನದ ಕಂಬಗಳಂತೆ ಪಕ್ಕದಲ್ಲಿ ಹದಿನಾರು ಉಪಕಂಬಗಳ ಸ್ತಂಭಗಳು ಕಂಡುಬರುತ್ತದೆ. ಒಂದು ಪ್ರಧಾನವಾದ ಕಂಬದ ಪಕ್ಕದಲ್ಲೇ ಉಪಸ್ತಂಭಗಳನ್ನು ನಿರ್ಮಿಸಲಾಗಿದೆ. ಹೆಚ್ಚು ಭಾರವಿರುವ ಶಿಲಾಮಂಟಪವನ್ನು ಹೊರಲು ಈ ರೀತಿಯ ಬಲಿಷ್ಠ ಕಂಬಗಳನ್ನು ವಿಜಯನಗರ ಕಾಲದಲ್ಲಿ ನಿಲ್ಲಿಸಲಾಗುತ್ತಿತ್ತು. ನವರಂಗಕ್ಕೆ ಪ್ರವೇಶಿಸುವ ಭಾಗದಲ್ಲಿ ರಂಗಮಂಟಪದಲ್ಲಿನ ಸರಳ ಕಂಬಗಳ ರಚನೆಯನ್ನು ಕಾಣಬಹುದು. ಈ ಕಂಬಗಳಿಗೆ ಒಂದು ಉಪಕಂಬವನ್ನು ಕೆತ್ತಲಾಗಿದೆ. ಈ ಉಪಕಂಬದ ಕೆಳಗೆ ಸಿಂಹವು ಎತ್ತಿಹಿಡಿದಂತೆ ಕೆತ್ತಲಾಗಿದೆ. ಇದರ ಕೆಳಗಡೆಯಲ್ಲಿ ಕಂಬಕ್ಕೆ ಉಪಪೀಠದ ರಚನೆ ಕಾಣಬಹುದು. ಇನ್ನುಳಿದವು ಸರಳ ರಚನೆಯನ್ನು ಮೂರು ಚೌಕಾಕಾರವನ್ನು ಹೊಂದಿರುವ ಕಂಬಗಳಿವೆ. ಹೀಗೆ ರಂಗಮಂಟಪವು ಒಟ್ಟು ನಾಲ್ಕು ರೀತಿಯ ಸ್ತಂಭಗಳನ್ನು ಹೊಂದಿರುವುದನ್ನು ಕಾಣಬಹುದು.

| | |
|---|---|
| ೧. ಸೋಪಾನದ ಪಕ್ಕದಲ್ಲಿರುವ ಯಾಳಿ ಕಂಬಗಳು | - ೦೬ |
| ೨. ಅದರ ಪಕ್ಕದಲ್ಲಿರುವ ಎರಡು ಉಪಕಂಬಗಳನ್ನು ಹೊಂದಿರುವ ಕಂಬಗಳು | - ೦೬ |
| ೩. ಒಂದು ಉಪಸ್ತಂಭವನ್ನು ಹೊಂದಿರುವ ಕಂಬಗಳು | - ೧೮ |
| ೪. ಸರಳವಾದ ಕಂಬಗಳು | - ೧೮ |
| ಒಟ್ಟು | - ೪೮ |

ಹೀಗೆ ಒಟ್ಟು ನಲವತ್ತೆಂಟು ಕಂಬಗಳನ್ನು ರಂಗಮಂಟಪವು ಹೊಂದಿದ್ದು, ವಿಶಾಲವಾದ ರಚನೆಯನ್ನು ಹೊಂದಿದೆ. ರಂಗಮಂಟಪದಲ್ಲಿರುವ ಕಂಬಗಳಲ್ಲಿ ಶಿವಪಾರ್ವತಿಯರ ವಿಗ್ರಹ, ಯಾಳಿ, ಜಟಾಧಾರಿಯಾದ ಶಿವ, ಹಂಸ, ಆಂಜನೇಯ, ವಿಷ್ಣು ಉಗ್ರನರಸಿಂಹ ಆನೆ, ಬಾಲಕೃಷ್ಣ, ಗಣೇಶ, ಋಷಿಗಳು ಲಕ್ಷ್ಮಿ, ವಿಷ್ಣು, ಸಿಂಹದ ಆಕಾರದಲ್ಲಿರುವ ಋಷಿ ಎಲ್ಲಾ ಶಿಲ್ಪಗಳನ್ನು ರಂಗಮಂಟಪದ ಬಲಬದಿಯಲ್ಲಿ ಕೆತ್ತಲಾಗಿದೆ.

ರಂಗಮಂಟಪದ ಎಡಬದಿಯಲ್ಲಿ ವಾದ್ಯ ನುಡಿಸುವವರು, ನರ್ತಿಸುವ ವೀರರು, ನಂದಿ, ಆನೆ, ಯಾಳಿ, ಈಶ್ವರನನ್ನು ಪೂಜಿಸುತ್ತಿರುವ ಶಿವಭಕ್ತ, ಧ್ಯಾನಾಸಕ್ತನಾದ ಶಿವ, ವಿಷ್ಣು, ನಂದಿ, ಋಷಿಗಳ ಚಿತ್ರಗಳನ್ನು ಸಿಂಹದ ಮೇಲೆ ಕುಳಿತಿರುವ ಜಟಾಧಾರಿಯಾದ ಶಿವ, ಉಗ್ರನರಸಿಂಹನು ಹಿರಣ್ಯಕಶ್ಯಪನನ್ನು ಸಂಹರಿಸುತ್ತಿರುವ ಶಿಲ್ಪವು ಅತ್ಯಂತ ಮನೋಜ್ಞವಾಗಿದೆ. ಉಗ್ರನಾದ ಸಿಂಹನ ಶಿಲ್ಪದಲ್ಲಿ ಉಗ್ರನರಸಿಂಹನು ಎಂಟು

ಕೈಗಳನ್ನು ಹೊಂದಿದ್ದಾನೆ. ನಾಲ್ಕು ಕೈಗಳಲ್ಲಿ ಆಯುಧವನ್ನು ಹಿಡಿದಿದ್ದಾನೆ. ಎರೆಡು ಕೈಗಳಿಂದ ಹಿರಣ್ಯಕಶ್ಯಪುವಿನ ತಲೆ ಮತ್ತು ಕಾಲುಗಳನ್ನು ಹಿಡಿದುಕೊಂಡಿದ್ದಾನೆ. ಉಳಿದ ಎರಡು ಕೈಗಳಿಂದ ಹಿರಣ್ಯ ಕಶ್ಯಪುವಿನ ಹೊಟ್ಟೆಯನ್ನು ಸೀಳುತ್ತಿರುವ ದೃಷ್ಯವನ್ನು ಕೆತ್ತಲಾಗಿದೆ. ಇದಲ್ಲದೆ ಶಿವಲಿಂಗ ಸೀತೆ ಗೋಪಾಲ, ನಾಟ್ಯಗಣೇಶ, ಇಂದ್ರಜೀತು, ಗಂಡಭೇರುಂಡ, ಆರು ಆನೆಗಳನ್ನು ಹೊತ್ತು ಹಾರುತ್ತಿರುವ ಶಿಲ್ಪಗಳು ರಂಗ ಮಂಟಪದ ಕಂಬಗಳಲ್ಲಿ ಮೂಡಿಬಂದಿವೆ.

ರಂಗಮಂಟಪದಿಂದ ಒಳಗೆ ಪ್ರವೇಶಿಸಿದರೆ ದೊರೆಯುವುದೇ ನವರಂಗ. ನವರಂಗವು ನಾಲ್ಕು ಪ್ರಮುಖ ಕಂಬಗಳನ್ನು ಹೊಂದಿದೆ. ಇವು ನಾಲ್ಕು ಕಂಬಗಳು ಮೂರು ಚಚ್ಚೌಕಾರದ ಭಾಗಗಳನ್ನು ಹೊಂದಿವೆ. ಅವುಗಳಲ್ಲಿ ಯಾಳಿ, ಶಿವಲಿಂಗ, ವಿಷ್ಣು ಮುಂತಾದ ಚಿತ್ರಗಳನ್ನು ಕಾಣಬಹುದು. ನವರಂಗದ ಮುಂದೆ ಅಂತರಾಳವಿದೆ. ಇದು ನವರಂಗ ಮತ್ತು ಗರ್ಭಗೃಹವನ್ನು ಸೇರಿಸುವ ಭಾಗವಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಕಾಣಬಹುದು. ಶಿವಲಿಂಗವನ್ನು ಕರಿಯ ಕಲ್ಲಿನಲ್ಲಿ ಕೆತ್ತಲಾಗಿದೆ. ಶಿವಲಿಂಗವು ಮೂರು ಅಡಿ ಎತ್ತರವಾಗಿದೆ.

ಸೋಮೇಶ್ವರ ದೇವಸ್ಥಾನದ ನವರಂಗದ ಹೊರಭಿತ್ತಿಯಲ್ಲಿ ಗಣೇಶನನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಗಣೇಶನ ಅಕ್ಕಪಕ್ಕದಲ್ಲಿ ಋಷಿಮುನಿಗಳನ್ನು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ಲಿಂಗದ ಮೇಲೆ ಹಾಲೆರೆಯುವ ಹಸುವಿನ ಚಿತ್ರ. ಸೋಮೇಶ್ವರನ ಗರ್ಭಗೃಹದ ಹಿಂದೆ ಮಹಾವಿಷ್ಣು, ಆಂಜನೇಯರ ಚಿತ್ರಗಳಿವೆ. ದೇವಸ್ಥಾನದ ಇಡೀ ಭಿತ್ತಿಯಲ್ಲಿ ಅರ್ಧಕಂಬ, ಕೋಷ್ಠಗಳನ್ನು ಕಾಣಬಹುದಾಗಿದೆ.

**ಅಮ್ಮನವರ ಸನ್ನಿಧಿ**

ಸೋಮೇಶ್ವರ ದೇವಸ್ಥಾನದ ಎಡಭಾಗದಲ್ಲಿ ಅಂದರೆ ಉತ್ತರದ ದಿಕ್ಕಿನಲ್ಲಿ ಅಮ್ಮನವರ ಸನ್ನಿದಿ ಇದೆ. ನವರಂಗವು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ಆದರೆ ಮುಂದೆ ಅಂತರಾಳವಿದೆ. ಇದು ಗರ್ಭಗೃಹ ಮತ್ತು ನವರಂಗಕ್ಕೆ ಜೋಡಿಸುವ ಕೊಂಡಿಯಾಗಿದೆ. ಅಂತರಾಳವು ನವರಂಗ ಮತ್ತು ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಗರ್ಭಗೃಹದಲ್ಲಿ ಅಮ್ಮನವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಮಾರು ಎರಡುವರೆ ಅಡಿ ಎತ್ತರದ ಅಮ್ಮನವರ ಮೂರ್ತಿಯು ತುಂಬಾ ಸುಂದರವಾಗಿ ಮೂಡಿಬಂದಿದೆ.

ವಿಜಯನಗರ ಕಾಲದಲ್ಲೇ ನಿರ್ಮಿತವಾದ ಈ ಅಮ್ಮನವರ ಸನ್ನಿಧಿಗೆ ವಿಶಿಷ್ಠವಾದ ಕಲೆಯ ಮೆರೆಗಿದೆ. ಗಿರಿಜಾ ಕಲ್ಯಾಣದ ದೃಶ್ಯಚಿತ್ರಗಳನ್ನು ಈ ದೇವಸ್ಥಾನದ ಭಿತ್ತಿಯಲ್ಲಿ ಕೆತ್ತಲಾಗಿದೆ. ತ್ರಿಪಟ್ಟ ಕುಮುದವನ್ನು ಹೊಂದಿದ ಅಧಿಷ್ಠಾನದ ಮೇಲೆ ಈ ಚಿತ್ರಗಳನ್ನು ಕಾಣಬಹುದು. ಗಿರಿಜೆಯ ಕಲ್ಯಾಣಕ್ಕೆ ದೇವಾನುದೇವತೆಗಳು ಶಿವನು ನಂದಿವಾಹನ ರೂಢನಾಗಿ ಬರುತ್ತಿರುವ ದೃಶ್ಯ, ಅದರ ಪಕ್ಕದಲ್ಲಿ ಗಿರಿಜೆಯನ್ನು ಧಾರೆ ಎರೆದು ಕೊಡುವ ದೃಶ್ಯ, ಕೊನೆಯಲ್ಲಿ ಗಿರಿಜೆಯನ್ನು ನಂದಿಯ ಮೇಲೆ ಶಿವನು, ಕೈಲಾಸಕ್ಕೆ ಕರೆದುಕೊಂಡು

ಹೋಗುವ ಚಿತ್ರವನ್ನು ಸುಂದರವಾಗಿ ಕೆತ್ತಲಾಗಿದೆ. ಹೀಗೆ ಇಡೀ ದೇವಸ್ಥಾನವು ಕಲಾಶ್ರೀಮಂತಿಕೆಯಿಂದ ಕಂಗೊಳಿಸುತ್ತದೆ(ಚಿತ್ರ ೪).

**ಪರಿವಾರ ದೇವತೆಗಳು**

ಸೋಮೇಶ್ವರ ದೇವಸ್ಥಾನದ ಆವರಣದಲ್ಲಿ ಏಳು ಪರಿವಾರ ದೇವರುಗಳನ್ನು ನೋಡಬಹುದು. ಇವು ಚಿಕ್ಕದಾದ ದೇವಸ್ಥಾನಗಳನ್ನು ಹೊಂದಿರುತ್ತವೆ. ದೇವಸ್ಥಾನದ ಗೋಪುರದ ಎಡಭಾಗದಲ್ಲಿ

೧. ಗೋಪುರ ಗಣೇಶ

೨. ಚಂದ್ರಮೌಳೇಶ್ವರ

೩. ನಾಗದೇವತೆ

೪. ಅಮ್ಮನವರ ಸನ್ನಿಧಿಯನ್ನು

ಕಾಣಬಹುದು. ಗಣೇಶ ಮತ್ತು ನಾಗದೇವತೆಗಳು ಸಾಮಾನ್ಯವಾಗಿ ಪ್ರಮುಖ ದೇವರುಗಳಿಗೆ ಎಲ್ಲಾ ಹಿಂದೂ ಧರ್ಮೀಯರು ಪೂಜಿಸುತ್ತಿದ್ದರಿಂದ ವೈಷ್ಣವ ಪಂಥೀಯರು ಈ ದೇವರುಗಳನ್ನು ಆರಾಧಿಸುತ್ತಿದ್ದರು.

ಗೋಪುರದ ಬಲಭಾಗದಲ್ಲಿ

೧. ಭೀಮೇಶ್ವರಸ್ವಾಮಿ ದೇವಸ್ಥಾನ

೨. ಹೊನ್ನಿಗಣೇಶ ದೇವಸ್ಥಾನ

೩. ಸುಬ್ರಹ್ಮಣ್ಯ ದೇವಸ್ಥಾನ

೪. ನಂಜುಂಡೇಶ್ವರ ಸ್ವಾಮಿ

ಹೀಗೆ ವಿವಿಧ ಶೈವಧರ್ಮಕ್ಕೆ ಸೇರಿದ ಪರಿವಾರ ದೇವತೆಗಳ ಸಣ್ಣಪುಟ್ಟ ದೇವಸ್ಥಾನಗಳು ಅಲಸೂರಿನ ಸೋಮೇಶ್ವರ ದೇವಸ್ಥಾನದ ಪ್ರಾಕಾರದಲ್ಲಿವೆ. ಇದರಿಂದಾಗಿ ಇಡೀ ಸೋಮೇಶ್ವರ ದೇವಸ್ಥಾನವು ಶೈವಧರ್ಮದ ಸಾಮ್ರಾಜ್ಯವಾಗಿ ರೂಪಗೊಂಡಿದೆ.

**೩. ಕುರುಡು ಮಲ್ಲೆಯ ಗಣೇಶ ದೇವಸ್ಥಾನ**

ವಿಜಯನಗರ ಕಾಲದ ಆಡಳಿತದ ಕೇಂದ್ರವಾಗಿದ್ದ ಮುಳುಬಾಗಿಲಿನಿಂದ ೮ ಕಿಲೋ ಮೀಟರ್ ದೂರದಲ್ಲಿ ಕುರುಡಮಲೈ ಇದೆ. ಈಗ ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲೂಕಿನ ಕುರುಡುಮಲೈ ಎಂಬುದು ಇಂದು ಪುಟ್ಟ ಗ್ರಾಮ. ಈ ಗ್ರಾಮದ ಸುತ್ತಲು ಬೆಟ್ಟಗಳು ಸುತ್ತುವರೆದಿವೆ. ಹೆಸರಿನ ಉತ್ತರಾರ್ಧ ಮಲೈ ಎಂಬುದರ ಅರ್ಥ ಬೆಟ್ಟವೆಂದೇ ಇರುವುದು ಸರಿ. ಕುರುಡು ಎಂಬ ಶಬ್ದದ ಅರ್ಥ ಕೂಡು ಎಂದಿರಬಹುದು. ಆದ್ದರಿಂದ ಕೂಡು ಮಲೈ ಹೋಗಿ ಈಗ ಕುರುಡು ಮಲೈ ಆಗಿದೆ.



೧

೨

೩

೪

೩.   ೧).ಗರ್ಭ ಗೃಹ ೨). ಅಂತರಾಳ ೩). ಸಭಾ ಮಂಟಪ (ನವರಂಗ) ೪). ಮಹಾ ರಂಗ ಮಂಟಪ

೫. ಗಣೇಶನ ದೇವಸ್ಥಾನ ಕುರುಡುಮಲೈನ   ತಲನಕ್ಷೆ

ದೂರದಲ್ಲಿ ಒಂದು ಪುಷ್ಕರಣಿ ಇದೆ. ಪುಷ್ಕರಣಿಯ ಮಧ್ಯದಲ್ಲಿ ಸುಂದರವಾದ ಒಂದು ಮಂಟಪದ ರಚನೆಯಿದೆ. ಮಂಟಪವನ್ನು ನಾಲ್ಕು ಕಂಬಗಳ ಸಹಾಯದಿಂದ ರಚಿಸಲಾಗಿದ್ದು, ಈ ಮಂಟಪವು ಮೇಲೆ ಶಿಖರವನ್ನು ಹೊಂದಿದೆ. ವೀರಭದ್ರ ದೇವಾಲಯದ ಹಿಂದೆ ಹೆಬ್ಬಂಡೆಯಲ್ಲಿ ವಿಜಯನಗರ ಕಾಲದ ಶಾಸನವಿದೆ(ಚಿತ್ರ ೨).

## ೨. ಅಲಸೂರಿನ ಸೋಮೇಶ್ವರ ದೇವಸ್ಥಾನ

ಬೆಂಗಳೂರಿನ ಪ್ರತಿಷ್ಠಿತ ಬಡಾವಣೆಗಳಲ್ಲಿ ಒಂದಾದ ಅಲಸೂರು ಐತಿಹಾಸಿಕ ಮಹತ್ವದ ಸ್ಥಳ. ಈ ಬೆಂಗಳೂರನ್ನು ಕಟ್ಟಿದ ಒಂದನೇ ಕೆಂಪೇಗೌಡನು ಅಲಸೂರಿನಲ್ಲಿ ಆಳ್ವಿಕೆ ನಡೆಸಿದನು. ಒಂದನೆಯ ಕೆಂಪೇಗೌಡನು ಹದಿನಾರನೇಯ ಶತಮಾನದಲ್ಲಿ ವಿಜಯನಗರದ ಸಾಮಂತ ಅರಸನಾಗಿದ್ದನು. ಯಲಹಂಕ ಪ್ರಭುಗಳು ಎಂದು ಪ್ರಸಿದ್ಧರಾದ ಇವರು ಮೊದಲಿಗೆ ಮಾಗಡಿಯನ್ನು, ನಂತರ ಬೆಂಗಳೂರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು.

ಅಲಸೂರಿನ ಬಡಾವಣೆಯಲ್ಲಿ ದೇವಸ್ಥಾನದ ಕಡೆಗೆ ನಡೆಯುತ್ತಾ ಹೋದರೆ, ಸೋಮೇಶ್ವರ ದೇವಸ್ಥಾನದ ಅತೀ ದೊಡ್ಡ ಗೋಪುರವು ನೋಡುಗರನ್ನು ಆಕರ್ಷಿಸುತ್ತದೆ. ಈ "ರಾಯ" ಗೋಪುರವು ಆರು ತಲಗಳನ್ನು ಹೊಂದಿದೆ. ಇದರ ರಚನೆಯು ವಿಜಯನಗರ ರಾಜರು ನಿರ್ಮಿಸುತ್ತಿದ್ದ ರಾಯಗೋಪುರದ ಮಾದರಿಯಲ್ಲಿದೆ. ಈಗ ಈ ಗೋಪುರವನ್ನು ಪುನರುಜ್ಜೀವನಗೊಳಿಸಿ ತೈಲವರ್ಣವನ್ನು ಹಚ್ಚಿರುತ್ತಾರೆ. ಗೋಪುರದ ತಲಗಳಲ್ಲಿ ವಿಷ್ಣು, ಮಹಾವಿಷ್ಣು, ಉಗ್ರನರಸಿಂಹ, ಲಕ್ಷ್ಮೀಸಮೇತನಾದ ವಿಷ್ಣು ಶಿವಪಾರ್ವತಿಯರು ಇಂದ್ರ, ಚಂದ್ರ, ಗಣೇಶ, ರಾವಣ, ಆಂಜನೇಯ ಕೊನೆಯಲ್ಲಿ ಗೋಪುರದ ಗ್ರೀವದಲ್ಲಿ ನಾಲ್ಕು ದಿಕ್ಕಿಗೂ ಬಸವಗಳಿರುವುದನ್ನು ಕಾಣಬಹುದು. ಇವುಗಳನ್ನು ಗ್ರೀವ ದೇವತೆಗಳೆಂದು ಕರೆಯಲಾಗುತ್ತದೆ. ದೇವಸ್ಥಾನದ ದ್ವಾರದ ಎಡಬಲಗಳಲ್ಲಿ ನಂದಿ ಭೃಂಗದ ವಿಗ್ರಹಗಳನ್ನು ಕಾಣಬಹುದು. ಈ ವಿಗ್ರಹಗಳ ಎತ್ತರವು ನಾಲ್ಕು ಅಡಿ ಇದೆ. ಈ ದ್ವಾರ ಮಂಟಪವು ಮುಖ್ಯವಾಗಿ ಆರು ಕಂಬಗಳನ್ನೂ ಹೊಂದಿದೆ. ಮೊದಲ ದ್ವಾರಬಾಗಿಲಿನಲ್ಲಿ ಲತಾಸುರುಳಿಯನ್ನು ಹಿಡಿದು ನಿಂತಿರುವ ಬಾಲಕಿಯರ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಮಂಟಪದ ದೇವಸ್ಥಾನದ ಕಡೆಯ ಬಾಗಿಲ ಕಡೆಯ ಬಾಗಿಲಿನಲ್ಲಿ ಲತಾ ತೋರಣವನ್ನು ಹೊತ್ತು ನಿಂತಿರುವ ಬಾಲಿಕೆಯರ ಶಿಲ್ಪಗಳನ್ನು ಚಿತ್ರಿಸಲಾಗಿದೆ.

ದೇವಾಲಯವನ್ನು ಪ್ರವೇಶಿಸಿದರೆ ವಿಶಾಲವಾದ ಹಜಾರವಿದೆ. ಇಡೀ ದೇವಸ್ಥಾನವನ್ನು ಹತ್ತು ಅಡಿ ಎತ್ತರದ ಪ್ರಾಕಾರವು ಸುತ್ತುವರೆದಿದೆ. ದ್ವಾರಬಾಗಿಲ ಮುಂದೆ ಪ್ರಥಮವಾಗಿ ಕಾಣುವುದೇ ಹನ್ನೆರಡು ಅಡಿಯಷ್ಟು ಎತ್ತರವಾದ ಬಲಿಪೀಠವು ಹೆಚ್ಚು ಅಲಂಕೃತವಾಗಿ ರಚನೆಗೊಂಡಿದೆ. ಬಲಿಪೀಠದ ಕೆಳಗೆ ಅಧಿಷ್ಠಾನದ ರಚನೆಯನ್ನು ಹೊಂದಿದೆ. ಬಲಿಪೀಠದ ತುದಿಯಲ್ಲಿ ತಿರುವಿ ಹಾಕಲಾದ ಪದ್ಮದ

೧

೨

೩

೪

೫










೧). ಗರ್ಭ ಗೃಹ ೨).ಪ್ರದಕ್ಷಣಾ ಪಥ ೩).ಅರ್ಧ ಮಂಟಪ ೪). ನವರಂಗ ೫).ಮುಖ ಮಂಟಪ ೬).ಧ್ವಜ ಸ್ತಂಭ
೭).ಬಲಿ ಪೀಠ ೮). ನಂದಿ ಮಂಟಪ

೨. ಅಲಸೂರಿನ ಸೋಮೇಶ್ವರ ದೇವಸ್ಥಾನದ ತಲನಕ್ಷೆ

ರಚನೆಯನ್ನು ಕಾಣಬಹುದಾಗಿದೆ. ದೇವಸ್ಥಾನದ ಪೌಳಿಯಲ್ಲಿ ಹಲವಾರು ದೇವರುಗಳ ದೇವಸ್ಥಾನಗಳು ನಿರ್ಮಾಣವಾಗಿವೆ. ಈ ಎಲ್ಲಾ ದೇವಸ್ಥಾನಗಳು ಪರಿವಾರ ದೇವತೆಗಳಾಗಿವೆ. ಮುಖ್ಯ ದೇವಸ್ಥಾನವಾದ ಸೋಮೇಶ್ವರ ದೇವಸ್ಥಾನವು ಭವ್ಯವಾಗಿ ರಚನೆಗೊಂಡಿದೆ. ದೇವಸ್ಥಾನವು ಚೋಳರ ಕಾಲದ್ದೆಂದು ಅರ್ಚಕರು ಹೇಳುತ್ತಾರೆ. ಗರ್ಭಗೃಹದ ಶಿಲ್ಪಗಳು ಇದನ್ನು ಪುಷ್ಠೀಕರಿಸುತ್ತವೆ. ಆದರೆ ದೇವಸ್ಥಾನದ ರಚನೆಯೆಲ್ಲಾ ವಿಜಯನಗರ ಶೈಲಿಯಲ್ಲೇ ಇದೆ. ಒಂದನೆಯ ಕೆಂಪೇಗೌಡನು ಅಲಸೂರಿನ ಈ ಸೋಮೇಶ್ವರ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದನೆಂದು ದೇವಸ್ಥಾನದಲ್ಲಿರುವ ಶಾಸನವು ಹೇಳುತ್ತದೆ.

ಬಲಿಪೀಠ ಮುಂದೆ ರಚನೆಗೊಂಡಿರುವುದು ಧ್ವಜಸ್ತಂಭ. ಇದು ಬಲಿಪೀಠದಂತೆಯೇ ರಚನೆಯನ್ನು ಹೊಂದಿದೆ. ನಡುವೆ ಒಂದು ಸಣ್ಣ ರಂಧ್ರವನ್ನು ಬಿಡಲಾಗಿದೆ. ರಂಧ್ರದಲ್ಲಿ ಸ್ತಂಭವನ್ನು ನಿಲ್ಲಿಸಲಾಗಿದೆ. ಸ್ತಂಭದ ಕೆಳಗಿನ ಭಾಗವು ಶಿಲಾಭಾಗವಾಗಿದ್ದು, ಪ್ರಾಚೀನಕಾಲದ ರಚನೆಯನ್ನು ಹೊಂದಿದೆ. ಇದರ ಮೇಲಿನ ಸ್ತಂಭವನ್ನು ಶಿಥಿಲವಾದಾಗಲೆಲ್ಲ ತೆಗೆದು ಹೊಸದಾದ ಸ್ತಂಭವನ್ನು ನಿಲ್ಲಿಸುತ್ತಾರೆ. ಸ್ತಂಭವನ್ನು ಕಾಷ್ಠದಿಂದ ಮಾಡಲಾಗಿರುತ್ತದೆ. ಈ ಕಾಷ್ಠಸ್ತಂಭಕ್ಕೆ ಹಿತ್ತಾಳೆಯ ಕವಚವನ್ನು ತೊಡಿಸಲಾಗಿದೆ. ಧ್ವಜಸ್ತಂಭದ ಮುಂದುಗಡೆಯಲ್ಲಿ ನಂದಿಮಂಟಪವು ರಚನೆಗೋಂಡಿದೆ. ನಾಲ್ಕು ಸರಳವಾದ ಕಂಬಗಳ ಸಹಾಯದಿಂದ ನಂದಿಮಂಟಪವು ರಚನೆಗೊಂಡಿದೆ. ಕಂಬಗಳು ಆರು ಅಡಿ ಎತ್ತರವನ್ನು ಹೊಂದಿವೆ. ಮೇಲ್ಗಡೆಯಲ್ಲಿ ವಿಜಯನಗರ ಶೈಲಿಯಲ್ಲಿ ಗೋಪುರವನ್ನು ರಚಿಸಲಾಗಿದೆ, ಗೋಪುರವು ಚಿಕ್ಕದಾಗಿದೆ.

ನಂದಿಮಂಟಪದ ಎದುರಿನಲ್ಲಿ ರಚನೆಗೊಂಡಿರುವುದೇ ಸೋಮೇಶ್ವರ ದೇವಸ್ಥಾನ. ದೇವಸ್ಥಾನವು ಸುಮಾರು ಐದು ಅಡಿ ಎತ್ತರವಾದ ಅಧಿಷ್ಠಾನದಿಂದ ನಿರ್ಮಿಸಲಾಗಿದೆ. ಅಧಿಷ್ಠಾನವು ದೇವಾಲಯದ ಸುತ್ತಲೂ ಕಂಡುಬರುವುದು. ಈ ಅಧಿಷ್ಠಾನವು ಸಾಲಾಗಿ ಬಳೆಯ ಅಕಾರದ ರಚನೆಯನ್ನು ಹೊಂದಿದೆ. ಇದಕ್ಕೆ 'ಕಟಿಕಾವೃತ' ಕುಮುದ ಎಂದು ಕರೆಯಲಾಗಿದೆ.[೨]

ಕಟಿಕಾವೃತ ಕುಮುದವನ್ನು ಹೊಂದಿರುವ ಅಧಿಷ್ಠಾನದ ಮೇಲೆ ರಂಗಮಂಟಪವನ್ನು ರಚಿಸಲಾಗಿದೆ. ಇದು ಅತ್ಯಂತ ಸುಂದರವಾಗಿ ಮೂಡಿಬಂದಿದೆ. ವಿಶಾಲವಾದ ರಂಗಮಂಟಪವು ನಲವತ್ತೆಂಟು ಕಂಬಗಳನ್ನೊಳಗೊಂಡಿದೆ. ರಂಗಮಂಟಪಕ್ಕೆ ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಸೋಪಾನವನ್ನು ರಚಿಸಲಾಗಿದೆ. ಪೂರ್ವದಿಕ್ಕಿನಲ್ಲಿರುವ ಸೋಪಾನವು ಸಿಂಹಸೋಪಾನವಾದರೆ, ದಕ್ಷಿಣದಲ್ಲಿರುವ ಸೋಪಾನವು ಸಹ ಸಿಂಹದಸೋಪಾನವೇ ಇದೆ. ಉತ್ತರದಲ್ಲಿ ಮಾತ್ರ ಆನೆಯ ಸೋಪಾನವನ್ನು ಹೊಂದಿರುವುದು ಸೋಪಾನಕ್ಕೆ ಹೊಂದಿಕೊಂಡಂತಿರುವ ಎರಡೆರಡು ಕಂಬಗಳು ಒಟ್ಟು ಆರು ಕಂಬಗಳು ಯಾಳಿ ಸ್ತಂಭಗಳಾಗಿವೆ. ಇವು ವಿಜಯನಗರ ಕಾಲದಲ್ಲಿ ರಚನೆಗೊಂಡ ವಿಶಿಷ್ಟಕಂಬಗಳು ಯಾಳಿ ಕಂಬದ ಹಿಂದೆ ಪೂರ್ಣ ಕಂಬವಿದೆ, ಅದರ ಮುಂದೆ ಕೆಳಭಾಗದಲ್ಲಿ ಪೀಠವಿದೆ. ಪೀಠದ ಮೇಲ್ಗಡೆಯಲ್ಲಿ ಆನೆ ಇದೆ.

ಆನೆಯು ಸಿಂಹವನ್ನು ಹೊತ್ತಂತೆ ರಚನೆಗಳನ್ನು ಕಾಣಬಹುದು. ಸಿಂಹದ ಮೇಲೆ ಒಬ್ಬ ಸವಾರನು ಸವಾರಿ ಮಾಡುವಂತೆ ಕೆತ್ತಲಾಗಿದೆ. ಸವಾರನು ಸಿಂಹದ ಬಾಯಿಯಲ್ಲಿ ಮೂಗುದಾರವನ್ನು ಹಾಕಿ ಅದನ್ನು ಹಿಡಿದು ಸವಾರಿ ಮಾಡುವಂತೆ ಕೆತ್ತಲಾಗಿದೆ(ಚಿತ್ರ ೩).

ಯಾಳಿ ಕಂಬಗಳ ಪಕ್ಕದಲ್ಲಿ ವಿಜಯ ವಿಠಲ ಸ್ವಾಮಿ ದೇವಸ್ಥಾನದ ಕಂಬಗಳಂತೆ ಪಕ್ಕದಲ್ಲಿ ಹದಿನಾರು ಉಪಕಂಬಗಳ ಸ್ತಂಭಗಳು ಕಂಡುಬರುತ್ತದೆ. ಒಂದು ಪ್ರಧಾನವಾದ ಕಂಬದ ಪಕ್ಕದಲ್ಲೇ ಉಪಸ್ತಂಭಗಳನ್ನು ನಿರ್ಮಿಸಲಾಗಿದೆ. ಹೆಚ್ಚು ಭಾರವಿರುವ ಶಿಲಾಮಂಟಪವನ್ನು ಹೊರಲು ಈ ರೀತಿಯ ಬಲಿಷ್ಠ ಕಂಬಗಳನ್ನು ವಿಜಯನಗರ ಕಾಲದಲ್ಲಿ ನಿಲ್ಲಿಸಲಾಗುತ್ತಿತ್ತು. ನವರಂಗಕ್ಕೆ ಪ್ರವೇಶಿಸುವ ಭಾಗದಲ್ಲಿ ರಂಗಮಂಟಪದಲ್ಲಿನ ಸರಳ ಕಂಬಗಳ ರಚನೆಯನ್ನು ಕಾಣಬಹುದು. ಈ ಕಂಬಗಳಿಗೆ ಒಂದು ಉಪಕಂಬವನ್ನು ಕೆತ್ತಲಾಗಿದೆ. ಈ ಉಪಕಂಬದ ಕೆಳಗೆ ಸಿಂಹವು ಎತ್ತಿಹಿಡಿದಂತೆ ಕೆತ್ತಲಾಗಿದೆ. ಇದರ ಕೆಳಗಡೆಯಲ್ಲಿ ಕಂಬಕ್ಕೆ ಉಪಪೀಠದ ರಚನೆ ಕಾಣಬಹುದು. ಇನ್ನುಳಿದವು ಸರಳ ರಚನೆಯನ್ನು ಮೂರು ಚೌಕಾಕಾರವನ್ನು ಹೊಂದಿರುವ ಕಂಬಗಳಿವೆ. ಹೀಗೆ ರಂಗಮಂಟಪವು ಒಟ್ಟು ನಾಲ್ಕು ರೀತಿಯ ಸ್ತಂಭಗಳನ್ನು ಹೊಂದಿರುವುದನ್ನು ಕಾಣಬಹುದು.

| | |
|---|---|
| ೧. ಸೋಪಾನದ ಪಕ್ಕದಲ್ಲಿರುವ ಯಾಳಿ ಕಂಬಗಳು | - ೦೬ |
| ೨. ಅದರ ಪಕ್ಕದಲ್ಲಿರುವ ಎರಡು ಉಪಕಂಬಗಳನ್ನು ಹೊಂದಿರುವ ಕಂಬಗಳು | - ೦೬ |
| ೩. ಒಂದು ಉಪಸ್ತಂಭವನ್ನು ಹೊಂದಿರುವ ಕಂಬಗಳು | - ೧೮ |
| ೪. ಸರಳವಾದ ಕಂಬಗಳು | - ೧೮ |
| ಒಟ್ಟು | - ೪೮ |

ಹೀಗೆ ಒಟ್ಟು ನಲವತ್ತೆಂಟು ಕಂಬಗಳನ್ನು ರಂಗಮಂಟಪವು ಹೊಂದಿದ್ದು, ವಿಶಾಲವಾದ ರಚನೆಯನ್ನು ಹೊಂದಿದೆ. ರಂಗಮಂಟಪದಲ್ಲಿರುವ ಕಂಬಗಳಲ್ಲಿ ಶಿವಪಾರ್ವತಿಯರ ವಿಗ್ರಹ, ಯಾಳಿ, ಜಟಾಧಾರಿಯಾದ ಶಿವ, ಹಂಸ, ಆಂಜನೇಯ, ವಿಷ್ಣು ಉಗ್ರನರಸಿಂಹ ಆನೆ, ಬಾಲಕೃಷ್ಣ, ಗಣೇಶ, ಋಷಿಗಳು ಲಕ್ಷ್ಮಿ, ವಿಷ್ಣು, ಸಿಂಹದ ಆಕಾರದಲ್ಲಿರುವ ಋಷಿ ಎಲ್ಲಾ ಶಿಲ್ಪಗಳನ್ನು ರಂಗಮಂಟಪದ ಬಲಬದಿಯಲ್ಲಿ ಕೆತ್ತಲಾಗಿದೆ.

ರಂಗಮಂಟಪದ ಎಡಬದಿಯಲ್ಲಿ ವಾದ್ಯ ನುಡಿಸುವವರು, ನರ್ತಿಸುವ ವೀರರು, ನಂದಿ, ಆನೆ, ಯಾಳಿ, ಈಶ್ವರನನ್ನು ಪೂಜಿಸುತ್ತಿರುವ ಶಿವಭಕ್ತ, ಧ್ಯಾನಾಸಕ್ತನಾದ ಶಿವ, ವಿಷ್ಣು, ನಂದಿ, ಋಷಿಗಳ ಚಿತ್ರಗಳನ್ನು ಸಿಂಹದ ಮೇಲೆ ಕುಳಿತಿರುವ ಜಟಾಧಾರಿಯಾದ ಶಿವ, ಉಗ್ರನರಸಿಂಹನು ಹಿರಣ್ಯಕಶ್ಯಪನನ್ನು ಸಂಹರಿಸುತ್ತಿರುವ ಶಿಲ್ಪವು ಅತ್ಯಂತ ಮನೋಜ್ಞವಾಗಿದೆ. ಉಗ್ರನಾದ ಸಿಂಹನ ಶಿಲ್ಪದಲ್ಲಿ ಉಗ್ರನರಸಿಂಹನು ಎಂಟು

ಕೈಗಳನ್ನು ಹೊಂದಿದ್ದಾನೆ. ನಾಲ್ಕು ಕೈಗಳಲ್ಲಿ ಆಯುಧವನ್ನು ಹಿಡಿದಿದ್ದಾನೆ. ಎರೆಡು ಕೈಗಳಿಂದ ಹಿರಣ್ಯಕಶ್ಯಪುವಿನ ತಲೆ ಮತ್ತು ಕಾಲುಗಳನ್ನು ಹಿಡಿದುಕೊಂಡಿದ್ದಾನೆ. ಉಳಿದ ಎರಡು ಕೈಗಳಿಂದ ಹಿರಣ್ಯ ಕಶ್ಯಪುವಿನ ಹೊಟ್ಟೆಯನ್ನು ಸೀಳುತ್ತಿರುವ ದೃಷ್ಯವನ್ನು ಕೆತ್ತಲಾಗಿದೆ. ಇದಲ್ಲದೆ ಶಿವಲಿಂಗ ಸೀತೆ ಗೋಪಾಲ, ನಾಟ್ಯಗಣೇಶ, ಇಂದ್ರಜೀತು, ಗಂಡಭೇರುಂಡ, ಆರು ಆನೆಗಳನ್ನು ಹೊತ್ತು ಹಾರುತ್ತಿರುವ ಶಿಲ್ಪಗಳು ರಂಗ ಮಂಟಪದ ಕಂಬಗಳಲ್ಲಿ ಮೂಡಿಬಂದಿವೆ.

ರಂಗಮಂಟಪದಿಂದ ಒಳಗೆ ಪ್ರವೇಶಿಸಿದರೆ ದೊರೆಯುವುದೇ ನವರಂಗ. ನವರಂಗವು ನಾಲ್ಕು ಪ್ರಮುಖ ಕಂಬಗಳನ್ನು ಹೊಂದಿದೆ. ಇವು ನಾಲ್ಕು ಕಂಬಗಳು ಮೂರು ಚಚ್ಚೌಕಾರದ ಭಾಗಗಳನ್ನು ಹೊಂದಿವೆ. ಅವುಗಳಲ್ಲಿ ಯಾಳಿ, ಶಿವಲಿಂಗ, ವಿಷ್ಣು ಮುಂತಾದ ಚಿತ್ರಗಳನ್ನು ಕಾಣಬಹುದು. ನವರಂಗದ ಮುಂದೆ ಅಂತರಾಳವಿದೆ. ಇದು ನವರಂಗ ಮತ್ತು ಗರ್ಭಗೃಹವನ್ನು ಸೇರಿಸುವ ಭಾಗವಾಗಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಕಾಣಬಹುದು. ಶಿವಲಿಂಗವನ್ನು ಕರಿಯ ಕಲ್ಲಿನಲ್ಲಿ ಕೆತ್ತಲಾಗಿದೆ. ಶಿವಲಿಂಗವು ಮೂರು ಅಡಿ ಎತ್ತರವಾಗಿದೆ.

ಸೋಮೇಶ್ವರ ದೇವಸ್ಥಾನದ ನವರಂಗದ ಹೊರಭಿತ್ತಿಯಲ್ಲಿ ಗಣೇಶನನ್ನು ಪ್ರತಿಷ್ಠಾಪನೆ ಮಾಡಲಾಗಿದೆ. ಗಣೇಶನ ಅಕ್ಕಪಕ್ಕದಲ್ಲಿ ಋಷಿಮುನಿಗಳನ್ನು ಕೆತ್ತಲಾಗಿದೆ. ಇದರ ಪಕ್ಕದಲ್ಲಿ ಲಿಂಗದ ಮೇಲೆ ಹಾಲೆರೆಯುವ ಹಸುವಿನ ಚಿತ್ರ. ಸೋಮೇಶ್ವರನ ಗರ್ಭಗೃಹದ ಹಿಂದೆ ಮಹಾವಿಷ್ಣು, ಆಂಜನೇಯರ ಚಿತ್ರಗಳಿವೆ. ದೇವಸ್ಥಾನದ ಇಡೀ ಭಿತ್ತಿಯಲ್ಲಿ ಅರ್ಧಕಂಬ, ಕೋಷ್ಠಗಳನ್ನು ಕಾಣಬಹುದಾಗಿದೆ.

### ಅಮ್ಮನವರ ಸನ್ನಿಧಿ

ಸೋಮೇಶ್ವರ ದೇವಸ್ಥಾನದ ಎಡಭಾಗದಲ್ಲಿ ಅಂದರೆ ಉತ್ತರದ ದಿಕ್ಕಿನಲ್ಲಿ ಅಮ್ಮನವರ ಸನ್ನಿದಿ ಇದೆ. ನವರಂಗವು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ಆದರೆ ಮುಂದೆ ಅಂತರಾಳವಿದೆ. ಇದು ಗರ್ಭಗೃಹ ಮತ್ತು ನವರಂಗಕ್ಕೆ ಜೋಡಿಸುವ ಕೊಂಡಿಯಾಗಿದೆ. ಅಂತರಾಳವು ನವರಂಗ ಮತ್ತು ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಗರ್ಭಗೃಹದಲ್ಲಿ ಅಮ್ಮನವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಮಾರು ಎರಡುವರೆ ಅಡಿ ಎತ್ತರದ ಅಮ್ಮನವರ ಮೂರ್ತಿಯು ತುಂಬಾ ಸುಂದರವಾಗಿ ಮೂಡಿಬಂದಿದೆ.

ವಿಜಯನಗರ ಕಾಲದಲ್ಲೇ ನಿರ್ಮಿತವಾದ ಈ ಅಮ್ಮನವರ ಸನ್ನಿಧಿಗೆ ವಿಶಿಷ್ಠವಾದ ಕಲೆಯ ಮೆರೆಗಿದೆ. ಗಿರಿಜಾ ಕಲ್ಯಾಣದ ದೃಶ್ಯಚಿತ್ರಗಳನ್ನು ಈ ದೇವಸ್ಥಾನದ ಭಿತ್ತಿಯಲ್ಲಿ ಕೆತ್ತಲಾಗಿದೆ. ತ್ರಿಪಟ್ಟ ಕುಮುದವನ್ನು ಹೊಂದಿದ ಅಧಿಷ್ಠಾನದ ಮೇಲೆ ಈ ಚಿತ್ರಗಳನ್ನು ಕಾಣಬಹುದು. ಗಿರಿಜೆಯ ಕಲ್ಯಾಣಕ್ಕೆ ದೇವಾನುದೇವತೆಗಳು ಶಿವನು ನಂದಿವಾಹನ ರೂಢನಾಗಿ ಬರುತ್ತಿರುವ ದೃಶ್ಯ, ಅದರ ಪಕ್ಕದಲ್ಲಿ ಗಿರಿಜೆಯನ್ನು ಧಾರೆ ಎರೆದು ಕೊಡುವ ದೃಶ್ಯ, ಕೊನೆಯಲ್ಲಿ ಗಿರಿಜೆಯನ್ನು ನಂದಿಯ ಮೇಲೆ ಶಿವನು. ಕೈಲಾಸಕ್ಕೆ ಕರೆದುಕೊಂಡು

ಹೋಗುವ ಚಿತ್ರವನ್ನು ಸುಂದರವಾಗಿ ಕೆತ್ತಲಾಗಿದೆ. ಹೀಗೆ ಇಡೀ ದೇವಸ್ಥಾನವು ಕಲಾಶ್ರೀಮಂತಿಕೆಯಿಂದ ಕಂಗೊಳಿಸುತ್ತದೆ(ಚಿತ್ರ ೪).

**ಪರಿವಾರ ದೇವತೆಗಳು**

ಸೋಮೇಶ್ವರ ದೇವಸ್ಥಾನದ ಆವರಣದಲ್ಲಿ ಏಳು ಪರಿವಾರ ದೇವರುಗಳನ್ನು ನೋಡಬಹುದು. ಇವು ಚಿಕ್ಕದಾದ ದೇವಸ್ಥಾನಗಳನ್ನು ಹೊಂದಿರುತ್ತವೆ. ದೇವಸ್ಥಾನದ ಗೋಪುರದ ಎಡಭಾಗದಲ್ಲಿ

೧. ಗೋಪುರ ಗಣೇಶ

೨. ಚಂದ್ರಮೌಳೇಶ್ವರ

೩. ನಾಗದೇವತೆ

೪. ಅಮ್ಮನವರ ಸನ್ನಿಧಿಯನ್ನು

ಕಾಣಬಹುದು. ಗಣೇಶ ಮತ್ತು ನಾಗದೇವತೆಗಳು ಸಾಮಾನ್ಯವಾಗಿ ಪ್ರಮುಖ ದೇವರುಗಳಿಗೆ ಎಲ್ಲಾ ಹಿಂದೂ ಧರ್ಮೀಯರು ಪೂಜಿಸುತ್ತಿದ್ದರಿಂದ ವೈಷ್ಣವ ಪಂಥೀಯರು ಈ ದೇವರುಗಳನ್ನು ಆರಾಧಿಸುತ್ತಿದ್ದರು.

ಗೋಪುರದ ಬಲಭಾಗದಲ್ಲಿ

೧. ಭೀಮೇಶ್ವರಸ್ವಾಮಿ ದೇವಸ್ಥಾನ

೨. ಹೊನ್ನಿಗಣೇಶ ದೇವಸ್ಥಾನ

೩. ಸುಬ್ರಹ್ಮಣ್ಯ ದೇವಸ್ಥಾನ

೪. ನಂಜುಂಡೇಶ್ವರ ಸ್ವಾಮಿ

ಹೀಗೆ ವಿವಿಧ ಶೈವಧರ್ಮಕ್ಕೆ ಸೇರಿದ ಪರಿವಾರ ದೇವತೆಗಳ ಸಣ್ಣಪುಟ್ಟ ದೇವಸ್ಥಾನಗಳು ಅಲಸೂರಿನ ಸೋಮೇಶ್ವರ ದೇವಸ್ಥಾನದ ಪ್ರಾಕಾರದಲ್ಲಿವೆ. ಇದರಿಂದಾಗಿ ಇಡೀ ಸೋಮೇಶ್ವರ ದೇವಸ್ಥಾನವು ಶೈವಧರ್ಮದ ಸಾಮ್ರಾಜ್ಯವಾಗಿ ರೂಪಗೊಂಡಿದೆ.

## ೩. ಕುರುಡು ಮಲೈಯ ಗಣೇಶ ದೇವಸ್ಥಾನ

ವಿಜಯನಗರ ಕಾಲದ ಆಡಳಿತದ ಕೇಂದ್ರವಾಗಿದ್ದ ಮುಳುಬಾಗಿಲಿನಿಂದ ೮ ಕಿಲೋ ಮೀಟರ್ ದೂರದಲ್ಲಿ ಕುರುಡಮಲೈ ಇದೆ. ಈಗ ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲೂಕಿನ ಕುರುಡುಮಲೈ ಎಂಬುದು ಇಂದು ಪುಟ್ಟ ಗ್ರಾಮ. ಈ ಗ್ರಾಮದ ಸುತ್ತಲು ಬೆಟ್ಟಗಳು ಸುತ್ತುವರೆದಿವೆ. ಹೆಸರಿನ ಉತ್ತರಾರ್ಧ ಮಲೈ ಎಂಬುದರ ಅರ್ಥ ಬೆಟ್ಟವೆಂದೇ ಇರುವುದು ಸರಿ. ಕುರುಡು ಎಂಬ ಶಬ್ದದ ಅರ್ಥ ಕೂಡು ಎಂದಿರಬಹುದು. ಆದ್ದರಿಂದ ಕೂಡು ಮಲೈ ಹೋಗಿ ಈಗ ಕುರುಡು ಮಲೈ ಆಗಿದೆ.



೧

೨

೩

೪

೩. ೧).ಗರ್ಭ ಗೃಹ ೨). ಅಂತರಾಳ ೩). ಸಭಾ ಮಂಟಪ (ನವರಂಗ) ೪). ಮಹಾ ರಂಗ ಮಂಟಪ

೫. ಗಣೇಶನ ದೇವಸ್ಥಾನ ಕುರುಡುಮಲೈನ ತಲನಕ್ಷೆ

ದೇವಸ್ಥಾನದ ಎಲ್ಲಾ ವ್ಯವಹಾರಗಳು ಕೂಡುಮಲೈ ಎಂಬ ಹೆಸರಿನಿಂದಲೇ ನಡೆಯುತ್ತವೆ. ಜನರ ಆಡು ಮಾತಿನಲ್ಲಿ ಕುರುಡುಮಲೈಯಾಗಿದೆ.

ಕುರುಡುಮಲೈ ಐತಿಹಾಸಿಕ ಪ್ರದೇಶ. ಇಲ್ಲಿ ಒಟ್ಟು ಮೂರು ದೇವಸ್ಥಾನಗಳಿವೆ. ಅದರಲ್ಲಿ ಸೋಮೇಶ್ವರ ದೇವಸ್ಥಾನವು ಚೋಳರ ವಾಸ್ತುಶೈಲಿಯಲ್ಲಿದ್ದರೆ ಉಳಿದ ಗಣೇಶ ಮತ್ತು ನಟೇಶ್ವರ ದೇವಸ್ಥಾನಗಳು ವಿಜಯನಗರದ ಶೈಲಿಯಲ್ಲಿವೆ. ಗಣೇಶ ದೇವಸ್ಥಾನವು ವಿಜಯನಗರ ವಾಸ್ತುಶೈಲಿಯ ಉತ್ತಮ ದೇವಾಲಯವಾಗಿದೆ.[೩]

ದೇವಸ್ಥಾನವು ಕುರುಡುಮಲೈ ಬೆಟ್ಟದ ತಪ್ಪಲಲ್ಲಿದೆ. ದೇವಸ್ಥಾನವು ಪೂರ್ವಾಭಿಮುಖವಾಗಿದೆ. ಇಡೀ ದೇವಸ್ಥಾನವು ಗ್ರಾನೈಟ್ ಶಿಲೆಯಿಂದ ನಿರ್ಮಾಣವಾಗಿದೆ. ದೇವಸ್ಥಾನದ ಸುತ್ತಲೂ ಹೊಸದಾಗಿ ಪ್ರಾಕಾರ ನಿರ್ಮಿಸಲಾಗಿದೆ. ಪ್ರಾಕಾರದಲ್ಲಿ ಅಲ್ಲಲ್ಲಿ ಹಳೆಯ ಅವಶೇಷಗಳು ಕಂಡುಬರುತ್ತವೆ. ಪ್ರಾಕಾರದ ಮಧ್ಯದಲ್ಲಿ ಗಣೇಶ ದೇವಸ್ಥಾನವನ್ನು ನಿರ್ಮಿಸಲಾಗಿದೆ.

ಈ ದೇವಾಲಯವನ್ನು ತ್ರಿಮೂರ್ತಿಗಳು ಪ್ರತಿಷ್ಠಾಪಿಸಿದರೆಂದು ಪೌರಾಣಿಕ ಕಥೆ ಇದೆ. ಪಕ್ಕದ ಬೆಟ್ಟದಲ್ಲಿ ತಪಸ್ಸು ಮಾಡುತ್ತಿದ್ದ ಕೌಂಡಿನ್ಯ ಮಹಾಋಷಿಗಳು ಗಣೇಶನನ್ನು ಪ್ರತಿಷ್ಠಾಪಿಸಿದರೆಂಬ ಐತಿಹ್ಯವೂ ಇದೆ. ಆದರೆ ದೇವಾಲಯದ ವಾಸ್ತುಶೈಲಿ ಮತ್ತು ವಿಜಯನಗರದ ಶಾಸನಗಳು ವಿಜಯನಗರ ಕಾಲದ ದೇವಾಲಯವೆಂದು ಖಚಿತವಾಗಿ ಹೇಳಬಹುದು(ಚಿತ್ರ ೫).

ದೇವಸ್ಥಾನದ ಗರ್ಭಗೃಹದಲ್ಲಿ ಹತ್ತು ಅಡಿಯ ಗಣೇಶ ಮೂರ್ತಿಯು ಭವ್ಯವಾಗಿದೆ. ಕೈಯಲ್ಲಿ ಆಯುಧಗಳನ್ನು ಧರಿಸಿದ ಗಣಪತಿ ಸುಂದರವಾದ ಮೂರ್ತಿಯಾಗಿದೆ. ಗರ್ಭಗೃಹದ ಮುಂದೆ ಅಂತರಾಳವಿಲ್ಲ. ನೇರವಾಗಿ ನವರಂಗವಿದೆ. ನವರಂಗವು ಸುಂದರವಾಗಿ ಮೂಡಿ ಬಂದಿದೆ. ನವರಂಗಕ್ಕೆ ದಕ್ಷಿಣದಲ್ಲೊಂದು ಬಾಗಿಲಿದೆ. ನವರಂಗವು ನಾಲ್ಕು ಕಂಬಗಳಿಂದ ನಿರ್ಮಿತವಾಗಿದೆ. ನವರಂಗದ ಕಂಬಗಳು ವಿಜಯನಗರ ಶೈಲಿಯಲ್ಲಿವೆ. ಕಂಬಗಳ ಗಾತ್ರವು ದೊಡ್ಡದಾಗಿರುವುದರಿಂದ ಮತ್ತು ಎತ್ತರವಾಗಿರುವುದರಿಂದ ಕಂಬಗಳ ಮೇಲಿನ ಶಿಲ್ಪಗಳು ಸ್ಪಷ್ಟವಾಗಿ ಮೂಡಿ ಬಂದಿವೆ. ಗರ್ಭಗುಡಿಯ ಬಲಗಡೆಯ ಕಂಬದಲ್ಲಿ ಪೂರ್ವಕ್ಕೆ ಭಸ್ಮಾಸುರ ನಾಟ್ಯ ಮಾಡುವ ದೃಶ್ಯ, ಮಧ್ಯದಲ್ಲಿ ಚಾಮುಂಡಿ ಮೇಲೆ ಶಿವಪಾರ್ವತಿಯರು ನಿಂತಿರುವ ಶಿಲ್ಪಗಳನ್ನು ಕೆತ್ತಲಾಗಿದೆ. ಇದೇ ಕಂಬದಲ್ಲಿ ದಕ್ಷಿಣಕ್ಕೆ ಶಿವನ ಮೂರ್ತಿ ನಾಟ್ಯ ಶಿವ, ನಂದಿರೂಢ ಶಿವನ ಮೂರ್ತಿಯನ್ನು ಕೆತ್ತಲಾಗಿದೆ. ಪಶ್ಚಿಮಕ್ಕೆ ಗಣೇಶ, ಬುದ್ಧಿಗಣೇಶ, ನಾಟ್ಯಗಣೇಶನ ಶಿಲ್ಪಗಳನ್ನು ಕೆತ್ತಲಾಗಿದೆ. ಕಂಬದ ಎತ್ತರದಲ್ಲಿ ಪಾರ್ವತಿ ಸಮೇತ ಶಿವ, ನಂದಿರೂಢ ಶಿವ, ನಾಟ್ಯ ಶಿವನನ್ನು ಕಾಣಬಹುದು. ಅದರ ಮುಂದೆ ಬರುವ ಎರಡನೇ ಕಂಬದ ಪೂರ್ವದಲ್ಲಿ ನಾಯಿ ರೂಪದ ಋಷಿ, ಷಣ್ಮುಖ, ಸಿಂಹಾರೂಢವಾದ ಶಕ್ತಿರೂಪವನ್ನು ಕೆತ್ತಲಾಗಿದೆ. ದಕ್ಷಿಣಕ್ಕೆ ಯೋಧ, ಮೀನಿನ ಮೇಲೆ ಕುಳಿತ

ಶಿವ, ನಂದಿರೂಢನಾದ ಶಿವನ ಮೂರ್ತಿಗಳನ್ನು ಕೆತ್ತಲಾಗಿದೆ. ಪಶ್ಚಿಮದಲ್ಲಿ ಋಷಿಗಳು ಕಾದಾಡುವ ದೃಶ್ಯ, ವಿಷ್ಣು, ಆನೆಯನ್ನು ಸೀಳುತ್ತಿರುವ ಶಿವನ ಉಗ್ರ ರೂಪಗಳನ್ನು ಬಿಡಿಸಲಾಗಿದೆ. ಕಂಬದ ಉತ್ತರದಲ್ಲಿ ದೇವಮೂರ್ತಿ, ವೀರಭದ್ರ ನಾಟ್ಯಶಿವನ ಮೂರ್ತಿಗಳನ್ನು ಕೆತ್ತಲಾಗಿದೆ. ಗರ್ಭಗುಡಿಯ ಎಡಬದಿಯಲ್ಲಿರುವ ಮೊದಲ ಕಂಬದಲ್ಲಿ ಪೂರ್ವಕ್ಕೆ ಲಂಕೆಯ ಉದ್ಯಾನವನದಲ್ಲಿ ಸೀತೆಯನ್ನು ಭೇಟಿ ಮಾಡಿದ ಆಂಜನೇಯನ ದೃಶ್ಯ ತುಂಬಾ ಸುಂದರವಾಗಿದೆ. ಆಂಜನೇಯನು ತನ್ನ ತಾಯಿಯ ತೊಡೆಯ ಮೇಲೆ ವಿಶ್ರಾಂತಿ ಪಡೆಯುತ್ತಿರುವ ದೃಶ್ಯ, ಬಾಲಕೃಷ್ಣನ ವಿಗ್ರಹಗಳನ್ನು ಕೆತ್ತಲಾಗಿದೆ. ಕಂಬದ ದಕ್ಷಿಣದಲ್ಲಿ ರಾಕ್ಷಸನನ್ನು ಸಂಹರಿಸಿ ಹನುಮಂತ ವಾಲಿ ಸುಗ್ರೀವರ ಯುದ್ಧದೃಶ್ಯಗಳನ್ನು ಕೆತ್ತಲಾಗಿದೆ. ಮೇಲೆ ಲಕ್ಷ್ಮೀ ನರಸಿಂಹನ ಶಿಲ್ಪವನ್ನು ಕೆತ್ತಲಾಗಿದೆ. ಅದೇ ಕಂಬದ ಪಶ್ಚಿಮದಲ್ಲಿ ರಾಮ, ಲಕ್ಷ್ಮಣ, ಆಂಜನೇಯ, ರಾಮಲಕ್ಷ್ಮಣರ ಮೂರ್ತಿಗಳನ್ನು ಕೆತ್ತಲಾಗಿದೆ. ಉತ್ತರದಲ್ಲಿ ರಾಮ ಲಕ್ಷ್ಮಣ ಹನುಮಂತನ ವಿಗ್ರಹಗಳನ್ನು ಲಕ್ಷ್ಮೀಪತಿ, ಲಕ್ಷ್ಮೀನರಸಿಂಹ ವಿಗ್ರಹಗಳನ್ನು ಕಾಣಬಹುದಾಗಿದೆ. ಇದೇ ನವರಂಗದ ಎಡಪಾರ್ಶ್ವದ ಎರಡನೆಯ ಕಂಬದಲ್ಲಿ ಪೂರ್ವಕ್ಕೆ ಉಗ್ರನರಸಿಂಹ, ಲಕ್ಷ್ಮೀಪತಿ, ನಾದಲೋಲನಾದ ಗೋಪಾಲನ ಮೂರ್ತಿಗಳನ್ನು ನಿರ್ಮಿಸಲಾಗಿದೆ. ದಕ್ಷಿಣ ದಿಕ್ಕಿನಲ್ಲಿ ಶಕ್ತಿ, ಶಿವಪಾರ್ವತಿಯರು ನಂದಿರೂಪನಾದ ಶಿವನನ್ನು ಕೆತ್ತಲಾಗಿದೆ, ಪಶ್ಚಿಮದಲ್ಲಿ ದಕ್ಷಿಣಾಮೂರ್ತಿ, ಶಿವಪಾರ್ವತಿಯರು, ಶಿವನ ದೃಶ್ಯಗಳನ್ನು ಚಿತ್ರಿಸಲಾಗಿದೆ. ಇದೇ ಕಂಬದ ಉತ್ತರದ ದಿಕ್ಕಿನಲ್ಲಿ ಶಿವಲಿಂಗಕ್ಕೆ ಹಾಲೆರೆಯುವ ಹಸುವಿನ ದೃಶ್ಯ, ನಾಟ್ಯಶಿವ, ಕುಬ್ಜರ ದೃಶ್ಯಗಳನ್ನು ಕಾಣಬಹುದು.

ನವರಂಗದ ಮುಂದೆ ಬರುವುದೇ ಮುಖಮಂಟಪ. ಇದನ್ನು ಹದಿನೆಂಟು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ಇಲ್ಲಿನ ಕಂಬಗಳಲ್ಲಿ ಯಾವುದೇ ತೆರನಾದ ಕೆತ್ತನೆಗಳಿಲ್ಲ. ಕಂಬಗಳು ವಿಜಯನಗರದ ಸರಳ ಶೈಲಿಯಲ್ಲಿ ನಿರ್ಮಿಸಲಾಗಿದೆ. ಮುಖಮಂಟಪದಿಂದ ನವರಂಗಕ್ಕೆ ಹೋಗುವ ಬಾಗಿಲ ಎಡಬದಿಯಲ್ಲಿ ಗಣೇಶನ ಮೂರ್ತಿಯನ್ನು ಕೆತ್ತಲಾಗಿದೆ. ಇದೇ ಮುಖಮಂಟಪದಲ್ಲಿ ಬಲಬದಿಯಲ್ಲಿ ಗಜಚರ್ಮಾಂಬರಧಾರಿ ಶಿವನ ಮೂರ್ತಿ ಇದೆ. ಇವೆರಡು ಶಿಲ್ಪಗಳನ್ನು ಮುಖಮಂಟಪದ ಒಳ ಭಿತ್ತಿಯಲ್ಲಿ ನಿರ್ಮಿಸಲಾಗಿದೆ. ಮುಖಮಂಟಪವು ತೆರೆದ ಮುಖಮಂಟಪವಾಗಿದೆ. ಈಗ ಮುಖಮಂಟಪದ ಉತ್ತರ ಮತ್ತು ದಕ್ಷಿಣಗಳಲ್ಲಿ ಕಲ್ಲಿನ ಗೋಡೆಯನ್ನು ನಿರ್ಮಿಸಿದ್ದಾರೆ.

ದೇವಾಲಯದ ಹೊರಗಿನ ರಚನೆಯು ಸರಳವಾದ ಅಧಿಷ್ಠಾನವನ್ನು ಹೊಂದಿದೆ. ಬಿತ್ತಿಯಲ್ಲಿ ಕುಡ್ಯಸ್ತಂಭಗಳನ್ನು ರಚಿಸಲಾಗಿದೆ. ಗರ್ಭಗೃಹದ ನವರಂಗದ ಎಲ್ಲಾ ದಿಕ್ಕುಗಳಲ್ಲೂ ಕುಡ್ಯಸ್ತಂಭಗಳ ರಚನೆಯನ್ನು ಕಾಣಬಹುದಾಗಿದೆ. ಗರ್ಭಗೃಹದ ಉತ್ತರ, ದಕ್ಷಿಣ, ಪಶ್ಚಿಮ ದಿಕ್ಕಿನಲ್ಲಿ ಕೋಷ್ಠಗಳನ್ನು ಕಾಣಬಹುದು. ಆದರೆ ಇವುಗಳಲ್ಲಿ ಬಿಂಬಗಳು ಕಂಡುಬರುವುದಿಲ್ಲ. ದೇವಾಲಯದ ಪ್ರಸ್ತಾರ ಭಾಗದಲ್ಲಿ ಸರಳವಾದ ಉತ್ತರ, ವಾಜನ, ಕಪೋತಗಳನ್ನು ಕಾಣಬಹುದು. ಕಪೋತವು ದೇವಾಲಯದ ಭಿತ್ತಿಯನ್ನು

ರಕ್ಷಿಸಲು ರಚಿಸಿರುವ ಅಂಗವಾಗಿದೆ. ದೇವಾಲಯದ ಮೇಲೆ ಬಿದ್ದನೀರು ಗೋಡೆಯ ಮೇಲೆ ಬೀಳದಂತೆ ತಡೆಯಲು ಇದು ಸಹಾಯಕವಾಗುತ್ತದೆ. ಉಳಿದಂತೆ ಗರ್ಭಗೃಹದ ಮೇಲಿನ ಶಿಖರದ ಕಟ್ಟಡವು ಸಂಪೂರ್ಣವಾಗಿ ಬಿದ್ದು ಹೋಗಿದೆ.

ದೇವಾಲಯದ ಮುಖಮಂಟಪದಲ್ಲಿ ವಿಜಯನಗರದ ಲಾಂಛನವಾದ ವರಾಹ ಕತ್ತಿಗಳನ್ನು ಕೆತ್ತಿರುವುದು ಈ ದೇವಸ್ಥಾನದ ಒಂದು ವಿಶೇಷವಾಗಿದೆ. ಇದು ವಿಜಯನಗರ ವಾಸ್ತುಶೈಲಿಯೆಂಬುದನ್ನು ಖಚಿತಪಡಿಸಲು ಪ್ರಮುಖವಾದ ಆಧಾರವಾಗಿದೆ. ವಿಜಯನಗರದ ಲಾಂಛನವನ್ನು ಮುಖಮಂಟಪದ ಎಡಭಾಗದ ಮಧ್ಯದ ತೊಲೆಯ ಮೇಲೆ ಕೆತ್ತಲಾಗಿದೆ(ಚಿತ್ರ ೬).

### ೪. ಕುರುಡುಮಲೈಯ ನಟೇಶ್ವರ ದೇವಸ್ಥಾನ,

ನಟೇಶ್ವರ ದೇವಾಲಯ ಕುರುಡು ಮಲೈ ಐತಿಹಾಸಿಕ ಸ್ಥಳ. ವಿಜಯನಗರ ಶೈಲಿಯಲ್ಲಿ ನಿರ್ಮಾಣವಾದ ಗಣೇಶ ದೇವಸ್ಥಾನ, ಚೋಳರ ಶೈಲಿಯಲ್ಲಿ ನಿರ್ಮಾಣವಾದ ಸೋಮೇಶ್ವರ ದೇವಸ್ಥಾನಗಳನ್ನು ಒಳಗೊಂಡಿದೆ. ಸೋಮೇಶ್ವರ ದೇವಸ್ಥಾನದ ಉತ್ತರಕ್ಕೆ ನಟೇಶ್ವರ ದೇವಸ್ಥಾನವಿದೆ. ವಿಶಾಲವಾದ ಹೆಬ್ಬಂಡೆಯ ಮೇಲೆ ಈ ನಟೇಶ್ವರ ದೇವಸ್ಥಾನವು ರಚನೆಗೊಂಡಿದೆ. ನಟೇಶ್ವರ ದೇವಸ್ಥಾನವು ವಿಜಯನಗರ ವಾಸ್ತುಶೈಲಿಯಲ್ಲಿ ನಿರ್ಮಾಣಗೊಂಡಿದೆ. ದೇವಸ್ಥಾನವು ಗರ್ಭಗೃಹ ಮತ್ತು ಮುಖ ಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹ ಮತ್ತು ಮುಖಮಂಟಪಗಳು ಸಮಾನವಾದ ಅಳತೆಯಲ್ಲಿವೆ. ದೇವಸ್ಥಾನದ ಮುಂದಿನ ಭಾಗ ಬಿದ್ದುಹೋಗಿದೆ. ಮುಖಮಂಟಪವು ಎರಡು ಕಂಬಗಳ ಸಹಾಯದಿಂದ ರಚನೆಯಾಗಿದೆ. ಗರ್ಭಗೃಹದಲ್ಲಿ ಯಾವುದೇ ಕಂಬಗಳಿಲ್ಲ. ಚಚ್ಚೌಕಾಕಾರದ ಗರ್ಭಗೃಹವಿದೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗವು ಆರು ಅಡಿ ಎತ್ತರವಾಗಿದೆ. ಈ ಶಿವಲಿಂಗವು ಹಂಪೆಯ ಬಡವಿಲಿಂಗದ ಮಾದರಿಯಲ್ಲೇ ರಚನೆಯಾಗಿದೆ. ಶಿವಲಿಂಗದ ಎತ್ತರ ಮಾತ್ರ ಬಡವಿಲಿಂಗಕ್ಕಿಂತ ಸುಮಾರು ಪಟ್ಟು ಚಿಕ್ಕದು. ದೇವಾಲಯದ ಉತ್ತರದಲ್ಲಿ ಪ್ರಣಾಳವನ್ನು ಅಳವಡಿಸಲಾಗಿದೆ. ಇಡೀ ದೇವಸ್ಥಾನವು ಪೂರ್ವಾಭಿಮುಖವಾಗಿ ರಚನೆಗೊಂಡಿದೆ(ಚಿತ್ರ ೭).

ದೇವಸ್ಥಾನವು ಎತ್ತರವಾದ ಅಧಿಷ್ಠಾನದಿಂದ ನಿರ್ಮಿಸಲಾಗಿದೆ. ಅಧಿಷ್ಠಾನವು ಸರಳಶೈಲಿಯಲ್ಲಿ ಮುಖಮಂಟಪದ ದಕ್ಷಿಣದಲ್ಲಿ ಒಂದು ಕೋಷ್ಠಕವಿದೆ. ಕೋಷ್ಠಕದ ಅಕ್ಕಪಕ್ಕದಲ್ಲಿ ಎರಡು ಕುಡ್ಯಸ್ತಂಭಗಳನ್ನು ನಿಲ್ಲಿಸಲಾಗಿದೆ. ಗರ್ಭಗುಡಿಯ ಹೊರಭಿತ್ತಿಯ ಮೇಲೂ ಒಂದು ಕೋಷ್ಠವಿದೆ. ಕೋಷ್ಠಕದ ಹಿಂದೆ ಎರಡು ಕುಡ್ಯಸ್ತಂಭ ಇವೆ. ಕೋಷ್ಠಕದ ಮುಂದೆ ಎರಡು ಕುಡ್ಯಸ್ತಂಭಗಳಿವೆ. ಗರ್ಭಗೃಹದ ಹಿಂದೆ ಇದೇ ತೆರನಾದ ಕೋಷ್ಠಕವನ್ನು ಕಾಣಬಹುದು. ಆದರೆ ಕೋಷ್ಠದಲ್ಲಿ ಯಾವುದೇ ಬಿಂಬವನ್ನು ಪ್ರತಿಷ್ಠಾಪಿಸಲಾಗಿಲ್ಲ. ದೇವಸ್ಥಾನದ ಎತ್ತರದ ಭಿತ್ತಿಯಲ್ಲಿ ಸಹ ಗರ್ಭಗೃಹದಲ್ಲಿ ಒಂದು




೧).ಗರ್ಭ ಗೃಹ ೨). ಅಂತರಾಳ ೩). ಸಭಾ ಮಂಟಪ (ನವರಂಗ)

೪ . ನಟೇಶ್ವರ ದೇವಸ್ಥಾನ, ಕುರುಡುಮಲೈನ ತಲನಕ್ಷೆ

ಕೋಷ್ಠಕ ಮತ್ತು ಗರ್ಭಗೃಹದಲ್ಲಿ ಒಂದು ಕೋಷ್ಠಕ ಮತ್ತು ನಾಲ್ಕು ಕಂಬಗಳು ಇವೆ. ಮುಖಮಂಟಪದ ಭಿತ್ತಿಯ ಮೇಲೆ ಒಂದು ಕೋಷ್ಠಕ ಎರಡು ಗೋಡೆ ಕಂಬಗಳನ್ನು ಕಾಣಬಹುದು. ದೇವಸ್ಥಾನದ ಪ್ರಸ್ತಾರ ಭಾಗದಲ್ಲಿ ಉತ್ತರ, ವಾಜನ, ವಲಭಿ, ಕಪೋತಗಳನ್ನು ಕಾಣಬಹುದು. ಕಪೋತವು ಉತ್ತರ, ವಾಜನಕ್ಕಿಂತ ಹೆಚ್ಚು ಮುಂದೆ ಚಾಚಿದೆ. ಭತ್ತಿನ ಮೇಲೆ ಬಿದ್ದ ನೀರು ಸರಾಗವಾಗಿ ಹರಿದು ಬರುವಂತೆ, ಕಪೋತವನ್ನು ಮುಂದಕ್ಕೆ ಭಾಗಿಸಲಾಗಿದೆ. ಅದರ ಮೇಲೆ ಶಿಖರವಿದ್ದಿರಬೇಕು. ಈಗ ಶಿಖರವು ಸಂಪೂರ್ಣವಾಗಿ ಶಿಥಿಲವಾಗಿದೆ. ದೇವಸ್ಥಾನವು ಕೂಡ ಶಿಥಿಲಾವಸ್ಥೆಯಲ್ಲಿದೆ. ಅದರ ಪಕ್ಕದಲ್ಲಿ ಇದೇ ತೆರೆನಾದ ದೇವಸ್ಥಾನದ ರಚನೆ ಇದೆ. ನಟೇಶ್ವರ ದೇವಸ್ಥಾನದ ಎಡಬದಿಯಲ್ಲಿ ಇದೆ. ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಮುಖ್ಯ ದೇವಾಲಯದ ಉತ್ತರದಲ್ಲಿ ಅಮ್ಮನವರ ಸನ್ನಿಧಿ ಇರುವುದನ್ನು ಶಾಸ್ತ್ರಗ್ರಂಥಗಳು ಉಲ್ಲೇಖಿಸುತ್ತವೆ. ಆದ್ದರಿಂದ ಈ ಶಿಥಿಲಾವಸ್ಥೆಯಲ್ಲಿರುವ ದೇವಸ್ಥಾನವು ಅಮ್ಮನವರ ಸನ್ನಿಧಿಯಾಗಿರಲೇಬೇಕು. ಆ ಪಾಳುದೇವಸ್ಥಾನದಲ್ಲಿ ಈಗ ಯಾವುದೇ ಮೂರ್ತಿ ಕಾಣಸಿಗುವುದಿಲ್ಲ. ದೇವಸ್ಥಾನದ ಇದೇ ತೆರನಾಗಿ ರಚನೆಗೊಂಡಿದೆ. ಈ ದೇವಸ್ಥಾನ ಹೊರ ಭಿತ್ತಿಯ ಮೇಲೆ ರಚನೆಗೊಂಡ ಕುಡ್ಯ ಸ್ತಂಭ ಮತ್ತು ಕೋಷ್ಠಕಗಳು ಪಾಳು ದೇವಾಲಯದಲ್ಲಿ ಕಂಡುಬರುವುದಿಲ್ಲ. ನಟೇಶ್ವರ ದೇವಸ್ಥಾನದ ಇಡೀ ಪ್ರದೇಶ ಈಗ ಹಾಳು ಪ್ರದೇಶವಾಗಿದೆ(ಚಿತ್ರ ೮).

### ೫. ಕೆಳಗೇರಿಯ ಮಲ್ಲಿಕಾರ್ಜುನ

ಕೆಳಗೇರಿ ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಒಂದು ಪುಟ್ಟಗ್ರಾಮ ಈ ಗ್ರಾಮಕ್ಕೆ ಹೊಂದಿಕೊಂಡಂತೆ ಒಂದು ಕೆರೆ ಇದೆ. ಈ ಗ್ರಾಮದ ಗ್ರಾಮದೇವತೆಯು ಪ್ರಸಿದ್ಧಿಯನ್ನು ಹೊಂದಿದೆ. ಎರಡು ಅತಿ ದೊಡ್ಡ ವೀರಗಲ್ಲು ಈ ಗ್ರಾಮದಲ್ಲಿವೆ. ಈ ಎಲ್ಲಾ ಅವಶೇಷಗಳು ಈ ಗ್ರಾಮದ ಐತಿಹಾಸಿಕತೆಯನ್ನು ತಿಳಿಸುತ್ತವೆ.

ಗ್ರಾಮದಲ್ಲಿ ಕೆರೆ ಇದೆ ಎಂದು ಮೊದಲೇ ಹೇಳಿದ್ದೇನೆ. ಕೆರೆಯ ಕೆಳಗಡೆಯಲ್ಲಿ ಗ್ರಾಮವು ಬರುವುದರಿಂದ ಕೆಳಗಿನ ಕೇರಿ ಹೋಗಿ ಕೆಳಗೆರೆಯಾಗಿರಬಹುದು. ಕೆರೆಯಿಂದಲೇ ಗ್ರಾಮಕ್ಕೆ ಕೆಳಗೇರಿ ಎಂದು ಹೆಸರು ಬಂದಿದೆ. ಕೆರೆಯ ಪಕ್ಕದಲ್ಲೇ ಐತಿಹಾಸಿಕವಾದ ಮಲ್ಲಿಕಾರ್ಜುನ ದೇವಸ್ಥಾನವಿದೆ.

ಮಲ್ಲಿಕಾರ್ಜುನ ದೇವಸ್ಥಾನವು ವಿಜಯನಗರ ಕಾಲದಲ್ಲಿ ರಚನೆಗೊಂಡ ದೇವಸ್ಥಾನವಾಗಿದೆ. ವಿಜಯನಗರದ ಅರಸನಾದ ದೇವರಾಯನ ಈ ದೇವಸ್ಥಾನ ಗರ್ಭಗೃಹ, ಸುಕನಾಸಿ, ರಂಗಮಂಟಪಗಳನ್ನು ಪುನರುಜ್ಜೀವನಗೊಳಿಸಿದ ನೆಂದು ಹೇಳಲಾಗಿದೆ.[೪] ದೇವಸ್ಥಾನವು ಪೂರ್ಣವಾಗಿ ಗಿಡಬಳ್ಳಿಗಳಿಂದ ಆವೃತವಾಗಿದೆ. ದೇವಸ್ಥಾನದ ಹತ್ತಿರ ಹೋದರೆ ದೇವಸ್ತಾನದ ದೀಪಸ್ತಂಭವು ಕಂಡುಬರುತ್ತದೆ. ಇದು ಸುಮಾರು ಇಪ್ಪತ್ತು ಅಡಿ ಎತ್ತರದ ಕಂಬವಾಗಿದೆ. ಕೆಳಗಡೆಯಲ್ಲಿ ಚಚ್ಚೌಕಾರದಲ್ಲಿನ ಸ್ತಂಭವು ಮೇಲೆ




೧).ಗರ್ಭ ಗೃಹ ೨). ಅಂತರಾಳ ೩). ಸಭಾ ಮಂಟಪ (ನವರಂಗ)

೪ . ನಟೇಶ್ವರ ದೇವಸ್ಥಾನ, ಕುರುಡುಮಲೈನ ತಲನಕ್ಷೆ

ಹೋದಂತೆ ಅಷ್ಟಕೋನಾಕೃತಿಯನ್ನು ತಾಳುತ್ತದೆ. ಆದರೆ ಮೇಲೆ ತುದಿಯಲ್ಲಿ ಘಟದ ಆಕಾರದಲ್ಲಿ ಬಳೆ ಇದ್ದು ತಿರುಗಿ ಹಾಕಲಾಗಿರುವ ಪದ್ಮದ ರಚನೆ ಇದೆ. ಇದರ ಮೇಲೆ ದೀಪ ಉರಿಸುತ್ತಿದ್ದಿರಬೇಕು(ಚಿತ್ರ ೯).

ದೇವಸ್ಥಾನವನ್ನು ಪ್ರವೇಶಿಸಬೇಕಾದರೆ ಅದಕ್ಕೆ ಅಡ್ಡಬಂದಿರುವ ಪೊದೆಯನ್ನು ಕಡಿದುಹಾಕಿ ಒಳಗೆ ಪ್ರವೇಶಿಸಬೇಕು. ದೇವಸ್ಥಾನದ ಈ ಪ್ರಥಮ ಬಾಗಿಲ ಪ್ರವೇಶದ್ವಾರದಲ್ಲಿ ದೇವರಾಯನ ಕಾಲದ ಶಾಸನವನ್ನು ಕೆತ್ತಲಾಗಿದೆ. ಈ ದ್ವಾರದ ಲಲಾಟ ಬಿಂಬದಲ್ಲಿ ಈಶ್ವರ ಮತ್ತು ನಂದಿಯ ವಿಗ್ರಹಗಳನ್ನು ಕೆತ್ತಲಾಗಿದೆ. ದೇವಸ್ಥಾನದ ಈ ದ್ವಾರದ ಎಡ, ಬಲಭಾಗದ ಭಿತ್ತಿಗಳು ಪೊದೆಗಳಿಂದ ಆವೃತಗೊಂಡಿದೆ. ದೇವಸ್ಥಾನದ ಅಧಿಷ್ಠಾನವು ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತು ಹೋಗಿದೆ. ದೇವಸ್ಥಾನವು ಮೊದಲಿನಲ್ಲಿ ಪ್ರಾಕಾರವನ್ನು ಹೊಂದಿರಬೇಕು. ಈಗ ಆ ಪ್ರಾಕಾರವೆಲ್ಲ ಹಾಳಾಗಿ ಹೋಗಿದೆ. ಪ್ರಾಕಾರದ ಅವಶೇಷಗಳು ಅದರ ಬಿಡಿಕಲ್ಲು ತುಂಡುಗಳು ದೇವಸ್ಥಾನದ ಪರಿಸರದಲ್ಲಿ ದೊರೆಯುತ್ತವೆ.

ದೇವಸ್ಥಾನದ ದ್ವಾರದ ಮೂಲಕ ಒಳಗಡೆಯಲ್ಲಿ ಪ್ರವೇಶಿಸಿದರೆ ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿತವಾದ ನವರಂಗವು ಕಾಣಸಿಗುತ್ತದೆ. ಇದಕ್ಕೆ ರಂಗಮಂಟಪವನ್ನು ಹೆಸರಿನಿಂದಲೂ ಕರೆಯಲಾಗುತ್ತದೆ. ಮಲ್ಲಿಕಾರ್ಜುನ ದೇವಸ್ಥಾನದ ಈ ನವರಂಗದಲ್ಲಿ ವಿಜಯನಗರ ಕಾಲದ ಶಾಸನವನ್ನು ಕಾಣಬಹುದು. ಈ ನವರಂಗದಲ್ಲಿನ ಕಂಬಗಳು ಸರಳ ರಚನೆಯನ್ನು ಹೊಂದಿವೆ. ದೇವಸ್ಥಾನದ ಕಂಬಗಳು ಎತ್ತರದಲ್ಲಿ ಕಿರಿದಾಗಿಯೂ ಗಾತ್ರದಲ್ಲಿ ದಪ್ಪವಾಗಿಯೂ ಇವೆ. ತಳಭಾಗದಲ್ಲಿ ಚಚ್ಚೌಕಾರದಲ್ಲಿರುವ ಕಂಬಗಳು ಮೇಲೆ ದುಂಡಾಗಿವೆ. ಬಳೆಯಾಕಾರದ ಘಟವನ್ನು ಹೊಂದಿರುವ ಕಂಬಗಳು ತೊಲೆಗೆ ಹೊಂದಿಕೊಂಡಂತೆ ಬೋದಿಗೆಗಳನ್ನು ಹೊಂದಿವೆ(ಚಿತ್ರ ೧೦).

ನವರಂಗದಿಂದ ಒಳಗೆ ಪ್ರವೇಶಿಸಿದರೆ ಸಿಗುವುದೇ ಸುಕನಾಸಿ, ಸುಕನಾಸಿಯನ್ನು ಅಂತರಾಳ ಎಂಬ ಮತ್ತೊಂದು ಹೆಸರಿನಿಂದಲೂ ಕರೆಯಲಾಗುತ್ತದೆ. ನವರಂಗದಿಂದ ಅಂತರಾಳಕ್ಕೆ ಪ್ರವೇಶಿಸುವ ಪ್ರವೇಶದ್ವಾರವು ನಾಲ್ಕು ಅಡಿ ಎತ್ತರದ ಕಿರಿದಾದ ದ್ವಾರವಾಗಿದೆ. ಅಂತರಾಳವು ಗರ್ಭಗೃಹ ಮತ್ತು ನವರಂಗವನ್ನು ಸೇರಿಸುವ ಒಂದು ದೇವಾಲಯ ಭಾಗವಾಗಿದೆ. ಪೂಜಾದಿ ಕಾರ್ಯಗಳು ಸಾಂಗೋಪಾಂಗವಾಗಿ ನಡೆಯಲು ಅಂತರಾಳವು ರಚನೆಗೊಂಡಿರಬೇಕು. ಅಂತರಾಳದ ಮುಂದೆ ಸಿಗುವುದೇ ಗರ್ಭಗೃಹ. ಇದು ಚಚ್ಚೌಕಾರವನ್ನು ಹೊಂದಿದೆ. ಇದರಲ್ಲಿ ಮೊದಲಿಗೆ ಶಿವಲಿಂಗ ಇದ್ದಿತೆಂದು ಸ್ಥಳೀಯರು ತಿಳಿಸಿದರು. ಆದರೆ ಈಗ ಅದು ಕಾಣಸಿಗುವುದಿಲ್ಲ. ಗರ್ಭಗೃಹದಲ್ಲಿ ಮತ್ತು ಅಂತರಾಳದಲ್ಲಿ ಕತ್ತಲು ಆವರಿಸಿಕೊಂಡಿವೆ. ದೇವಾಲಯದ ಹೊರರಚನೆಗಳಲ್ಲಿ ಅಧಿಷ್ಠಾನವು ಮಣ್ಣಿನಲ್ಲಿ ಹೂತು ಹೋಗಿರುವುದರಿಂದ ಈಗ ಕಂಡುಬರುವುದಿಲ್ಲ. ಭಿತ್ತಿಯ ಭಾಗವು ಸುತ್ತಲೂ ಪೊದೆಗಳು ಬೆಳೆದಿರುವುದರಿಂದ ನೋಡಲು ಸಾಧ್ಯವಿಲ್ಲ. ದೇವಾಲಯದ ಮೇಲು ರಚನೆಯಾದ ಗೋಪುರವು ಸಂಪೂರ್ಣವಾಗಿ ನಾಶವಾಗಿದೆ. ಇಡೀ ದೇವಾಲಯದಲ್ಲಿ ಸುಂದರವಾದ

ಮೂರ್ತಿಯು ಕಾಣಸಿಗುವುದೇ ಇಲ್ಲ. ಆದರೆ ಶಿಲ್ಪಕಲೆಯುಳ್ಳ ದೇವಸ್ಥಾನ ಮಾತ್ರ ಸುಂದರವಾಗಿದೆ. ಸಂಪೂರ್ಣ ದೇವಲಯವು ಶಿಥಿಲಾವಸ್ಥೆಯಲ್ಲಿದೆ.

### ೬. ಕೋಲಾರದ ಸೋಮೇಶ್ವರ ದೇವಸ್ಥಾನ

ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ಪೂರ್ವದಿಕ್ಕಿನಲ್ಲಿ ಕೋಲಾರವಿದೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪೆಯಿಂದ ದಕ್ಷಿಣ ದಿಕ್ಕಿನಲ್ಲಿ ಕೋಲಾರವಿದೆ. ಕೋಲಾರವು ಬೆಂಗಳೂರಿನಿಂದ ೭೨ ಕಿ.ಮೀ. ದೂರದಲ್ಲಿದೆ. ಕೋಲಾರವು ಒಂದು ಜಿಲ್ಲಾ ಕೇಂದ್ರ, ಕೋಲಾರವು ಅತೀ ಪ್ರಾಚೀನವಾದ ಸ್ಥಳವಾಗಿದೆ. ಇದಕ್ಕೆ "ಕುವಲಾಲ" ಅಥವಾ "ಕೋಳಾಲ" ಎಂಬ ಹೆಸರಿತ್ತೆಂದು ಶಾಸನಗಳು ನಿರೂಪಿಸುತ್ತವೆ. ನಾಲ್ಕನೆಯ ಶತಮಾನದಲ್ಲಿ ಕೋಲಾರವು ಗಂಗರ ರಾಜಧಾನಿಯಾಗಿತ್ತು.[೫] ಮುಂದೆ ಚೋಳರು, ಹೊಯ್ಸಳರು ಈ ಭಾಗದಲ್ಲಿ ಆಳ್ವಿಕೆ ನಡೆಸಿದರು. ಹದಿನೈದನೆಯ ಶತಮಾನದಲ್ಲಿ ಕೋಲಾರದ ಭಾಗವು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಕೊಂಡಿತು. ಇಲ್ಲಿರುವ ಊರ ದೇವತೆಯಾದ ಕೋಲಾರಮ್ಮ ದೇವಸ್ಥಾನವು ಪ್ರಮುಖವಾದದ್ದು, ಇದು ಒಂದು ಸಪ್ತಮಾತೃಕೆಯ ವಿಗ್ರಹಗಳ ಆರಾಧನೆಯ ಸ್ಥಾನ. ಈ ಕೋಲಾರಮ್ಮನ ದೇವಸ್ಥಾನ ಇರುವುದರಿಂದಲೇ ಈ ಊರಿಗೆ ಕೋಲಾರ ಎಂದು ಹೆಸರು ಬಂದಿದೆ.[೬] ಕೋಲಾರದಲ್ಲಿ

೧. ಆಂಜನೇಯ
೨. ನಂಜುಂಡೇಶ್ವರ
೩. ವೆಂಕಟರಮಣ
೪. ಕೋದಂಡರಾಮ
೫. ಕೋಲಾರಮ್ಮ
೬. ಸೋಮೇಶ್ವರ

ಎಂಬ ಐತಿಹಾಸಿಕ ದೇವಸ್ಥಾನಗಳನ್ನು ಕಾಣಬಹುದು.

ಕೋಲಾರದಲ್ಲಿ ಕೋಲಾರಮ್ಮ ದೇವಸ್ಥಾನ ಪ್ರಸಿದ್ಧವಾದದ್ದು, ಅಷ್ಟೆ ಪ್ರಸಿದ್ಧವಾದ ದೇವಸ್ಥಾನವೆಂದರೆ ಸೋಮೇಶ್ವರ ದೇವಾಲಯ. ಇದು ಕೋಲಾರಮ್ಮ ದೇವಸ್ಥಾನದ ಬಲಬದಿಯಲ್ಲಿದೆ. ಸೋಮೇಶ್ವರ ದೇವಸ್ಥಾನವು ವಿಜಯನಗರ ವಾಸ್ತುಶೈಲಿಯನ್ನು ಹೊಂದಿದೆ. ಈ ದೇವಾಲಯವು ಬಹುವಿಶಾಲವಾದ ಪ್ರಾಕಾರವನ್ನು ಹೊಂದಿದೆ. ದ್ರಾವಿಡ ಶೈಲಿಯನ್ನು ಹೊಂದಿದ ದೇವಾಲಯವಾಗಿದೆ. ದೇವಾಲಯ ಮೂಲತಃವಾಗಿ ಚೋಳರ ಕಾಲದಲ್ಲಿ ಸಿದ್ಧವಾಗಿರಬೇಕು. ಅರ್ಚಕರು ಹೇಳುವುದು ಈ ದೇವಾಲಯದ ರಚನೆ, ಚೋಳ ಪ್ರತಿಷ್ಠೆ ಎಂದೇ ಹೇಳುತ್ತಾರೆ. ಆದರೆ, ದೇವಾಲಯದ ಬಹುತೇಕ ವಾಸ್ತುಶಿಲ್ಪವು




೧).ಗರ್ಭ ಗೃಹ ೨). ಅಂತರಾಳ ೩). ಸಭಾ ಮಂಟಪ (ನವರಂಗ)೪)..ಅರ್ಧ ಮಂಟಪ

೬. ಕೋಲಾರದ ಸೋಮೇಶ್ವರ ದೇವಾಲಯದ ತಲನಕ್ಷೆ

ವಿಜಯನಗರ ಕಾಲದಲ್ಲಿ ನಿರ್ಮಿತವಾದನ್ನು ಕಾಣಬಹುದು. ಈ ದೇವಾಲಯದಲ್ಲಿ ವಿಜಯನಗರ ಕಾಲದ ಜೀರ್ಣೋದ್ಧಾರ ಮಾಡಿದ ಶಾಸನವಿದೆ(ಚಿತ್ರ ೧೧).

ಸೋಮೇಶ್ವರ ದೇವಾಲಯವು ವಿಶೇಷವಾದ ಅಲಂಕಾರವನ್ನು ಹೊಂದಿದ ದ್ರಾವಿಡಶೈಲಿಯನ್ನು ಒಳಗೊಂಡಿದೆ. ಸುತ್ತಲೂ ಇರುವ ಪ್ರಾಕಾರಕ್ಕೆ ದ್ವಾರಗೋಪುರವನ್ನು ನಿರ್ಮಿಸಲಾಗಿದೆ. ಪ್ರಾಕಾರದ ಮಹಾದ್ವಾರಕ್ಕೆ ಇಟ್ಟಿಗೆ ಗಾರೆಗಳಿಂದ ಕಟ್ಟಿದ ವಿಜಯನಗರ ಶೈಲಿಯ "ರಾಯ" ಗೋಪುರವನ್ನು ನಿರ್ಮಿಸಲಾಗಿದೆ. ರಾಯಗೋಪುರವು ವಿಜಯನಗರ ಕಾಲದಲ್ಲಿ ರಚನೆಗೊಂಡ ಹೊಸದಾದ ಬೆಳವಣಿಗೆಯಾಗಿದೆ. ರಾಯಗೋಪುರವು ಆರು ಅಂತಸ್ತುಗಳಿಂದ ಕೂಡಿದೆ. ಈ ತಲಗಳು ಹಂತ ಹಂತವಾಗಿ ಕಿರಿದಾಗುತ್ತಾ ಹೋಗುತ್ತವೆ. ಪ್ರತಿಯೊಂದು ಹಂತಗಳ ಮಧ್ಯ ಭಾಗದಲ್ಲಿ ಒಳಗಡೆ ಪ್ರವೇಶಿಸಲು ಸ್ಥಳಾವಕಾಶವನ್ನು ಕಲ್ಪಿಸಲಾಗಿದೆ. ಗೋಪುರದಲ್ಲೂ ಗರ್ಭಗೃಹದ ಮೇಲೆ ಇರುವಂತೆ ಶಾಲಕೂಟಗಳೂ, ಕೋಷ್ಠಗಳೂ ಇರುವುವು. ಗೋಪುರವು ಕೊನೆಯಲ್ಲಿ ಗೋಪುರ ಶಿಖರವನ್ನು ಒಳಗೊಂಡಿದೆ. ಗೋಪುರ ಶಿಖರವು ಪಂಚ ಕಲಶಗಳನ್ನು ಹೊಂದಿದೆ. ಕಲಶಗಳ ಪಕ್ಕದ ಕೊನೆಯಲ್ಲಿರುವ ಪಾರ್ಶ್ವನಾಸಿ ಅತ್ಯಂತ ಅಲಂಕೃತವಾಗಿವೆ. ಗೋಪುರದ ದ್ವಾರ ಬಾಗಿಲಿನ ಚೌಕಟ್ಟಿನಲ್ಲಿ ಶೈವ ದ್ವಾರಪಾಲಕರಿದ್ದಾರೆ. ಅದೇ ಬಾಗಿಲ ಎಡಬಲಗಳಲ್ಲಿ ಲತೆಯನ್ನು ಹಿಡಿದು ನಿಂತಿರುವ ಶಿಲಬಾಲಿಕಿಯರನ್ನು ಕಾಣಬಹುದು. ಈ ದ್ವಾರಗೋಪುರದ ದೇವಸ್ಥಾನದ ಕಡೆಯ ಬಾಗಿಲಿನಲ್ಲೂ ಇದೇ ರೀತಿಯ ಕೆತ್ತನೆಯನ್ನು ಕಾಣಬಹುದು.

ಪ್ರಾಕಾರಕ್ಕೆ ಕಾಲಿಟ್ಟೊಡನೆ ಮೊದಲಿಗೆ ದೀಪಸ್ತಂಭವು ಸಿಗುತ್ತದೆ. ದೀಪಸ್ತಂಭವು ಹದಿನೆಂಟು ಅಡಿಗಳಷ್ಟು ಎತ್ತರವಾಗಿದೆ. ಚಚ್ಚೌಕಾಕಾರದ ಕಟ್ಟೆಯನ್ನು ನಿರ್ಮಿಸಿ ದೇವಾಲಯದ ಎದುರಿನಲ್ಲೇ ಈ ದೀಪಸ್ತಂಭವನ್ನು ನಿಲ್ಲಿಸಲಾಗಿದೆ. ದೀಪಸ್ತಂಭವು ಶಿಲಾಸ್ತಂಭವಾಗಿದೆ. ತುದಿಯಲ್ಲಿ ದೀಪಹಚ್ಚಲು ಅನುಕೂಲವಾದ ಘಟಾದ ಮೇಲೆ ಊರ್ಧ್ವಪದ್ಮ ಚಚ್ಚೌಕಾಕಾರದ ಶಿಲೆಯನ್ನು ಸ್ತಂಭದ ಮೇಲೆ ನಿಲ್ಲಿಸಲಾಗಿದೆ. ಇದರ ಮೇಲೆ ವಿಶೇಷವಾದ ಸಂದರ್ಭದಲ್ಲಿ ಸ್ತಂಭದ ಮೇಲೆ ದೀಪವನ್ನು ಹಚ್ಚಲಾಗುತ್ತದೆ.

ಈ ದೀಪಸ್ತಂಭದ ಮುಂದೆಯೇ ಬಲಿಪೀಠವನ್ನು ನಿರ್ಮಿಸಲಾಗಿದೆ. ದೇವಸ್ಥಾನದ ಎದುರಿನಲ್ಲಿ ದೇವಾಲಯ ಮತ್ತು ದೀಪಸ್ತಂಭದ ಮಧ್ಯದಲ್ಲಿ ಬಲಿಪೀಠವನ್ನು ಸ್ಥಾಪಿಸಲಾಗಿದೆ. ದೇವಸ್ಥಾನದಲ್ಲಿ ಮೂಲದೇವರಿಗೆ ನೈವೇದ್ಯವಾದ ನಂತರ ಅಷ್ಟದಿಕ್ಪಾಲಕ ಬಲಿರಿಗೆ ನೀಡಲು ಈ ರೀತಿ ಹೆಚ್ಚು ಹೆಚ್ಚು ಬಲಿಪೀಠಗಳಿರುತ್ತವೆ. ಗರ್ಭಗೃಹದ ಮುಂದೆ ಇರುವ ಬಲಿಪೀಠವು ಪ್ರಧಾನಬಲಿಪೀಠವಾಗಿದೆ. ಬಲಿಪೀಠವು ಶಿಲೆಯಿಂದ ಮಾಡಲಾಗಿದೆ. ಬಲಿಪೀಠವು ದೇವಸ್ಥಾನ ಅಧಿಷ್ಠಾನದಂತೆಯೇ ರಚನೆಗೊಂಡಿದೆ. ಇದರ ಮೇಲೆ ಕಮಲದ ವಿನ್ಯಾಸವನ್ನು ಹೊಂದಿರುವುದು ಅದರ ಮೇಲೆ ಬಲಿಹರಣವನ್ನು ಇಡಲು ಅನುಕೂಲವಾಗುವಂತೆ ಚಪ್ಪಟೆಯಾಗಿರುವುದು.

ಬಲಿಪೀಠದ ಮುಂದೆ ಧ್ವಜಸ್ತಂಭವಿದೆ. ಗರ್ಭಗೃಹ ಮತ್ತು ಬಲಿಪೀಠದ ನಡುವೆ ಧ್ವಜಸ್ತಂಭವು ಇರುವುದು. ಧ್ವಜಸ್ತಂಭವು ಮರದಿಂದ ನಿರ್ಮಾಣವಾಗಿದೆ. ಚೌಕ ಆಕಾರದ ಪೀಠದ ಮೇಲೆ ಈ ಸ್ತಂಭವು ನಿಂತಿದೆ. ಇದರ ತುದಿಯಲ್ಲಿ ಬಾವುಟವನ್ನು ಕಟ್ಟಲು ಮಸೂರಕವನ್ನು ಅಳವಡಿಸಲಾಗಿದೆ. ದೇವಾಲಯಗಳಲ್ಲಿ ಆಚರಿಸುವ ಹಬ್ಬ, ಉತ್ಸವಗಳ ಸಂದರ್ಭದಲ್ಲಿ ಧ್ವಜಾರೋಹಣಕ್ಕಾಗಿ ಈ ಧ್ವಜ ಸ್ತಂಭವನ್ನು ಬಳಸಲಾಗುತ್ತದೆ.

ದೇವಾಲಯದ ಪ್ರಾಕಾರದ ಒಳಗೆ, ದೀಪಸ್ತಂಭ, ಬಲಿಪೀಠದ ಧ್ವಜಸ್ತಂಭಗಳ ನಂತರ ಸಿಗುವುದನ್ನೇ ಮುಖಮಂಟಪವೆಂದು ಕರೆಯುತ್ತಾರೆ. ಅಗ್ರಮಂಟಪವೆಂಬ ಹೆಸರೂ ಮುಖಮಂಟಪಕ್ಕಿದೆ. ಈ ಅಗ್ರಮಂಟಪವು ವಿಜಯನಗರ ಶೈಲಿಯ ಯಾಳಿಕಂಬಗಳನ್ನು ಒಳಗೊಂಡಿದೆ. ಅಗ್ರಮಂಟಪವು ಒಟ್ಟು ಅರವತ್ತು ನಾಲ್ಕು ಕಂಬಗಳಿಂದ ನಿರ್ಮಿತವಾಗಿದೆ. ಚಚ್ಚೌಕಾಕಾರದಲ್ಲಿ ನಿರ್ಮಾಣವಾಗಿರುವ ಈ ಅಗ್ರಮಂಟಪದಲ್ಲಿ ಪ್ರವೇಶದ್ವಾರದ ಛತ್ತು ಸ್ವಲ್ಪ ಮುಂಚಾಚಿದೆ. ಈ ಭಾಗದಲ್ಲಿ ನಾಲ್ಕಾರು ಸುಂದರ ಕಂಬಗಳನ್ನು ಅಳವಡಿಸಲಾಗಿದೆ. ನಾಲ್ಕು ಕಂಬಗಳಲ್ಲಿ ಪೂರ್ವಕ್ಕೆ ಮುಖ ಮಾಡಿದ ಭಾಗದಲ್ಲಿ ಕುದುರೆಸವಾರರ ಶಿಲ್ಪಗಳನ್ನು ಸುಂದರವಾಗಿ ಕೆತ್ತಲಾಗಿದೆ. ಗರ್ಭದ ಎಡಸ್ತಂಭದಲ್ಲಿ ದಕ್ಷಿಣದಲ್ಲಿ ದರ್ಪಣ ಸುಂದರಿ, ಮಿಥುನ ಶಿಲ್ಪ, ರಾಮನನ್ನು ಕೆತ್ತಲಾಗಿದೆ. ಪಶ್ಚಿಮಕ್ಕೆ ಆನೆ, ವಿದೂಷಕ, ಮದನಿಕೆಗಳಿವೆ. ದಕ್ಷಿಣದ ಭಾಗದ ಬಲಕಂಬದ ಪಾದಭಾಗದಲ್ಲಿ ಸಿಂಹವನ್ನು ಕೆತ್ತಲಾಗಿದೆ. ಸಿಂಹವು ಕಂಬವನ್ನು ಹೊತ್ತಂತೆ ಕೆತ್ತಲಾಗಿದೆ. ಈ ಕಂಬದ ಪಶ್ಚಿಮದಲ್ಲಿ ಹಸುವು ಹುತ್ತಕ್ಕೆ ಹಾಲೆರೆಯುವ ದೃಶ್ಯ, ಕುಬ್ಜಯಕ್ಷನ ಚಿತ್ರ. ಪೂರ್ವಕ್ಕೆ ಯಾಳಿಯನ್ನು ಕೆತ್ತಲಾಗಿದೆ. ಎಡಕಂಬದಲ್ಲಿ ಪೂರ್ವಕ್ಕೆ ಸಿಂಹದ ಮೇಲೆ ಸಿಂಹವನ್ನು ದಕ್ಷಿಣಕ್ಕೆ ಹೂವಿನ ವಿವಿಧ ವಿಧಗಳನ್ನು ನಿರ್ಮಿಸಲಾಗಿದೆ. ಪಶ್ಚಿಮದಲ್ಲಿ ಯಾಳಿ, ಗಣೇಶ, ಸೂರ್ಯನ ವಿಗ್ರಹವಿದೆ. ಇನ್ನೊಂದು ಎಡಬದಿಯ ಕಂಬದಲ್ಲಿ ದಕ್ಷಿಣಕ್ಕೆ ಯಾಳಿ ಪಶ್ಚಿಮದಲ್ಲಿ ಯಾಳಿ, ಮದನಿಕೆ, ಯಕ್ಷಿಣಿಯನ್ನು ಉತ್ತರಕ್ಕೆ ಭಕ್ತ, ನೃತ್ಯಗಾರ, ವೀರಭದ್ರನ ಶಿಲ್ಪಗಳನ್ನು ಕೆತ್ತಲಾಗಿದೆ. ಹೀಗೆ ಇಡೀ ಅಗ್ರ ಮಂಟಪದ ಪ್ರವೇಶ ಭಾಗದಲ್ಲಿ ಈ ನಾಲ್ಕು ಕಂಬಗಳು ವಿಶೇಷವಾಗಿ ಅಲಂಕೃತಗೊಂಡ ಕಂಬಗಳಾಗಿವೆ.

ಅಗ್ರಮಂಟಪದ ಅರವತ್ತು ನಾಲ್ಕು ಕಂಬಗಳು ಬೇರೆ ಬೇರೆ, ರೀತಿಯಲ್ಲಿ ಕೆತ್ತಲ್ಪಟ್ಟಿವೆ. ಕೆಲವೊಂದು ಕಂಬಗಳು ಉಪಕಂಬಗಳನ್ನು ಹೊಂದಿವೆ. ಈ ರೀತಿಯ ಕಂಬಗಳನ್ನು ಹಂಪೆಯ ವಿಜಯ ವಿಠಲ ಮತ್ತು ಕೃಷ್ಣದೇವಾಲಯಗಳಲ್ಲಿ ಕಾಣಬಹುದು. ಇಡೀ ಅಗ್ರಮಂಟಪದಲ್ಲಿ ವಿವಿಧ ಧರ್ಮಗಳ ಧಾರ್ಮಿಕ ಶಿಲ್ಪಗಳನ್ನು ಪ್ರಾಣಿ, ಪಕ್ಷಿಗಳ ಶಿಲ್ಪಗಳನ್ನು ನಿರ್ಮಿಸಲಾಗಿದೆ. ಯಾಳಿ, ಚಿತ್ರಶಿಲ್ಪವು ಹೆಚ್ಚಾಗಿ ಕಂಬಗಳಲ್ಲಿ ಕಂಡುಬರುವುದು ಕುಬ್ಜ, ಬಲಿಚಕ್ರವರ್ತಿ, ರಾಮ, ಶಿವಲಿಂಗ ವೀರಭದ್ರ ಮಹಾರುದ್ರ ಹಸು ಹಾಲೆರೆಯುವುದು ನಂದಿ ಮುಂತಾದ ಶಿಲ್ಪಗಳನ್ನು ಕಾಣಬಹುದಾಗಿದೆ.

ದೇವಾಲಯದ ಒಳಕ್ಕೆ ಪ್ರವೇಶಿಸುವ ಅಗ್ರಮಂಟಪದ ನೆಲವು ದೇವಾಲಯದ ಪ್ರಾಕಾರದ ನೆಲಕ್ಕಿಂತ ತಗ್ಗಾಗಿದೆ. ಆದುದರಿಂದ ನವರಂಗಕ್ಕೆ ಪ್ರವೇಶಿಸುವ ದ್ವಾರದಲ್ಲಿ ಈ ಅಂತರವನ್ನು ಸರಿದೂಗಿಸಲು ಮೆಟ್ಟಿಲುಗಳನ್ನು ರಚಿಸಲಾಗಿದೆ. ಈ ಅಗ್ರಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯನ್ನು ಗರ್ಭಗೃಹದ ಎದುರಿನಲ್ಲಿ ಪ್ರತಿಷ್ಠಾಪಿಸಲಾಗಿದೆ. ನವರಂಗಕ್ಕೆ ಪ್ರವೇಶಿಸುವ ಹಾದಿಯಲ್ಲಿನ ಅಗ್ರಮಂಟಪದ ಹನ್ನೆರಡು ಕಂಬಗಳು ವಿಜಯನಗರ ಮಾದರಿಯಲ್ಲಿವೆ. ಎತ್ತರವಾದ ಈ ಕಂಬಗಳಲ್ಲಿ ಉಪಕಂಬಗಳನ್ನು ರಚಿಸಲಾಗಿದೆ. ಅಗ್ರಮಂಟಪದಲ್ಲಿ ಈ ಕೆಲವು ಶಿಲ್ಪಗಳನ್ನು ಕಾಣಬಹುದು. ಆಂಜನೇಯ, ನಂದಿ, ಕೃಷ್ಣ, ಗೋಪಾಲ, ಆನೆ, ಸೂರ್ಯ, ಮದನಿಕೆಯರು ಹಾಗೂ ಋಷಿಗಳು ವಿಗ್ರಹಗಳ ಶಿಲ್ಪಗಳಿವೆ.

ಅಗ್ರಮಂಟಪದ ಮುಂದೆ ಸಿಗುವುದೇ ನವರಂಗ. ನವರಂಗವನ್ನು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ನವರಂಗದ ಕಂಬಗಳು ದುಂಡನೆಯ ಕಂಬಗಳನ್ನು ಒಳಗೊಂಡಿವೆ. ಕಂಬಗಳು ಕರಿದಾದ ಕಲ್ಲಿನಿಂದ ಕೂಡಿವೆ. ನವರಂಗ ಒಳಗಡೆ, ಅಂತರಾಳವನ್ನು ಪ್ರವೇಶಿಸುವ ದ್ವಾರದಲ್ಲಿ ಅಕ್ಕಪಕ್ಕದಲ್ಲಿ ಶೈವದ್ವಾರಪಾಲಕರಾದ ನಂದಿ ಭೃಂಗಿ ಶಿಲ್ಪಗಳನ್ನು ಕೆತ್ತಲಾಗಿದೆ. ಆ ನವರಂಗದ ಮುಂದೆ ಅಂತರಾಳವಿದೆ. ಅಂತರಾಳವು ಆಯತಾಕಾರವಾಗಿದೆ. ಅಂತರಾಳವು ಗರ್ಭಗೃಹ ಮತ್ತು ನವರಂಗವನ್ನು ಸೇರಿಸುವ ಅಂಕಣವಾಗಿದೆ. ಗರ್ಭಗೃಹವು ಚಚ್ಚೌಕಾಕಾರದಲ್ಲಿದೆ. ಈ ಗರ್ಭಗೃಹದಲ್ಲಿ ಸೋಮೇಶ್ವರ ಲಿಂಗ ಪ್ರತಿಷ್ಠಾಪನೆಯಾಗಿದೆ. ಲಿಂಗವು ನೆಲಮಟ್ಟದಲ್ಲಿದೆ. ದೇವಾಲಯದ ಈ ಭಾಗದಲ್ಲಿ ಚೋಳ ಪ್ರತಿಷ್ಠೆ ಎಂಬ ಹೇಳಿಕೆ ಇದೆ. ಹೀಗೆ ಇಡೀ ದೇವಾಲಯ ಪೂರ್ವಾಭಿಮುಖವಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಅಗ್ರಮಂಟಪಗಳನ್ನೊಳಗೊಂಡಿದೆ.

ದೇವಾಲಯದ ಅಗ್ರಮಂಟಪದ ಪ್ರಸ್ತಾರ ಭಾಗವು ಸರಳವಾಗಿ ರಚನೆಗೊಂಡಿದೆ. ಈ ಭಾಗವು ಉತ್ತರ, ವಾಜನ ಭಾಗಗಳನ್ನೊಳಗೊಂಡಿದೆ. ವಾಜನದ ಮೇಲೆ ವಲಭೀ ಭಾಗವು ನಿರ್ಮಾಣವಾಗಿದೆ. ವಲಭೀ ಭಾಗವು ವಾಜನ ಮತ್ತು ಕಪೋತಗಳ ನಡುವಿನ ಭಾಗವಾಗಿದೆ. ವಲಭೀ ಭಾಗವು ಇಳಿಜಾರಾಗಿದೆ. ವಲಭೀ ಮೇಲಿನ ಭಾಗವೇ ಕಪೋತವಾಗಿದೆ. ಪ್ರಸ್ತಾರದಲ್ಲಿ ಇದೇ ಮುಖ್ಯವಾದ ಅಂಗ, ವಲಭೀಯ ಮೇಲೆ ಹೊರಭಾಗಿದಂತೆ ಕಪೋತವನ್ನು ರಚಿಸಲಾಗಿರುತ್ತದೆ. ದೇವಾಲಯದ ಛತ್ತಿನ ಮೇಲೆ ಬಿದ್ದ ನೀರು ಮೇಲೆ ಬೀಳದಂತೆ ಈ ಭಾಗವನ್ನು ಹೆಚ್ಚು ಇಳಿಜಾರಾಗುವಂತೆ ಮಾಡಲಾಗಿರುತ್ತದೆ. ಅಗ್ರಮಂಟಪದ ಮೇಲಿನ ಕಪೋತದ ರಚನೆಯ ರೋಮನ್ ಲಿಪಿಯ ಎಸ್ ಅಕ್ಷರದಂತಿದೆ.

**ಅಧಿಷ್ಠಾನ :** ದೇವಸ್ಥಾನವು ಅಧಿಷ್ಠಾನವನ್ನು ಹೊಂದಿದೆ. ಇದರಲ್ಲಿ ಉಪಾನದ ಭಾಗದಲ್ಲಿಯ ಆನೆಯ ಸಾಲನ್ನು ಕೆತ್ತಲಾಗಿದೆ. ಅಲ್ಲಲ್ಲಿ ಯಾಳಿಯ ಚಿತ್ರಗಳನ್ನೂ ಕಾಣಬಹುದು. ಇದರ ಮೇಲೆ ತ್ರಿಪಟ್ಟಿ ಕುಮುದವು ರಚನೆಗೊಂಡಿದೆ. ತ್ರಿಪಟ್ಟಿ ಕುಮುದದ ಮೇಲೆ "ಗಳ'ದ ರಚನೆ ಇದೆ. ಗಳದ ಮೇಲೆ

ಕಪೋದ ರಚನೆಯನ್ನು ನೋಡಬಹುದು. ಕಪೋದಲ್ಲಿ ಕಪೋತ ನಾಸಿಯ ರಚನೆ ಇದೆ. ನಾಸಿಯ ಒಳಗಡೆಯಲ್ಲಿ ದುಂಡನೆಯ ಯಕ್ಷ-ಯಕ್ಷಿಣಿಯರ ಮುಖಗಳನ್ನು ಕಡೆಯಲಾಗಿದೆ.

ಸೋಮೇಶ್ವರ ದೇವಸ್ಥಾನದ ಹೊರಭಿತ್ತಿಯು ಸುಂದರವಾದ ಅಲಂಕಾರವನ್ನು ಹೊಂದಿದೆ. ಗರ್ಭಗೃಹ ಅಂತರಾಳ ಮತ್ತು ನವರಂಗದ ಭಿತ್ತಿಯು ಒಂದೇ ತೆರನಾದ ರಚನೆಯನ್ನು ಹೊಂದಿವೆ. ದೇವಾಲಯದ ಹೊರಭಿತ್ತಿಯ ಭದ್ರ-ಕರ್ಣಗಳನ್ನು ಒಳಗೊಂಡಿದೆ. ಹೀಗೆ ಹಿಂಚಾಚು ಮುಂಚಾಚುಗಳಿರುವ ಭಿತ್ತಿಯನ್ನು ಸುಭದ್ರ ಎಂದು ಕರೆಯುವರು. ಅಧಿಷ್ಠಾನದ ಮೇಲೆ ವೇದಿಕಾ ಎಂಬ ಭಾಗದ ರಚನೆಯನ್ನು ಹೊಂದಿದೆ. ವೇದಿಕಾ ಭಾಗದಲ್ಲಿ ವ್ಯಾಳಿಗಳನ್ನು ಕೆತ್ತಲಾಗಿದೆ. ಈ ವೇದಿಕಾ ಭಿತ್ತಿಗೆ ಆಧಾರವಾಗಿರುವ ಅಂಗವಾಗಿದೆ. ವೇದಿಕಾದ ಮೇಲೆ ಭಿತ್ತಿಯನ್ನು ನಿರ್ಮಿಸಲಾಗಿದೆ. ಭಿತ್ತಿಯ ಅಲಂಕಾರಕ್ಕಾಗಿ ಅನೇಕ ರೀತಿಯ ಸುಂದರವಾದ ರಚನೆಗಳನ್ನು ಕೆತ್ತಲಾಗಿದೆ. ದೇವಸ್ಥಾನದ ದಕ್ಷಿಣದ ಭಾಗದ ನವರಂಗದ ಭಿತ್ತಿಯಲ್ಲಿ ಕರ್ಣದಲ್ಲಿ ಕುಂಭಲತಾದ ಸುಂದರ ರಚನೆಯಿದೆ. ಇದರ ಪಕ್ಕದಲ್ಲಿ ಉಬ್ಬಾದ ಭಾಗವಾದ ಭದ್ರದಲ್ಲಿ ಒಂದು ಜಾಲಕವನ್ನು ನಿರ್ಮಿಸಲಾಗಿದೆ. ಕರ್ಣ ಭಾಗದಲ್ಲಿ ನವರಂಗ, ಅಂತರಾಳ, ಗರ್ಭಗೃಹದ ಕುಂಭಲತಾದ ಅಲಂಕರಣವಿದೆ. ನವರಂಗದ ಮುಂದಿನ ಮೂರು ಭದ್ರಗಳಲ್ಲಿ ಉಬ್ಬು ಭದ್ರಕೋಷ್ಠಗಳಿಗೆ. ಇವುಗಳ ಭದ್ರಕೋಷ್ಠಗಳ ಪಕ್ಕದಲ್ಲಿ ಕುಡ್ಯಸ್ತಂಗಗಳ ರಚನೆಯನ್ನು ಕಾಣಬಹುದು. ಅದರ ಪಕ್ಕದಲ್ಲಿ ಋಷಿ-ಮುನಿಗಳನ್ನು ಕೆತ್ತಲಾಗಿದೆ.

ಅಂತರಾಳದ ಭಿತ್ತಿಯ ನವರಂಗದ ಭಿತ್ತಿ ಗರ್ಭಗೃಹದ ಭಿತ್ತಿಗಿಂತಲೂ ಸ್ಪಷ್ಟ. ಒಳಗಡೆ ಹೋದರೆ ಇಲ್ಲಿ ಒಂದು ಭದ್ರಕೋಷ್ಠವಿದೆ. ಭದ್ರ ಅಕ್ಕಪಕ್ಕದ ಕರ್ಣದಲ್ಲಿ ಕುಂಭಲತಾದ ರಚನೆಯನ್ನು ಕಾಣಬಹುದು. ಗರ್ಭಗೃಹದ ಭಿತ್ತಿ ಕರ್ಣಭದ್ರಗಳನ್ನೊಳಗೊಂಡಿದೆ. ದೇವಾಲಯದ ಗರ್ಭಗೃಹದ ದಕ್ಷಿಣ, ಪಶ್ಚಿಮ, ಉತ್ತರದ ಮಧ್ಯದಲ್ಲಿ ಭದ್ರಕೋಷ್ಠಗಳಿವೆ. ಅದರ ಪಕ್ಕದಲ್ಲಿ ಕುಡ್ಯಸ್ತಂಭಗಳು ಕಾಣಸಿಗುತ್ತವೆ. ಇಲ್ಲಿಯೂ ಕೂಡ ಕರ್ಣದ ಭಾಗದಲ್ಲಿ ಕುಂಭಲತಾವನ್ನು ಕಾಣಬಹುದು. ಗರ್ಭಗೃಹದ ಹಿಂಬದಿಯ ಭಿತ್ತಿಯಲ್ಲಿ ಮಧುರೆ, ಋಷಿಮುನಿಗಳು ಚಾಮರ ಸೇವಕರನ್ನು ಕೆತ್ತಲಾಗಿದೆ.

ನವರಂಗದ ಉತ್ತರಭಾಗದ ಭಿತ್ತಿಯಲ್ಲಿ ಭದ್ರಕರ್ಣಗಳಿವೆ. ಕರ್ಣಕೋಷ್ಠಗಳ ರಚನೆ ಕಂಡುಬಂದವು. ಇಲ್ಲಿ ಹದಿನಾಲ್ಕು ಕೈಗಳ ದೇವಮೂರ್ತಿ ಋಷಿ. ಕೈಮುಗಿದು ನಿಂತಿರುವ ದೃಶ್ಯ, ಗಂಡು ಕೊಡಲಿಯನ್ನು ಹಿಡಿದಿರುವ ಶಿವಭಕ್ತ, ತಪ್ಪಡೆ ನುಡಿಸುವ ಭಕ್ತ, ಸೂರ್ಯ, ಒಂಟಿ ಕಾಲಿನಲ್ಲಿ ತಪಸ್ಸು ಮಾಡುತ್ತಿರುವ ಋಷಿ, ಹಣ್ಣನ್ನು ಹೊತ್ತು ಮಾರುವ ಭಕ್ತ. ಹೀಗೆ ಅನೇಕ ರಚನೆಗಳನ್ನು ಕಾಣಬಹುದು. ಹೀಗೆ ಇಡೀ ದೇವಸ್ಥಾನವು ಅತ್ಯಂತ ಅಲಂಕೃತವಾಗಿದೆ(ಚಿತ್ರ ೧೨).

ನವರಂಗ ಅಂತರಾಳ ಮತ್ತು ಗರ್ಭಗೃಹದ ಪ್ರಸ್ತಾರದ ಭಾಗಗಳು ಒಂದೇ ರೀತಿಯ ರಚನೆಯನ್ನು ಹೊಂದಿವೆ. ಇದು ಉತ್ತರ ವಾಜನ ವಲಭೀ ಕಪೋತಗಳನ್ನು ಒಳಗೊಂಡಿದೆ. ಗರ್ಭಗೃಹದ ಮೇಲೆ

ಗ್ರೀವ ಮತ್ತು ವಿಮಾನದ ರಚನೆಯನ್ನು ಕಾಣಬಹುದು. ಕೋಲಾರದ ಈ ಸೋಮೇಶ್ವರ ದೇವಾಲಯವು ಪೂರ್ವಾಭಿಮುಖವಾದ ದೇವಾಲಯವಾಗಿದೆ. ಇದರ ಗೋಪುರದ ರಚನೆಯನ್ನು ಗಮನಿಸಿದಾಗ ಇದು ದ್ರಾವಿಡ ಶೈಲಿಯ ದೇವಾಲಯವಾಗಿದೆ. ಸೋಮೇಶ್ವರ ದೇವಾಲಯದ ವಿಮಾನವು ತ್ರಿತಲ ರಚನೆಯನ್ನು ಹೊಂದಿದೆ. ಗರ್ಭಗೃಹದ ಮೇಲಿನ ಈ ರಚನೆಗೆ ಗ್ರೀವ ಎಂಬ ಹೆಸರಿನಿಂದ ಕರೆಯುತ್ತಾರೆ. ಗ್ರೀವವು ದೇವಾಲಯದ ಷಡ್ವರ್ಗ ಕ್ರಮದಲ್ಲಿ ನಾಲ್ಕನೆಯ ಭಾಗ. ಇದನ್ನು ಕಂಧರ, ಕಂಠ ಎಂದೂ ಕರೆಯುವುದು ವಾಡಿಕೆ. ಇದು ಪ್ರಸ್ತಾರ ಮತ್ತು ಶಿಖರದ ನಡುವಿನ ಭಾಗವಾಗಿದೆ. ಗ್ರೀವದಲ್ಲಿ ಗೋಡೆಯಂಥ ಭಾಗವನ್ನು ಸೋಮೇಶ್ವರ ದೇವಾಲಯವು ಹೊಂದಿದೆ. ಇದಕ್ಕೆ ಗ್ರೀವ ಪಿಂಡಿ ಎಂದು ಹೆಸರು. ಗ್ರೀವದ ನಾಲ್ಕು ದಿಕ್ಕಿನಲ್ಲೂ ಕೋಷ್ಠಗಳ ರಚನೆಯನ್ನು ಕಾಣಬಹುದು. ಇದರಲ್ಲಿ ಉಬ್ಬುಚಿತ್ರಗಳನ್ನು ಕಾಣಬಹುದು. ಇವಕ್ಕೆ ಗ್ರೀವಕೋಷ್ಠಗಳೆಂದು ಹೆಸರು. ಕೋಲಾರದ ಸೋಮೇಶ್ವರ ದೇವಾಲಯದ ಪಶ್ಚಿಮದಲ್ಲಿ ವಿಷ್ಣುವಿನ ಮೂರ್ತಿ ಇದೆ. ಇವಕ್ಕೆ ಗ್ರೀವ ದೇವತೆ ಎಂದು ಹೆಸರು. ಗರ್ಭಗೃಹದಲ್ಲಿನ ದೇವರ ವಾಹನವು ಶಿಖರದಲ್ಲಿರಬೇಕೆಂದು ಶಿಲ್ಪಗ್ರಂಥಗಳಲ್ಲಿ ಹೇಳಲಾಗಿದೆ. ಅದರಂತೆ ಈ ದೇವಾಲಯದ ಗ್ರೀವದ ನಾಲ್ಕೂ ಮೂಲೆಗಳಲ್ಲೂ ನಂದಿ ವಿಗ್ರಹವನ್ನು ಕಾಣಬಹುದಾಗಿದೆ.

ಗ್ರೀವದ ಮುಂದಿನ ಭಾಗವೇ ಶಿಖರ. ಸೋಮೇಶ್ವರ ದೇವಾಲಯದ ಶಿಖರವು ರುದ್ರಛಂದ ಶಿಖರವಾಗಿದೆ. ಈ ಶಿಖರವು ನಾಲ್ಕು ದಿಕ್ಕುಗಳಲ್ಲಿ ಮಹಾನಾಸಿಗಳನ್ನು ಹೊಂದಿವೆ. ಈ ಮಹಾ ನಾಸಿಗಳ ಪಕ್ಕದಲ್ಲಿ ನಾಲ್ಕು ಉಪದಿಕ್ಕುಗಳಿಗೆ ಅನುನಾಸಿಗಳನ್ನು ಅಳವಡಿಸಲಾಗಿದೆ. ಶಿಖರದ ಮೇಲೆ ಸ್ತೂಪಿ ಅಥವಾ ಕಲಶಗಳ ರಚನೆಯನ್ನು ಕಾಣಬಹುದು. ಇದು ಷಡ್ವಗ ಕ್ರಮದ ಆರನೆಯ ಮತ್ತು ಕೊನೆಯ ಭಾಗ. ಇದು ಲೋಹದಿಂದ ನಿರ್ಮಿತವಾಗಿದೆ. ಹೀಗೆ ಇಡೀ ದೇವಾಲಯವು ಅತ್ಯಂತ ಸೂಕ್ಷ್ಮತೆಯಿಂದ ಸುಂದರವಾಗಿ ಮೂಡಿಬಂದಿದೆ.

**ಅಮ್ಮನವರ ಸನ್ನಿಧಿ**

ದೇವಾಲಯದ ಎಡಭಾಗದಲ್ಲಿ ಅಮ್ಮನವರ ಸನ್ನಿಧಿಯನ್ನು ಕಾಣಬಹುದು. ಅಂದರೆ, ಗರ್ಭಗೃಹ ಉತ್ತರದಲ್ಲಿ ಅಮ್ಮನವರ ಗುಡಿ ಇದೆ. ಇದು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳ ರಚನೆಯನ್ನು ಹೊಂದಿದೆ. ದೇವಾಲಯದ ಮುಖಮಂಟಪವು ಹನ್ನೆರಡು ಕಂಬಗಳ ಸಹಾಯದಿಂದ ನಿರ್ಮಿತವಾಗಿದೆ. ಕಂಬಗಳು ಸರಳವಾದ ಶೈಲಿಯಿಂದ ನಿರ್ಮಾಣವಾಗಿವೆ. ದೇವಾಲಯದ ನವರಂಗವನ್ನು ನಾಲ್ಕು ಪೂರ್ಣಕಂಬಗಳಿಂದಲೂ, ಹನ್ನೆರೆಡು ಗೋಡೆಗಂಬಗಳಿಂದಲೂ ನಿರ್ಮಿಸಲಾಗಿದೆ. ಅಂತರಾಳವು ಆಯತಾಕಾರವಾಗಿದೆ. ಗರ್ಭಗೃಹವು ಚಚ್ಚೌಕಾಕಾರದಲ್ಲಿದೆ. ಇದರಲ್ಲಿ ಪಾರ್ವತಿ ಅಮ್ಮನವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯ ಅಧಿಷ್ಠಾನವು ಸರಳವಾದ ರಚನೆಯನ್ನು ಹೊಂದಿದೆ. ಭಿತ್ತಿಯಲ್ಲಿ ಯಾವುದೇ ಶಿಲ್ಪವಿಲ್ಲ. ಭಿತ್ತಿಯು ಶಿಲೆಯಲ್ಲಿ ರಚನೆಗೊಂಡಿದೆ. ದೇವಸ್ಥಾನದ ಪ್ರಸ್ತಾರ

ಭಾಗದಲ್ಲಿ ಸರಳವಾದ ರಚನೆಯನ್ನು ಹೊಂದಿದೆ. ಕಪೋತವನ್ನು ಮಾತ್ರ ಸ್ಪಷ್ಟವಾಗಿ ಗೋಡೆಗೆ ರಕ್ಷಾಕವಚವಾಗುವಂತೆ ಇಳಿಜಾರಾಗಿ ರಚಿಸಲಾಗಿದೆ. ದೇವಸ್ಥಾನದ ಗರ್ಭಗೃಹ ವಿಮಾನವನ್ನಾಧರಿಸಿ ಈ ದೇವಸ್ಥಾನದ ದ್ವಿತಲ ರಚನೆಯನ್ನು ಹೊಂದಿದೆ. ಇದಕ್ಕೆ "ಜಾತಿವಿಮಾನ" ಎಂದು ಕರೆಯಲಾಗುತ್ತಿದೆ. ಮೊದಲನೆಯ ತಲದಲ್ಲಿ ಅಧಿಷ್ಠಾನ, ಬಿತ್ತಿ, ಪ್ರಸ್ತಾರಕ್ಕೆ ಮೊದಲ ತಲವಾದರೆ, ಮೇಲೆ ಒಂದು ತಲವಿದ್ದು, ಅದರ ಮೇಲೆ ಗ್ರೀವ, ಶಿಖರ ಮತ್ತು ಸ್ತೂಪಿಯ ರಚನೆಯನ್ನು ಕಾಣಬಹುದು. ಗ್ರೀವದಲ್ಲಿ ನಾಲ್ಕು ಮೂಲೆಯಲ್ಲಿ ಸಿಂಹದ ವಿಗ್ರಹಗಳನ್ನು ನಿಲ್ಲಿಸಲಾಗಿದೆ. ದೇವಸ್ಥಾನದ ತುದಿಯಲ್ಲಿ ಕಳಸವಿಲ್ಲ ಮೊದಲಿಗೆ ಲೋಹದ ಕಳಸವಿದ್ದಿರಬೇಕು.

**ಉತ್ಸವಮಂಟಪ :** ದೇವಸ್ಥಾನದ ಈಶಾನ್ಯ ಭಾಗದಲ್ಲಿ ಉತ್ಸವ ಮಂಟಪವಿದೆ. ಇದು ಪ್ರಾಕಾರದ ಒಳಗಡೆಯಲ್ಲೇ ರಚಿಸಲ್ಪಟ್ಟಿದೆ. ಮುಳುಬಾಗಿಲಿನ ಸೋಮೇಶ್ವರ ದೇವಸ್ಥಾನದಲ್ಲಿ ಪ್ರಾಕಾರದ ಹೊರಗಡೆಯಲ್ಲಿ ಇದರ ರಚನೆಯನ್ನು ಕಾಣಬಹುದು. ಕೋಲಾರದ ಈ ಸೋಮೇಶ್ವರನ ದೇವಸ್ಥಾನದಲ್ಲಿ ಪ್ರಾಕಾರದ ಒಳಗಡೆಯಲ್ಲೇ ಇದರ ರಚನೆಯನ್ನು ಕಾಣಬಹುದು. ಹಬ್ಬ, ಉತ್ಸವಗಳು ಸಮಯದಲ್ಲಿ ದೇವರ ಉತ್ಸವಮೂರ್ತಿಗಳನ್ನು ಕೂಡಿಸಲು ಈ ಮಂಟಪದ ರಚನೆಯಾಗಿದೆ. ವಿಜಯನಗರ ದೇವಾಲಯಗಳಲ್ಲಿ ಹೆಚ್ಚಾಗಿ ಈ ರೀತಿಯ ರಚನೆಯನ್ನು ಕಾಣಬಹುದು. ಅಧಿಷ್ಠಾನದ ಮೇಲೆ ನಾಲ್ಕು ಕಂಬಗಳ ಸಹಾಯದಿಂದ ಇದನ್ನು ನಿರ್ಮಿಸಲಾಗಿದೆ. ಈ ನಾಲ್ಕು ಕಂಬಗಳು ಕಣಜ ಶಿಲೆಯಲ್ಲಿ ನಿರ್ಮಿತವಾಗಿವೆ. ಕಂಬಗಳ ಪೀಠಭಾಗವಿದೆ. ಅದರ ಮೇಲೆ ಚಚ್ಚೌಕಾಕಾರದ ಕಂಬಗಳನ್ನು ಕಾಣಬಹುದು. ಕಂಬದ ಒಂದೊಂದು ಮುಖಗಳು ಮೂರು ಭಾಗಗಳನ್ನು ಒಳಗೊಂಡಿವೆ. ಆಗ್ನೇಯ ದಿಕ್ಕಿನಲ್ಲಿರುವ ಕಂಬದಲ್ಲಿ ಮುರುಳೀಧರ, ಯಕ್ಷ, ಯಾಳಿ, ನಂದಿಯನ್ನು ರಚಿಸಲಾಗಿದೆ. ನೈರುತ್ಯದಲ್ಲಿ ಸೂರ್ಯ ಮತ್ಸ, ಪಕ್ಷಿ, ಯಾಳಿ, ಪಕ್ಷಿಗಳನ್ನು ಕಾಣಬಹುದು. ವರುಣ ದಿಕ್ಕಿನಲ್ಲಿನ ಕಂಬದಲ್ಲಿ ನಂದಿ, ಆಂಜನೇಯ ಶಿವಭಕ್ತ ಚಿತ್ರಗಳಿವೆ. ಈಶಾನ್ಯ ದಿಕ್ಕಿನಲ್ಲಿರುವ ಕಂಬದ ಮೇಲೆ ನಂದಿ ಯಾಳಿ ಪಕ್ಷಿ, ಶಿವಭಕ್ತರ ಚಿತ್ರಗಳನ್ನು ಕಾಣಬಹುದಾಗಿದೆ. ಇದರ ಮೇಲೆ ಉತ್ತರ ವಾಜನ, ವಲಭ, ಕಪೋತಗಳನ್ನು ಒಳಗೊಂಡಿದೆ. ಅದರ ಮೇಲೆ ಶಾಲಕೂಟಗಳು ರಚನೆಗೊಂಡಿವೆ. ಹೀಗೆ ಉತ್ಸವ ಮಂಟಪವು ಸೋಮೇಶ್ವರ ದೇವಸ್ಥಾನದ ಉತ್ತಮ ರಚನೆಯಲ್ಲಿ ಒಂದಾಗಿದೆ.

**ಕಲ್ಯಾಣಮಂಟಪ :** ದೇವಸ್ಥಾನದ ವರುಣ ದಿಕ್ಕಿನಲ್ಲಿ ಉತ್ಸವಮಂಟಪದ ರಚನೆಯನ್ನು ಕಾಣಬಹುದು. ದೇವರುಗಳ ವಿಶೇಷ ಉತ್ಸವಗಳಲ್ಲಿ ನಡೆಯುವ ಕಲ್ಯಾಣ ಮಹೋತ್ಸವದ ಸಮಯದಲ್ಲಿ ಈ ಮಂಟಪವನ್ನು ಬಳಸಲಾಗುತ್ತದೆ. ವಿಜಯನಗರ ಕಾಲದ ದೇವಾಲಯಗಳಲ್ಲಿ ಕಲ್ಯಾಣ ಮಂಟಪಗಳನ್ನು ಹೆಚ್ಚಾಗಿ ಕಾಣಬಹುದು. ಕೋಲಾರದ ಸೋಮೇಶ್ವರ ದೇವಸ್ಥಾನ ಕಲ್ಯಾಣ ಮಂಟಪವು ಸರಳ ರೀತಿಯ ಅಧಿಷ್ಠಾನವನ್ನು ಹತ್ತಲು ಸೋಪಾನಗಳನ್ನು ರಚಿಸಲಾಗಿದೆ. ಅಧಿಷ್ಠಾನದ ಮೇಲೆ ಹದಿನೆಂಟು ಕಂಬಗಳ

ಸಹಾಯದಿಂದ ಮಂಟಪವನ್ನು ರಚಿಸಲಾಗಿದೆ. ಸಿಂಹವನ್ನು ಕಂಬಕ್ಕೆ ಆಧಾರವಾಗಿ ನಿಲ್ಲಿಸಿರುವುದರಿಂದ ಸಿಂಹಪಾದ ಕಂಬಗಳೆಂದು ಕರೆಯಲಾಗುತ್ತದೆ. ಮಂಟಪದ ಸುತ್ತಲೂ ಇರುವ ಹದಿನಾಲ್ಕು ಕಂಬಗಳು ಈ ತೆರನಾದ ರಚನೆಯನ್ನು ಹೊಂದಿವೆ. ಮಧ್ಯದ ನಾಲ್ಕು ಕಂಬಗಳು ಒಂದು ಅಡಿಪೀಠವನ್ನು ಹೊಂದಿದ ಚಚ್ಚೌಕಾಕಾರದ ಕಂಬಗಳಾಗಿವೆ. ಈ ನಾಲ್ಕು ಕಂಬಗಳ ಮಧ್ಯೆ ವೇದಿಕೆಯ ರಚನೆ ಇದೆ. ಈ ನಾಲ್ಕು ಕಂಬಗಳಲ್ಲಿ ವ್ಯಾಳಿ, ಪಕ್ಷಿ, ಶಿವಭಕ್ತ ದೇವಾನು ದೇವತೆಗಳ ಶಿಲ್ಪಗಳನ್ನು ಕೆತ್ತಲಾಗಿದೆ.

## ೨. ಕೋಗಳಿಯ ವೀರಭದ್ರ ದೇವಸ್ಥಾನ

ಬಳ್ಳಾರಿ ಜಿಲ್ಲಾ ಹಗರಿಬೊಮ್ಮನಹಳ್ಳಿ ತಾಲೂಕಿಗೆ ಸೇರಿದ ಕೋಗಳಿ ಇಂದು ಪುಟ್ಟ ಗ್ರಾಮ. ಹಗರಿ ಬೊಮ್ಮನಹಳ್ಳಿ ತಾಲೂಕಿನಲ್ಲಿಯೇ ಅತಿ ಪ್ರಾಚೀನ ಅವಶೇಷಗಳನ್ನು ಕೋಗಳಿ ಗ್ರಾಮವು ಹೊಂದಿದೆ. ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನೊಳಂಬವಾಡಿ ಮೂವತ್ತೆರಡು ಸಾಸಿರದ ಉಪರಾಜಧಾನಿಯಾಗಿ ಕೋಗಳಿ ಐದುನೂರು ನಾಡು ಕೆಲಸ ಮಾಡುತ್ತಿತ್ತು. ಕ್ರಿ.ಶ.೫೨೯ರಲ್ಲಿ ಗಂಗದೊರೆ ದುರ್ವಿನೀತನು ಕೋಗಳಿಯಲ್ಲಿ ಬಸದಿಯೊಂದನ್ನು ನಿರ್ಮಿಸಿದನೆಂದು ಕ್ರಿ.ಶ.೧೦೫೫ ಶಾಸನವೊಂದು ತಿಳಿಸುತ್ತದೆ.[೭] ಕೋಗಳಿ ಎಂಬ ಹೆಸರು ವ್ಯವಸಾಯ ಮೂಲದಿಂದ ಬಂದದ್ದು. ಕೋಗುಳಿ ಎಂಬ ಶಬ್ದವನ್ನು ವಿಭಾಗಿಸಿದಾಗ 'ಕೋಗು' ಎಂದರೆ ಗೇಣಿಗೆ ಬಿಟ್ಟ ಭೂಮಿ ಎಂದು ಅರ್ಥ ಬರುತ್ತದೆ. ಇಳೆ ಎಂದರೆ ಭೂಮಿ ಎಂದು ಅರ್ಥವಿದೆ. ಹೀಗಾಗಿ ಕೋಗುಳಿ ಎಂದರೆ ಗೇಣಿಗೆ ಒಳಪಡುತ್ತಿದ್ದ ಭೂಮಿ ಎಂಬ ಅರ್ಥವನ್ನು ನೀಡುತ್ತದೆ. ಈ ಕೋಗುಳಿಯು ವಿಜಯನಗರಕಾಲದಲ್ಲಾಗಲೇ ಕೊಟ್ಟೂರಿನ ಚಾವಡಿಗೆ ಸೇರಿತ್ತು. ಕ್ರಿ.ಶ.೧೫೩೧ರಲ್ಲಿ ಕೋಗಳಿ ಗ್ರಾಮದಲ್ಲಿ ವೀರಭದ್ರ ದೇವರನ್ನು ಪ್ರತಿಷ್ಠಾಪಿಸಲಾಗಿದೆ ಎಂದು ಶಾಸನವೊಂದರಲ್ಲಿ ತಿಳಿಸಲಾಗಿದೆ.[೮] ಕೋಗುಳಿಯ ವೀರಭದ್ರ ದೇವರನ್ನು ಕೊಟ್ಟೂರಿನ ತಿಪ್ಪಶೆಟ್ಟಿ ಪ್ರತಿಷ್ಠಾಪಿಸಿದನೆಂದು ಉಲ್ಲೇಖಿಸಲಾಗಿದೆ(ಚಿತ್ರ ೧೩).

ವೀರಭದ್ರದೇವಾಲಯವು ಕೋಗಳಿ ಊರಿನ ಮಧ್ಯಭಾಗದಲ್ಲಿ ನಿರ್ಮಾಣವಾಗಿದೆ. ಈ ದೇವಾಲಯವು ಸ್ವಲ್ಪ ಎತ್ತರವಾದ ಸ್ಥಳದಲ್ಲಿದೆ. ಇದರಲ್ಲಿ ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದ ಪ್ರವೇಶದ್ವಾರವು ಸರಳ ಕೆತ್ತನೆಯಿಂದ ಕೂಡಿತ್ತು. ಈ ಗರ್ಭಗೃಹದ ದ್ವಾರದಲ್ಲಿ ಗಜಲಕ್ಷ್ಮಿಯ ಶಿಲ್ಪವನ್ನು ಕೆತ್ತಲಾಗಿದೆ. ಇದರ ಒಳಗಡೆಯಲ್ಲಿ ವೀರಭದ್ರನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ವೀರಭದ್ರನ ಈಗಿನ ಮೂರ್ತಿ ಹೊಸದಾಗಿ ಪ್ರತಿಷ್ಠಾಪಿಸಲಾಗಿದೆ. ವೀರಭದ್ರನ ಮೂಲ ಹಳೆಯ ಮೂರ್ತಿಯು ಬಸ್ ನಿಲ್ದಾಣದ ಪಕ್ಕದ ಕಲ್ಲೇಶ್ವರ ದೇವಸ್ಥಾನದಲ್ಲಿಡಲಾಗಿದೆ. ವೀರಭದ್ರೇಶ್ವರ ಮೂಲ ವಿಗ್ರಹವು ತೃಟಿತಗೊಂಡಿದೆ. ಮೂರ್ತಿಯು ಬಲಗೈಯಲ್ಲಿ ಗುರಾಣಿ ಮತ್ತು ಬಿಲ್ಲನ್ನು ಹಿಡಿದುಕೊಂಡಿದೆ. ಎಡಗೈನಲ್ಲಿ ಖಡ್ಗ ಹಿಡಿದಿರುವ ಕೈ ಮುಕ್ಕಾಗಿದೆ. ಇನ್ನೊಂದು ಕೈಯು




೧).ಗರ್ಭ ಗೃಹ ೨). ಅಂತರಾಳ ೩).ಸಭಾ ಮಂಟಪ (ನವರಂಗ)

೭ ಕೋಗಳಿಯ ವೀರಭದ್ರ ದೇವಸ್ಥಾನ ತಲನಕ್ಷೆ

ಬಾಣವನ್ನು ಹಿಡಿದುಕೊಂಡಿದೆ. ವೀರಭದ್ರನ ಎಡಗಾಲಿನ ಪಕ್ಕದಲ್ಲಿ ದಕ್ಷಬ್ರಹ್ಮನ ಚಿತ್ರವನ್ನು ಕಾಣಬಹುದು. ಬಲಗಾಲಿನ ಪಕ್ಕದಲ್ಲಿ ನಂದಿಯನ್ನು ಕೆತ್ತಲಾಗಿದೆ. ಹೀಗೆ ಇಡೀ ಮೂರ್ತಿಯು ದ್ವಿಭಂಗಿಯಲ್ಲಿ ರಚನೆಗೊಂಡಿದೆ. ವಿಗ್ರಹವನ್ನು ಒಂದು ಅಡಿ ಎತ್ತರವಾದ ಪೀಠದ ಮೇಲೆ ನಿರ್ಮಿಸಲಾಗಿದೆ. ಈ ಪೀಠದಲ್ಲಿ ಕಾಲದ ಉಲ್ಲೇಖವಿಲ್ಲದ ಅಸ್ಪಷ್ಟ ಶಾಸನವನ್ನು ಕೆತ್ತಲಾಗಿದೆ(ಚಿತ್ರ ೧೪).[೯]

ಇಡೀ ದೇವಾಲಯವನ್ನು ಆಧುನಿಕ ಪರಿಗಳಿಂದ ಜೀರ್ಣೋದ್ಧಾರಗೊಳಿಸಲಾಗಿದೆ. ಇದೇ ಸುಮಾರು ಎಂಟುನೂರು ವರ್ಷಗಳು ಹಳೆಯದಿರಬಹುದೆಂದು ಶಾಸನಶಾಸ್ತ್ರಜ್ಞರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಶಾಸನದಲ್ಲಿ ಸೂರ್ಯನ ವಿಗ್ರಹವನ್ನು ಶಿವನಂದಿಯ ಮೊಮ್ಮಗ ಪ್ರತಿಷ್ಠಾಪಿಸಿದ್ದನ್ನು ಉಲ್ಲೇಖಿಸಿದೆ. ವಿಗ್ರಹದ ಮೇಲಿರುವ ಶಾಸನವನ್ನು ಬೇರೆಡೆಯಿಂದ ತಂದು ಇಲ್ಲಿ ಇಡಲಾಗಿದೆ. ವೀರಭದ್ರ ದೇವಸ್ಥಾನದ ಸುತ್ತ ಈಗ ತಡೆಗೋಡೆಯನ್ನು ನಿರ್ಮಿಸಿದ್ದಾರೆ. ದೇವಸ್ಥಾನದ ಹೊರಗೋಡೆ ಆಧುನಿಕವಾಗಿ ನಿರ್ಮಾಣಗೊಂಡದ್ದಾಗಿದೆ. ಐತಿಹಾಸಿಕ ಶ್ರೀಮಂತಿಕೆ ಹೊಂದಿದ ಕೋಗಳಿ ಗ್ರಾಮವು ವಿಜಯನಗರ ಕಾಲದ ಈ ವೀರಭದ್ರನ ದೇವಸ್ಥಾನವನ್ನು ತನ್ನ ಒಡಲಲ್ಲಿಟ್ಟುಕೊಂಡಿದೆ.

### ೮. ಗುಡಿಪಲ್ಲಿ, ಸೋಮೇಶ್ವರ ದೇವಸ್ಥಾನ

ವಿಜಯನಗರ ಕಾಲದ ವಾಸ್ತುಶೈಲಿಯ ಸೋಮೇಶ್ವರ ದೇವಾಲಯವನ್ನು ಗುಡಿಪಲ್ಲಿಯಲ್ಲಿ ನಿರ್ಮಿಸಲಾಗಿದೆ. ಈ ಗುಡಿಪಲ್ಲಿ ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲೂಕಿನಲ್ಲಿದೆ. ಊರಿನಲ್ಲಿ ಗುಡಿಗಳು ಹೆಚ್ಚಾಗಿ ಇರುವುದರಿಂದ ಇದಕ್ಕೆ ಗುಡಿಪಲ್ಲಿ ಎಂದು ಹೆಸರು ಬಂದಿದೆ. ಶಾಸನಗಳಲ್ಲಿ ಈ ಊರಿಗೆ ಗುಡಿಪಲ್ಲಿ ಎಂದು ಹೆಸರಿಸಲಾಗಿದೆ. ಈ ಗುಡಿಪಲ್ಲಿಯು ಮುಳುಬಾಗಿಲಿನಿಂದ ೨೪.ಕೀ.ಮೀ ದೂರದಲ್ಲಿದೆ. ಇಡೀ ಊರೇ ಪುರಾತನ ಅವಶೇಷಗಳನ್ನು ಹೊಂದಿದೆ. ಇಲ್ಲಿ ವಿಜಯನಗರ ಶೈಲಿಯ ಸೋಮೇಶ್ವರ, ರಾಮ ದೇವಾಲಯಗಳಿವೆ. ಅಲ್ಲದೆ ಇನ್ನೂ ನಾಲ್ಕು ಐದು ದೇವಸ್ಥಾನಗಳಿವೆ.

ಈ ಸೋಮೇಶ್ವರ ದೇವಾಲಯವು ಒಂದು ಸುತ್ತಿನ ಪ್ರಾಕಾರವನ್ನು ಹೊಂದಿದ್ದು, ದ್ವಾರದ ಪ್ರಧಾನ ಬಾಗಿಲು ಪೂರ್ವಕ್ಕೆ ಮುಖ ಮಾಡಿಕೊಂಡಿದೆ. ಸುತ್ತಲಿನ ಪ್ರಾಕಾರ ಮತ್ತು ದ್ವಾರಬಾಗಿಲು ಸಂಪೂರ್ಣವಾಗಿ ಹಾಳಾಗಿ ಹೋಗಿದೆ. ಈ ಪ್ರಾಕಾರದ ಅವಶೇಷಗಳು ಮಾತ್ರ ಈಗ ನೋಡಲು ಸಿಗುತ್ತವೆ. ದೇವಾಲಯದ ಪ್ರಾಕಾರದ ಒಳಗೆ ಸೋಮೇಶ್ವರ, ಅಮ್ಮನವರ ಸನ್ನಿಧಿ ಹಾಗೂ ಗಣೇಶನ ದೇವಸ್ಥಾನಗಳು ಕಾಣಸಿಗುತ್ತವೆ. ಅಲ್ಲದೆ, ಪ್ರಾಕಾರದ ಎಡಭಾಗದಲ್ಲಿ ನಾಟ್ಯಮಂಟಪ ಮತ್ತು ಬಲಭಾಗದಲ್ಲಿ ಯಾಗಮಂಟಪಗಳ ಹಾಳಾದ ಅಪಶೇಷಗಳು ಕಾಣಸಿಗುತ್ತವೆ. ಪ್ರಧಾನ ದೇವಸ್ಥಾನವಾದ ಸೋಮೇಶ್ವರ ದೇವಸ್ಥಾನವು ಪ್ರಮುಖವಾಗಿ ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ.




೧).ಗರ್ಭ ಗೃಹ ೨). ಅಂತರಾಳ ೩).ಅರ್ಧ ಮಂಟಪ ೪). ನವರಂಗ ೫).ಮುಖ ಮಂಟಪ ೬) ಅಮ್ಮನವರ ಸನ್ನಿಧಿ

೮. ಸೋಮೇಶ್ವರ ದೇವಸ್ಥಾನದ ನವರಂಗದ ತಲನಕ್ಷೆ

ದೇವಸ್ಥಾನದ ಬಾಗಿಲು ದಕ್ಷಿಣ ದಿಕ್ಕಿನಲ್ಲಿದೆ. ಬಾಗಿಲು ಮುಂದೆ ಗೋಡೆಗೆ ಹೊಂದಿಕೊಂಡಂತೆ ಎರಡು ಕಂಬಗಳನ್ನು ಹೊಂದಿದ ಮುಖಮಂಟಪವನ್ನು ರಚಿಸಲಾಗಿದೆ. ಕಂಬಗಳು ವಿಜಯನಗರ ಶೈಲಿಯಲ್ಲಿದ್ದು ಒಟ್ಟು ಮೂರು ಚೌಕಭಾಗಗಳನ್ನು ಹೊಂದಿವೆ. ಒಂದೊಂದು ಚೌಕದಲ್ಲೂ ಶಿಲ್ಪಗಳನ್ನು ರಚಿಸಲಾಗಿದೆ. ಈ ಮುಖ ಮಂಟಪದ ಪೂರ್ವದ ಕಂಬದಲ್ಲಿ ಸುಂದರಿಯರು ಕೃಷ್ಣ, ಗೋಪಾಲ, ಹೂವು ಬೇಡರಕಣ್ಣಪ್ಪ, ಶಿವಲಿಂಗಕ್ಕೆ ಕಣ್ಣನ್ನು ಅರ್ಪಿಸುವ ಚಿತ್ರ, ಮತ್ತು ಕಣ್ಣಪ್ಪನು ಶಿವನನ್ನು ಪೂಜಿಸುವ ಶಿಲ್ಪಗಳು ಮನೋಜ್ಞವಾಗಿ ಮೂಡಿಬಂದಿವೆ. ಇನ್ನೊಂದು ಕಂಬದಲ್ಲಿ ನಾಟ್ಯಗಾರ, ಹಸುವು ಶಿವಲಿಂಗಕ್ಕೆ ಹಾಲೆರೆಯುವ ಶಿಲ್ಪ, ಶಿವಭಕ್ತ, ಹೂವು, ಗಣೇಶ, ಸಿಂಹ ಮುಂತಾದ ಶಿಲ್ಪಗಳನ್ನು ಸ್ತಂಭದ ಭಾಗದಲ್ಲಿ ಕಾಣಬಹುದು. ಈ ಮುಖಮಂಟಪಕ್ಕೆ ಪೂರ್ವ, ಪಶ್ಚಿಮದಲ್ಲಿ, ಸೋಪಾನಗಳನ್ನು ನಿರ್ಮಿಸಲಾಗಿದೆ (ಚಿತ್ರ ೧೫). ಈ ಮುಖಮಂಟಪದ ಮುಂದಗಡೆ, ನವರಂಗದ ಬಲಬದಿಯಲ್ಲಿ ವಿಜಯನಗರಕಾಲದ ಶಿಲಾಶಾಸನವನ್ನು ಕಾಣಬಹುದು. ಇದು ಕ್ರಿ.ಶ.೧೪೩೪ರ ಕಾಲದ್ದಾಗಿದೆ(ಚಿತ್ರ ೧೬).[೧೦]

ದೇವಾಲಯವು ಉಪಪೀಠವನ್ನು, ಅಧಿಷ್ಠಾನವನ್ನು ಒಳಗೊಂಡಿದೆ. ದೇವಾಲಯ ಸಂಪೂರ್ಣವಾಗಿ ಕಣಜ ಶಿಲೆಯಲ್ಲಿ ನಿರ್ಮಾಣಗೊಂಡಿದೆ. ದೇವಾಲಯದ ಮುಖಮಂಟಪದ ಭಿತ್ತಿಯಲ್ಲಿ ಯಾವುದೇ ಶಿಲ್ಪ ಕೆತ್ತನೆಗಳಿಲ್ಲದೆ ಸರಳವಾಗಿದೆ. ಇಲ್ಲಿ ಶಾಸನವನ್ನು ಬರೆಯಲಾಗಿರುವುದೇ ಇದಕ್ಕೆ ಕಾರಣವಾಗಿರಬೇಕು. ದೇವಾಲಯ ಗರ್ಭಗೃಹದ ಬೆನ್ನುಗೋಡೆಯಲ್ಲಿ ಶಾಲ ಕೋಷ್ಠಕವನ್ನು ನಿರ್ಮಿಸಲಾಗಿದ್ದು, ಅದರಲ್ಲಿ ಮೂರ್ತಿ ಮಾತ್ರ ಇಲ್ಲವಾಗಿದೆ. ದೇವಾಲಯದ ಗರ್ಭಗೃಹದ ಸುತ್ತಲೂ ಫಲಕ ಕುಡ್ಯವನ್ನು ನಿರ್ಮಿಸಲಾಗಿದೆ. ದೇವಾಲಯದ ಪ್ರಾಕಾರದ ಮುಖ್ಯ ಬಾಗಿಲು ಕಡೆಯ ಗರ್ಭಗೃಹದ ಎದುರಿನ ಭಿತ್ತಿಯಲ್ಲಿ ವಾತಾಯನವನ್ನು ನಿರ್ಮಿಸಲಾಗಿದೆ. ಇದರ ಮೂಲಕ ಸೂರ್ಯನ ಕಿರಣಗಳು ಪ್ರತಿದಿನ ಬೆಳಿಗ್ಗೆ ಲಿಂಗದ ಮೇಲೆ ಬೀಳುವಂತೆ ವ್ಯವಸ್ಥೆ ಮಾಡಲಾಗಿದೆ. ಗರ್ಭಗೃಹದ ಉತ್ತರದ ಗೋಡೆಯಲ್ಲಿ ಪ್ರಣಾಳಿಕೆಯನ್ನು ಅಳವಡಿಸಲಾಗಿದೆ. ಇಲ್ಲಿಯೂ ಕೂಡ ಕೋಷ್ಠಕಗಳನ್ನು ನಿರ್ಮಿಸಿದ ಭಿತ್ತಿ ಇದೆ. ಭಿತ್ತಿಯ ಮೇಲೆ ಸರಳವಾದ ರಚನೆಯ ಎತ್ತರ, ವಾಜನಗಳನ್ನು ಒಳಗೊಂಡಿದೆ. ಕಪೋತ ಭಾಗವು ವಿಜಯನಗರ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ದೇವಾಲಯದ ಮೇಲಿನ ರಚನೆಗಳಾದ ಶಿಖರ-ಗ್ರೀವ ಮುಂತಾದ ಎಲ್ಲಾ ರಚನೆಗಳು ಸಂಪೂರ್ಣವಾಗಿ ಹಾಳಾಗಿ ಹೋಗಿವೆ.

ದೇವಾಲಯದ ದಕ್ಷಿಣದ ಮುಖಮಂಟಪದಿಂದ ನವರಂಗವನ್ನು ಪ್ರವೇಶಿಸುವ ಮಾರ್ಗವಿದೆ. ನವರಂಗವು ನಾಲ್ಕು ಕಂಬಗಳನ್ನು ಹೊಂದಿದ್ದು ವಿಶಾಲವಾಗಿ ರಚನೆಗೊಂಡಿದೆ. ಈ ನಾಲ್ಕು ಕಂಬಗಳು ವಿಜಯನಗರ ಶೈಲಿಯ ರಚನೆಯಾಗಿದೆ. ನವರಂಗದ ಒಂದು ಕಂಬದಲ್ಲಿ ಕೃಷ್ಣ, ಸುಂದರಿಯರು ಗೋಪಾಲ, ಹೂ, ಬೇಡರ ಕಣ್ಣಪ್ಪನ ಶಿವಪೂಜೆ ಮಾಡುವ ಶಿಲ್ಪ, ಕಣ್ಣಪ್ಪ ಶಿವಲಿಂಗಕ್ಕೆ ಕಣ್ಣನ್ನು ಅರ್ಪಿಸುವುದು ಮುಂತಾದ ಶಿಲ್ಪರಚನೆಯನ್ನು ಹೊಂದಿವೆ. ಇನ್ನೊಂದು ಕಂಬದಲ್ಲಿ ನಾಟ್ಯ ಮಾಡುವವರು

ಹಸು ಲಿಂಗಕ್ಕೆ ಹಾಲು ಅರ್ಪಿಸುವ ಚಿತ್ರ, ಶಿವಭಕ್ತ ಮುಂತಾದ ಚಿತ್ರಗಳನ್ನು ನವರಂಗದ ಕಂಬಗಳು ಒಳಗೊಂಡಿದೆ. ಅಂತರಾಳವು ಗರ್ಭಗೃಹ ಮತ್ತು ನವರಂಗವನ್ನು ಜೋಡಿಸುವ ಭಾಗವಾಗಿದೆ. ಇದು ಕೂಡ ಸರಳವಾಗಿ ರಚಿಸಲಾಗಿದೆ. ಇದು ಆಯತಾಕಾರದ ರಚನೆಯನ್ನು ಹೊಂದಿದೆ. ಇದು ಗರ್ಭಗೃಹಕ್ಕಿಂತ ಚಿಕ್ಕದಾದ ರಚನೆಯನ್ನು ಹೊಂದಿದೆ, ದೇವಸ್ಥಾನದ ಮುಖ್ಯ ಭಾಗವಾದ ಗರ್ಭಗೃಹವು ಚೌಕಾಕಾರದಲ್ಲಿ ನಿರ್ಮಾಣವಾಗಿದೆ. ಇದು ಪೂರ್ವಾಭಿಮುಖವಾಗಿರುವ ಗರ್ಭಗೃಹವಾಗಿದೆ. ನವರಂಗದ ಪೂರ್ವದ್ವಾರದ ಜಾಲಾಂದ್ರದಿಂದ ಪ್ರತಿದಿನ ಬೆಳಗಿನ ಸಮಯದಲ್ಲಿ ಸೂರ್ಯನ ಕಿರಣಗಳು ಸೋಮೇಶ್ವರ ಲಿಂಗವನ್ನು ಸ್ಪರ್ಶಿಸುತ್ತವೆ. ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಮೊದಲಿಗೆ ಗರ್ಭಗೃಹ ತಳಭಾಗವು ಅಂತರಾಳದ ತಳಕ್ಕಿಂತ ಸ್ವಲ್ಪ ಕೆಳಗೆ ಇದ್ದಿತಂತೆ, ಈಗ ಅಂತರಾಳದ ತಳಭಾಗಕ್ಕೆ ಸಮನಾಗಿ ಗಾರೆಯನ್ನು ಹಾಕಿ ಎಲ್ಲಾ ತಳಭಾಗವನ್ನು ಸಮ ಮಾಡಿದ್ದಾರೆ. ಹೀಗೆ ಇಡೀ ಸೋಮೇಶ್ವರ ದೇವಸ್ಥಾನದ ಸಮುಚ್ಚಯವು ಸುಂದರ ವಾಸ್ತು ವಿಜಯನಗರಶೈಲಿಯನ್ನು ಹೊಂದಿದ ದೇವಸ್ಥಾನವಾಗಿವೆ.

### ೯. ಬೆಳ್ಳೂರಿನ (ಕೋಲಾರ ಜಿಲ್ಲೆ) ಈಶ್ವರ ದೇವಸ್ಥಾನ

ಬೆಂಗಳೂರಿನಿಂದ ಕೋಲಾರಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಸಿಗುವ ಸಣ್ಣ ಹಳ್ಳಿಯೇ ಬೆಳ್ಳೂರು. ವಿಜಯನಗರ ಕಾಲದಲ್ಲಿ ಈ ಊರು ಒಂದು ಪ್ರಮುಖವಾದ ಪಟ್ಟಣವಾಗಿರಬೇಕು.[೧೧] ಇಲ್ಲಿ ವಿಜಯನಗರ ವಾಸ್ತುಶೈಲಿಯನ್ನು ಹೊಂದಿರುವ ರಾಮದೇವಾಲಯ, ಆಂಜನೇಯ ದೇವಾಲಯ, ಪಾರ್ವತಿ ದೇವಾಲಯ ಹಾಗೂ ಈಶ್ವರನ ದೇವಸ್ಥಾನಗಳಿವೆ.

ಬೆಳ್ಳೂರಿನ ಬಸ್ ನಿಲ್ದಾಣದಿಂದ ಇಳಿದು ನೇರವಾಗಿ ನೂರು ಮೀಟರ್ ದೂರಸಾಗಿದರೆ ಎದುರಿನಲ್ಲೇ ಊರಿನ ಹಿರಿಯ ಪ್ರಾಥಮಿಕ ಶಾಲೆ ಸಿಗುವುದು. ಈ ಶಾಲೆಯ ಪಕ್ಕದಲ್ಲೇ ಈಶ್ವರನ ದೇವಸ್ಥಾನವು ಶಿಥಿಲಾವಸ್ಥೆಯಲ್ಲಿ ನಿಂತುಕೊಂಡಿದೆ. ಮೊದಲಿಗೆ ಈ ದೇವಾಲಯವು ಪ್ರಾಕಾರವನ್ನು ಒಳಗೊಂಡಂತೆ, ಸಂಕೀರ್ಣವಾಗಿರಬೇಕು. ಆದರೆ ಈಗ ಅವೆಲ್ಲವೂ ಹಾಳಾಗಿವೆ. ದೇವಾಲಯಕ್ಕೆ ಪಶ್ಚಿಮ ದಿಕ್ಕಿಗೆ ಕಟ್ಟಿದ ದ್ವಾರಗೋಪುರವು ಹಾಳಾಗಿದೆ. ಈ ಗೋಪುರದ ಕೆಳಗಿನ ಮಂಟಪವು ಇನ್ನೂ ಉಳಿದುಕೊಂಡಿದೆ. ಇದನ್ನು ಹೊತ್ತು ನಿಂತಿದ್ದ ೧೬ ಕಂಬಗಳು ಮಾತ್ರ ಹಾಗೆ ಇವೆ. ಉಳಿದ ಭಿತ್ತಿ ಎಲ್ಲಾ ಹಾಳಾಗಿ ಹೋಗಿದೆ. ಈ ದ್ವಾರಗೋಪುರದ ಎದುರಿಗೆ ಶಾಲೆಯ ಆವರಣದ ಎತ್ತರದ ಗೋಡೆಯು ಅಡ್ಡಬಂದಿದೆ. ಈ ದ್ವಾರಗೋಪುರದ ಮೇಲಿನ ಇಟ್ಟಿಗೆ ಮತ್ತು ಗಾರೆಯು ಕೆತ್ತನೆಗಳು ಹಾಳಾಗಿ ಹೋಗಿವೆ.

ದೇವಸ್ಥಾನವು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡಿದೆ. ದೇವಸ್ಥಾನವು ಪೂರ್ವಾಭಿಮುಖವಾಗಿದೆ. ಆದರೆ, ನವರಂಗಕ್ಕೆ ಪ್ರವೇಶದ್ವಾರವು ದಕ್ಷಿಣಕ್ಕಿದೆ. ನವರಂಗದ ಮುಂದೆ ದಕ್ಷಿಣದಲ್ಲಿ ನವರಂಗಕ್ಕೆ ಹೊಂದಿಕೊಂಡಂತೆ, ಮುಖಮಂಟಪವಿದೆ. ಈ ಮುಖಮಂಟಪ ನವರಂಗಕ್ಕೆ




೧). ಗರ್ಭ ಗೃಹ ೨). ಅಂತರಾಳ ೩). ನವರಂಗ ೪). ಮುಖ ಮಂಟಪ

೯). ಬೆಳ್ಳೂರಿನ ಈಶ್ವರ ದೇವಸ್ಥಾನ ತಲನಕ್ಷೆ.

ಹೊಂದಿಕೊಂಡು ಎರಡು ಕಂಬಗಳ ಸಹಾಯದಿಂದ ನಿರ್ಮಾಣವಾಗಿದೆ. ಈ ಎರಡೂ ಕಂಬಗಳ ಸರಳಶೈಲಿಯ ರಚನೆಹೊಂದಿವೆ. ಮೇಲಿನ ಬೋದಿಗೆಯೂ ಸಹ ಸರಳವಾದ ರಚನೆಯನ್ನು ಹೊಂದಿವೆ. ದೇವಾಲಯದ ನವರಂಗಕ್ಕೆ ಪ್ರವೇಶದ್ವಾರವು ದಕ್ಷಿಣದಲ್ಲಿದೆ. ಕಂಬಗಳು ಮೂರು ಚೌಕಗಳನ್ನು ನಾಲ್ಕುದಿಕ್ಕಿನಲ್ಲಿ ಹೊಂದಿವೆ. ಚೌಕಗಳಲ್ಲಿ ಯಾವುದೇ ಶಿಲ್ಪವನ್ನು ಕೆತ್ತದೆ, ಸರಳವಾಗಿ ಕೆತ್ತಲಾಗಿದೆ. ಮುಂದಿನ ಭಾಗವೇ ಅಂತರಾಳ ಅಂತರಾಳವು ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಗರ್ಭಗೃಹ ಮತ್ತು ನವರಂಗಕ್ಕೆ ಜೋಡಿಸುವ ಕೊಂಡಿಯಾಗಿದೆ ಅಂತರಾಳ. ಈ ಅಂತರಾಳದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದಲ್ಲಿ ಈಶ್ವರ ಲಿಂಗವನ್ನು ಪೂರ್ವಕ್ಕೆ ಅಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹವು ಚಚ್ಚೌಕಾರವನ್ನು ಹೊಂದಿದೆ(ಚಿತ್ರ ೧೭).

ದೇವಾಲಯದ ಉಪಪೀಠವು ಮಣ್ಣಿನಲ್ಲಿ ಮುಚ್ಚಿಹೋಗಿದೆ. ಅದಿಷ್ಠಾನವು ಜಗತಿ, ಕಂಪ, ಕುಮದವನ್ನು ಒಳಗೊಂಡಿದೆ. ನವರಂಗದಲ್ಲಿನ ಭಿತ್ತಿಯು ಸುತ್ತಲೂ ಯಾವುದೇ ಶಿಲ್ಪವು ಒಳಗೊಂಡಿಲ್ಲ. ಅಲ್ಲಲ್ಲಿ, ಗೋಡೆಗಂಬದ ರಚನೆಯನ್ನು ಭಿತ್ತಿಗಳಲ್ಲಿ ಕಾಣಬಹುದು. ಇವಕ್ಕೆ ಕುಡ್ಯ ಸ್ತಂಭಗಳೆಂದು ಕರೆಯಲಾಗುತ್ತದೆ. ನವರಂಗದ ಭಿತ್ತಿಯಲ್ಲಿ ಯಾವುದೇ ಕೋಷ್ಠ ಕಂಡುಬರುವುದಿಲ್ಲ. ಅಂತರಾಳದ ಭಿತ್ತಿಯು ನವರಂಗ ಹಾಗೂ ಗರ್ಭಗೃಹಕ್ಕಿಂತ ಚಿಕ್ಕದಾಗಿದೆ. ಅಂತರಾಳದ ಉತ್ತರ, ದಕ್ಷಿಣ, ಹೊರಭಿತ್ತಿಯಲ್ಲಿ ಕೋಷ್ಠದ ರಚನೆಯನ್ನು ಕಾಣಬಹುದು. ಈ ಕೋಷ್ಠದಲ್ಲಿ ಯಾವುದೇ ಬಿಂಬವನ್ನು ಪ್ರತಿಷ್ಠಾಪಿಸಿಲ್ಲ. ಗರ್ಭಗೃಹವು ಉತ್ತರ, ದಕ್ಷಿಣ ಹಾಗೂ ಪಶ್ಚಿಮದಲ್ಲಿ ಕೋಷ್ಠವನ್ನು ಹೊಂದಿದೆ. ಮಧ್ಯದಲ್ಲಿ ಕುಡ್ಯ ಸ್ತರಗಳನ್ನು ಕಾಣಬಹುದು. ಪ್ರಸ್ತರವನ್ನು ಹೊಂದಿದ ಭಾಗದಲ್ಲಿ ಕಪೋತ ನಾಶಿಯನ್ನು ಹೊಂದಿದೆ. ಮೇಲೆ ಶಿಖರವು ಇಟ್ಟಿಗೆ ಮತ್ತು ಗಾರೆಗಳ ರಚನೆಯನ್ನು ಹೊಂದಿದೆ. ಶಿಖರವು ಶಿಥಿಲಾವಸ್ಥೆಯಲ್ಲಿದ್ದು, ಇಟ್ಟಿಗೆಗಳು ಹೊರಗೆ ಕಾಣಸಿಗುತ್ತವೆ. ಇಲ್ಲಿ ಕೂಡ ಶಾಲಾಗಳನ್ನು ಅಳವಡಿಸಲಾಗಿದ್ದು, ಅದರಲ್ಲಿ ಬಿಂಬಗಳನ್ನು ಕಾಣಬಹುದು. ಈ ಬಿಂಬಗಳು ಗುರುತಿಸಲಾರದಷ್ಟು ಹಾಳಾಗಿ ಹೋಗಿವೆ(ಚಿತ್ರ ೧೮).

**ಅಮ್ಮನವರ ಸನ್ನಿಧಿ**

ದೇವಾಲಯದ ಎಡದಲ್ಲಿ ಅಂದರೆ ಎತ್ತರದಲ್ಲಿ ಪಾರ್ವತಿ ಅಮ್ಮನವರ ದೇವಾಲಯವಿದೆ. ಇದು ಕೂಡ ಗರ್ಭಗೃಹ ಅಂತರಾಳ ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಪಾರ್ವತಿದೇವಿಯ ಮೂರ್ತಿಯನ್ನು ಕಾಣಬಹುದು. ಪಾರ್ವತಿದೇವಾಲಯದ ನವರಂಗವು ತೆರೆದ ನವರಂಗವಾಗಿದೆ. ಇದನ್ನು ಈಗ ಕಲ್ಲಿನಿಂದ ಕಟ್ಟಲಾಗಿದೆ. ಇದರ ದ್ವಾರವು ದಕ್ಷಿಣದಲ್ಲಿ ನಿರ್ಮಿಸಲಾಗಿದೆ. ದೇವಾಲಯದ ಶಿಖರದ ಅವಶೇಷಗಳು ಸಂಪೂರ್ಣವಾಗಿ ಹಾಳಾಗಿ ಹೋಗಿವೆ.

ದೇವಾಲಯದ ಪ್ರಾಕಾರದಲ್ಲಿ ಮೂರ್ತಿ ಇಲ್ಲದ ಒಂದು ಗರ್ಭಗೃಹವಿದೆ. ಇದು ಈಶ್ವರನ ದೇವಾಲಯದ ಬಲಬದಿಯಲ್ಲಿದೆ. ಗರ್ಭಗೃಹದ ದಕ್ಷಿಣಭಾಗದಲ್ಲಿದೆ. ಇದರ ಒಳಗಡೆಯಲ್ಲಿ ಯಾವುದೇ ಮೂರ್ತಿ ಇರುವುದಿಲ್ಲ. ಈಗ ಈ ದೇವಾಲಯದ ಸಂಕೀರ್ಣವು ಅವಸಾನದ ಅಂಚಿನಲ್ಲಿದೆ.

## ೧೦. ಬೆಳ್ಳೂರಿನ(ನಾಗಮಂಗಲ ತಾಲ್ಲೂಕು)ವೀರಭದ್ರ ದೇವಾಲಯ

ಮಂಡ್ಯ ಜಿಲ್ಲಾ ನಾಗಮಂಗಲ ತಾಲೂಕಿನ ಪುಟ್ಟಗ್ರಾಮ ಬೆಳ್ಳೂರು ನಾಗಮಂಗಲಕ್ಕೆ ಹತ್ತು ಮೈಲು ದೂರದಲ್ಲಿ ಇದೆ. ಬೆಳ್ಳೂರಿಗೆ ಉದ್ಭವನರಸಿಂಹಪುರ ಎಂಬ ಹೆಸರಿತ್ತೆಂದು ಇಲ್ಲಿನ ಶಾಸನದಿಂದ ತಿಳಿದು ಬರುತ್ತದೆ. ಈ ಗ್ರಾಮದಲ್ಲಿ

೧. ಮಾಧವರಾಯ ದೇವಸ್ಥಾನ

೨. ಸಿಂಗೇಶ್ವರ ದೇವಸ್ಥಾನ

೩. ವಿಮಲನಾಥ ಬಸದಿ

೪. ವೀರಭದ್ರ ದೇವಸ್ಥಾನ

ಎಂಬ ದೇವಸ್ಥಾನಗಳಿವೆ. ಶಾಸನಗಳು ತಿಳಿಸುವಂತೆ ಇದು ವೈಷ್ಣವ ಸ್ಥಳವಾದರೂ, ಇಲ್ಲಿ ಸಿಂಗೇಶ್ವರ, ವೀರಭದ್ರ ದೇವಸ್ಥಾನವು ಶೈವಧರ್ಮ ಅಸ್ಥಿತ್ವವನ್ನು ಹೇಳುತ್ತವೆ. ವಿಮಲನಾಥ ಬಸದಿಯ ಜೈನ ಧರ್ಮೀಯರು ಇಲ್ಲಿ ವಾಸಿಸುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ಸರ್ವಧರ್ಮಗಳ ತವರೂರಾದ ಬೆಳ್ಳೂರು ವಿಜಯನಗರದ ರಾಜಧರ್ಮಕ್ಕೆ ಒಂದು ಉತ್ತಮ ಉದಾಹರಣೆಯಾಗಬಲ್ಲ ಕೇಂದ್ರವಾಗಿತ್ತು. ಬೆಳ್ಳೂರಿನ ವೀರಭದ್ರ ದೇವಸ್ಥಾಸನವು ವಿಜಯನಗರ ಕಾಲದಲ್ಲಿ ನಿರ್ಮಾಣವಾದ ದೇವಸ್ಥಾನವಾಗಿದೆ.[೧೨] ಸರಳವಾದ ಶೈಲಿಯಲ್ಲಿ ರಚನೆಗೊಂಡಿದೆ.

ದೇವಸ್ಥಾನದ ಮುಖಮಂಟಪವು ನಾಲ್ಕು ಕಂಬಗಳನ್ನು ಹೊಂದಿರುವುದು. ಈ ಕಂಬಗಳು ಯಾವುದೇ ಕೆತ್ತನೆಗಳಿಲ್ಲದೆ ಒರಟುಗಲ್ಲಿನ ಕಂಬಗಳಾಗಿವೆ. ಮುಖಮಂಟಪದ ನಂತರ ನವರಂಗ ಸಿಗುತ್ತದೆ. ನವರಂಗವು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಾಣವಾಗಿದೆ. ಈ ನಾಲ್ಕು ಕಂಬಗಳು ಸಹ ಒರಟುಕಲ್ಲಿನ ಕಂಬಗಳು ಇದರ ಮೇಲೆ ಬೋದಿಗೆಗಳನ್ನು ಇಟ್ಟು ಮೇಲೆ ತೊಲೆಯನ್ನು ಹಾಕಲಾಗಿದೆ. ಈ ನವರಂಗದಲ್ಲೇ ಗರ್ಭಗೃಹಕ್ಕೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ(ಚಿತ್ರ ೧೯).

ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ವೀರಭದ್ರನ ಶಿಲ್ಪವನ್ನು ಕಾಣಬಹುದು ವೀರಭದ್ರನು ನಾಲ್ಕುಕೈಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ಕತ್ತಿ ಮತ್ತು ಎಡಗೈಯಲ್ಲಿ ಡಾಲುಗಳು ಪ್ರಧಾನ ಆಯುಧಗಳಾಗಿವೆ. ಈ ಮೂರ್ತಿಯನ್ನು ಒಬ್ಬ ಯೋಧನಂತೆ ಕೆತ್ತಲಾಗಿದೆ. ವೀರಭದ್ರನ ಬಲಭಾಗದಲ್ಲಿ ದಕ್ಷಯಜ್ಞನ ಸಣ್ಣಮೂರ್ತಿಯನ್ನು ಕೆತ್ತಲಾಗಿದೆ. ಇದೇ ರೀತಿಯ ಮೂರ್ತಿಯನ್ನು ಬಳ್ಳಾರಿ ಜಿಲ್ಲಾ




೧). ಗರ್ಭ ಗೃಹ ೨). ಅಂತರಾಳ ೩). ನವರಂಗ ೪). ಮುಖ ಮಂಟಪ

೧೦). ಬೆಳ್ಳೂರಿನ ವೀರಭದ್ರ ದೇವಸ್ಥಾನ ತಲನಕ್ಷೆ.




೧). ಗರ್ಭ ಗೃಹ ೨). ಅಂತರಾಳ ೩). ನವರಂಗ ೪). ಮುಖ ಮಂಟಪ

೧೦). ಬೆಳ್ಳೂರಿನ ವೀರಭದ್ರ ದೇವಸ್ಥಾನ ತಲನಕ್ಷೆ.

ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿಯಲ್ಲಿ ಕಾಣಬಹುದು. ಕೋಗಳಿಯ ವೀರಭದ್ರನ ದೇವಸ್ಥಾನವು ಕೂಡ ವಿಜಯನಗರ ಕಾಲದಲ್ಲೇ ರಚನೆಗೊಂಡಿರುವ ದೇವಸ್ಥಾನವಾಗಿದೆ. ಹೀಗೆ ವಿಜಯನಗರ ಕಾಲದಲ್ಲಿ ಐತಿಹಾಸಿಕವಾಗಿದ್ದ ಬೆಳ್ಳೂರು ಒಂದು ಸರಳಶೈಲಿಯ ವೀರಭದ್ರನ ದೇವಸ್ಥಾನವನ್ನು ಹೊಂದಿವೆ.

## ೧೧. ಮುಳುಬಾಗಿಲಿನ ವಿದ್ಯಾಶಂಕರ ದೇವಸ್ಥಾನ

ವಿದ್ಯಾಶಂಕರ ದೇವಸ್ಥಾನವು ಮುಳುಬಾಗಿಲಿನಲ್ಲಿದೆ. ಮುಳುಬಾಗಿಲು ಐತಿಹಾಸಿಕ ಮಹತ್ವವುಳ್ಳ ಸ್ಥಳವಾಗಿದೆ. ಮುಳುಬಾಗಿಲ ಮುತ್ಯಾಲ ಪೇಟೆಯಲ್ಲಿ ವಿದ್ಯಾಶಂಕರ ದೇವಸ್ಥಾನವಿದೆ. ದೇವಸ್ಥಾನದ ಎದುರಿನಲ್ಲಿ ಶಂಖತೀರ್ಥ ಎಂಬ ಪುಷ್ಕರಣಿ ಇದೆ. ತಿರುಪತಿಗೆ ಹೋಗುವ ಪೂರ್ವದಲ್ಲಿ ಈ ಪಟ್ಟಣ ಸಿಗುವುದರಿಂದ ಈ ಪಟ್ಟಣಕ್ಕೆ ಮೂಡಣದ ಬಾಗಿಲು ಎಂದು ಹೆಸರಾಯಿತು. ಕಾಲಾನಂತರದಲ್ಲಿ ಈ ಪಟ್ಟಣವು ಮುಳುಬಾಗಿಲು ಎಂಬ ಹೆಸರಿನಿಂದ ಪ್ರಖ್ಯಾತ ಪಟ್ಟಣವಾಗಿದೆ. ವಿಜಯನಗರ ಕಾಲದಲ್ಲಿ ಮುಳುವಾಯ ರಾಜ್ಯ ಎಂಬ ಪ್ರಾಂತ್ಯದ ರಾಜಧಾನಿಯಾಗಿ ಇದು ಮೆರೆದಿತ್ತು. ಕೋಲಾರ ಜಿಲ್ಲೆಯ ಮುಳುಬಾಗಿಲು ತಾಲೂಕು ಮತ್ತು ಬೆಂಗಳೂರು ಜಿಲ್ಲೆಯ ಹೊಸಕೋಟೆ ಮತ್ತು ಆನೇಕಲ್ಲು ತಾಲೂಕುಗಳು ಈ ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿದ್ದವು.[೧೩]

ಮುಳುಬಾಗಿಲಿನ ಈ ವಿದ್ಯಾಶಂಕರ ದೇವಾಲಯವು ಪೂರ್ವಾಭಿಮುಖವಾಗಿರುವ ದೇವಸ್ಥಾನ. ವಿಜಯನಗರ ವಾಸ್ತುಶೈಲಿಯಲ್ಲಿ ನಿರ್ಮಾಣಗೊಂಡಿದೆ.[೧೪] ಈ ದೇವಸ್ಥಾನವನ್ನು ಹಳೆಯ ಅವಶೇಷಗಳನ್ನು ಉಳಿಸಿಕೊಂಡು, ಜೀರ್ಣೋದ್ಧಾರ ಮಾಡಿದ್ದಾರೆ. ಪೂರ್ವಾಭಿಮುಖವಾಗಿರುವ ಗರ್ಭಗೃಹಕ್ಕೆ ಅಂತರಾಳ ಮತ್ತು ನವರಂಗಗಳು ಸೇರಿಕೊಂಡಿವೆ. ನವರಂಗದಲ್ಲಿ ದಕ್ಷಿಣದಲ್ಲಿನ ದ್ವಾರದ ಮುಖೇನ ಪ್ರವೇಶಿಸಬೇಕು. ದಕ್ಷಿಣದ ಈ ಪ್ರವೇಶ ದ್ವಾರಕ್ಕೆ ಮುಖಮಂಟಪವನ್ನು ರಚಿಸಲಾಗಿದೆ. ಈ ಮುಖ ಮಂಟಪವು ಮೊದಲಿಗೆ ತೆರೆದ ಮುಖಮಂಟಪವಾಗಿದೆ. ಈಗ ಮುಖಮಂಟಪದ ಸುತ್ತಲೂ ಗೋಡೆಯನ್ನು ನಿರ್ಮಿಸಿ ಪಶ್ಚಿಮದಿಂದ ಪ್ರವೇಶಿಸಲು ದ್ವಾರವನ್ನು ನಿರ್ಮಿಸಲಾಗಿದೆ(ಚಿತ್ರ ೨೦).

ಮುಖಮಂಟಪವು ಎಂಟು ಕಂಬಗಳನ್ನು ಒಳಗೊಂಡಿದೆ. ಮುಖಮಂಟಪದ ಕಂಬಗಳು ಸರಳ ಕಂಬಗಳಾಗಿವೆ. ಕಂಬಗಳಲ್ಲಿ ಯಾವುದೇ ತೆರನಾದ ಶಿಲ್ಪಗಳನ್ನು ಕೆತ್ತಲಾಗಿಲ್ಲ. ಈ ಮುಖಮಂಟಪದಿಂದ ನವರಂಗಕ್ಕೆ ಹೋಗುವ ಬಾಗಿಲ ಎಡಬದಿಯಲ್ಲಿ ವಿಜಯನಗರದ ಅರಸು ಬುಕ್ಕರಾಯನ ಶಾಸನವಿದೆ. ಶಾಸನದ ಕಾಲ ಕ್ರಿ.ಶ.೧೩೮೯. ಬುಕ್ಕರಾಯನು ವಿದ್ಯಾಶಂಕರ ದೇವಾಲಯಕ್ಕೆ ದತ್ತಿಬಿಟ್ಟ ವಿಷಯವನ್ನು ನಿರೂಪಿಸುತ್ತದೆ. ಈ ಸಮಯದಲ್ಲಿ ಕ್ರಿಯಾಶಕ್ತಿ, ಗುರುಗಳು ರಾಜಗುರುಗಳಾಗಿದ್ದರು ಎಂಬ ವಿಷಯವನ್ನು ಶಾಸನವು ತಿಳಿಸುತ್ತದೆ.

ಮುಖಮಂಟಪದಿಂದ ನವರಂಗಕ್ಕೆ ಪ್ರವೇಶವಿದೆ. ನವರಂಗವು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ನವರಂಗದ ಗರ್ಭಗೃಹದ ಬಲ ಬದಿಯ ಕಂಬದ ಮೇಲೆ ಒಬ್ಬ ಶಿವಭಕ್ತನ ಶಿಲ್ಪವಿದೆ.



೧). ಗರ್ಭ ಗೃಹ ೨). ಅಂತರಾಳ ೩). ನವರಂಗ ೪). ಮುಖ ಮಂಟಪ

೧೧). ಮುಳು ಬಾಗಿಲಿನ ವಿದ್ಯಾಶಂಕರ ದೇವಸ್ಥಾನ ತಲನಕ್ಷೆ.

ಇದು ದೇವಾಲಯದ ನಿರ್ಮಾಪಕನ ಚಿತ್ರವೆಂದು ಅರ್ಚಕರು ಹೇಳುತ್ತಾರೆ. ಇದೇ ರೀತಿಯ ಶಿಲ್ಪ ವಿರುಪಾಕ್ಷಿಯ ಉತ್ಸವ ಮಂಟಪದಲ್ಲೂ ಕಂಡುಬರುತ್ತದೆ. ನವರಂಗಕ್ಕೆ ದಕ್ಷಿಣದಿಂದ ಪ್ರವೇಶವಿದೆ. ಗರ್ಭಗೃಹ ಪೂರ್ವಕ್ಕಿದೆ. ದೇವಾಲಯದ ನವರಂಗದ ಪೂರ್ವದಲ್ಲಿ ಜಾಲಾಂದ್ರವನ್ನು ನಿರ್ಮಿಸಲಾಗಿದೆ. ಇದು ದೇವಾಲಯವನ್ನು ಬಾಗಿಲು ಹಾಕಿದ ಸಮಯದಲ್ಲಿ ಭಕ್ತರು ಈ ಜಾಲಾಂದ್ರದ ಮುಖೇನ ದೇವರ ದರ್ಶನ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಇದೇ ದೇವಸ್ಥಾನದ ಹಿಂದೆ ಅಮ್ಮನವರ ಸನ್ನಿಧಿ ಇದೆ. ಗರ್ಭಗೃಹದಲ್ಲೂ ನವರಂಗದ ಜಾಲಾಂದ್ರಕ್ಕೆ ಸಮನಾಗಿ ಒಂದು ಜಾಲಾಂದ್ರವಿದೆ. ನವರಂಗದ ಜಾಲಾಂದ್ರ ಮುಖಾಂತರ ಒಂದೇ ಸಲಕ್ಕೆ ಸೋಮೇಶ್ವರನನ್ನೂ ಅಮ್ಮನವರನ್ನು ಏಕಕಾಲದಲ್ಲಿ ದರ್ಶನ ಮಾಡಲು ಅವಕಾಶ ಕಲ್ಪಿಸಿರುವುದು ಈ ದೇವಾಲಯ ವಿಶೇಷವಾಗಿದೆ. ನವರಂಗದಿಂದ ಅಂತರಾಳಕ್ಕೆ ಪ್ರವೇಶಿಸುವ ಬಾಗಿಲ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ವಿಗ್ರಹವನ್ನು ಕೆತ್ತಲಾಗಿದೆ. ನವರಂಗವು ಚಚ್ಚೌಕಾಕಾರದಲ್ಲಿದೆ. ಅಂತರಾಳವು ನವರಂಗಕ್ಕಿಂತ ಚಿಕ್ಕದಾಗಿದೆ. ಅಂತರಾಳ ಮತ್ತು ಗರ್ಭಗೃಹದಲ್ಲಿ ಟೈಲ್ಸ್ ಹಾಕಲಾಗಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಶಿವಲಿಂಗವಿದೆ. ಇದಕ್ಕೆ ಹಿತ್ತಾಳೆಯ ಮುಖವಾಡ ಹಾಕಲಾಗಿದೆ.

ಈ ಶಿವಲಿಂಗದ ಮೇಲೆಯೇ ಅಮ್ಮನವರ ದರ್ಶನ ಮಾಡಲು ಅನುಕೂಲವಾಗುವಂತೆ ಜಾಲಾಂದ್ರವನ್ನು ನಿರ್ಮಿಸಲಾಗಿದೆ. ಈ ವಿದ್ಯಾಶಂಕರ ದೇವಾಲಯದ ಹಿಂದೆ, ಅಮ್ಮನವರ ಸನ್ನಿಧಿ ಇರುವುದೊಂದು ವಿಶೇಷ. ದೇವಾಲಯದ ಹೊರಗಡೆಯಲ್ಲಿ ಅಧಿಷ್ಠಾನ ಪೂರ್ಣವಾಗಿ ನೆಲದಲ್ಲಿ ಮುಚ್ಚಿ ಹೋಗಿದೆ. ಭಿತ್ತಿಯನ್ನು ಸಂಪೂರ್ಣವಾಗಿ ಹೊಸದಾಗಿ ನಿರ್ಮಿಸಲಾಗಿದೆ. ಗರ್ಭಗೃಹದ ಮೇಲಿನ ಶಿಖರವನ್ನು ಕೂಡಾ ಹೊಸದಾಗಿ ನಿರ್ಮಿಸಲಾಗಿದೆ.

## ಅಮ್ಮನವರ ಸನ್ನಿಧಿ

ವಿದ್ಯಾಶಂಕರ ದೇವಸ್ಥಾನದ ಹಿಂದೆ ಅಮ್ಮನವರ ಸನ್ನಿಧಿ ಇದೆ. ದೇವಸ್ಥಾನವನ್ನು ಪ್ರತ್ಯೇಕವಾಗಿ ನಿರ್ಮಿಸಲಾಗಿದೆ. ಪ್ರಧಾನ ದೇವಸ್ಥಾನದ ಉತ್ತರದಲ್ಲಿ ಅಮ್ಮನವರ ಸನ್ನಿಧಿ ಇರುವುದು ವಾಡಿಕೆ. ವಿದ್ಯಾಶಂಕರ ದೇವಸ್ಥಾನದಲ್ಲಿ ವಿದ್ಯಾಶಂಕರ ದೇವಸ್ಥಾನದ ಹಿಂದೆ ಅಮ್ಮನವರ ಸನ್ನಿಧಿ ಇರುವುದೊಂದು ವಿಶೇಷವಾಗಿದೆ. ಅಮ್ಮನವರ ದೇವಸ್ಥಾನವು ನವರಂಗ, ಅಂತರಾಳ ಮತ್ತು ಗರ್ಭಗೃಹಗಳನ್ನು ಒಳಗೊಂಡಿದೆ. ನವರಂಗಕ್ಕೆ ದಕ್ಷಿಣ ಭಾಗದಿಂದ ಪ್ರವೇಶ ದ್ವಾರವನ್ನು ನಿರ್ಮಿಸಲಾಗಿದೆ. ನವರಂಗವು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ನವರಂಗದ ಪೂರ್ವದ ಭಿತ್ತಿಯಲ್ಲಿ ಜಾಲಾಂದ್ರವನ್ನು ಬಿಡಲಾಗಿದೆ. ಈ ರಂದ್ರವು ವಿದ್ಯಾಶಂಕರ ದೇವಾಲಯದ ಗರ್ಭಗೃಹದ ಜಾಲಾಂದ್ರ ಮತ್ತು ಅದೇ ದೇವಾಲಯದ ನವರಂಗ ಜಾಲಾಂದ್ರವು ಒಂದೇ ಸರಳ ರೇಖೆಯಲ್ಲಿ ಬರುವಂತೆ ರಚಿಸಲಾಗಿದೆ. ವಿದ್ಯಾಶಂಕರ ದೇವಾಲಯದ ನವರಂಗದ ಜಾಲಾಂದ್ರದಿಂದ ನೋಡಿದರೆ ಏಕಕಾಲದಲ್ಲಿ ವಿದ್ಯಾಶಂಕರ

ಶಿವಲಿಂಗ ಮತ್ತು ಅಮ್ಮನವರನ್ನು ದರ್ಶನ ಮಾಡಬಹುದು. ಅಂತರಾಳವು ನವರಂಗಕ್ಕಿಂತ ಚಿಕ್ಕದಾಗಿದೆ. ಗರ್ಭಗೃಹವು ಚಚ್ಚೌಕಾಕಾರದಲ್ಲಿದೆ. ಗರ್ಭಗೃಹದಲ್ಲಿ ಅಮ್ಮನವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಹೊರಭಿತ್ತಿಯನ್ನು ಎಲ್ಲಾ ಹೊಸದಾಗಿ ನಿರ್ಮಿಸಿದ್ದಾರೆ. ಶಿಖರವು ಸಹ ಹೊಸದಾಗಿ ನಿರ್ಮಾಣಗೊಂಡಿದೆ. ಈ ದೇವಸ್ಥಾನದ ಬಾಗಿಲ ಎದುರಿನಲ್ಲಿ ಒಂದು ಬೃಂದಾವನವಿದೆ.

**ಶಂಕುತೀರ್ಥ**

ವಿದ್ಯಾಶಂಕರ ದೇವಾಸ್ಥಾನದ ದಕ್ಷಿಣದಲ್ಲಿ ವಿಶಾಲವಾದ ಒಂದು ಪುಷ್ಕರಣಿ ಇದೆ. ಪುಷ್ಕರಣಿಗೆ ಶಂಕುತೀರ್ಥವೆಂದು ಹೆಸರು. ಪುಷ್ಕರಣಿಯ ಮಧ್ಯದಲ್ಲಿ ಶಂಖುವಿನ ಆಕಾರದ ಶಿಲೆ ಇದೆ. ಈ ಶಂಖುವಿನ ಆಕೃತಿಯ ಶಿಲೆಯಿಂದಲೇ ಪುಷ್ಕರಣಿಗೆ ಶಂಕುತೀರ್ಥವೆಂದು ಹೆಸರು ಬಂದಿದೆ. ಈ ಪುಷ್ಕರಣಿಯ ಹಿಂದೆ ಮೂರು ಬೃಂದಾವನಗಳಿವೆ. ಅಮ್ಮನವರ ಸನ್ನಿಧಿಯ ಮುಂದೆ ಒಂದು ಬೃಂದಾವನವಿದೆ. ಹೀಗೆ ಒಟ್ಟು ನಾಲ್ಕು ಬೃಂದಾವನಗಳು ವಿದ್ಯಾಶಂಕರ ದೇವಸ್ಥಾನದ ಪರಿಸರದಲ್ಲಿವೆ. ಕೃಷ್ಣಾನಂದ ಸ್ವಾಮಿಗಳವರು ಉತ್ತರ ಭಾರತದ ಗುಜರಾತದ ದ್ವಾರಪೀಠದಿಂದ ಕ್ರಿ.ಶ.೧೪೦೦ರಲ್ಲಿ ಯವನರ ದಾಳಿಗೆ ಬೇಸತ್ತು, ಸ್ವಾಮಿಗಳು ದಕ್ಷಿಣದ ಕಡೆಗೆ ಬಂದರು. ದಕ್ಷಿಣ ಭಾರತದ ವಿಜಯನಗರದ ಅರಸರು ಸನ್ಮಾನಿಸಿ ಮುಳುಬಾಗಿಲಿನ ಈ ಪ್ರಾಂತ್ಯದಲ್ಲಿ ನೆಲೆಸಿದರು.[೨೫] ಆ ಪೀಠ ಪರಂಪರೆಯ ಬೃಂದಾವನಗಳು ವಿದ್ಯಾಶಂಕರ ದೇವಸ್ಥಾನದ ಸನ್ನಿಧಿಯಲ್ಲಿವೆ.

## ೧೨. ಮುಳುಬಾಗಿಲು ಸೋಮೇಶ್ವರ ದೇವಸ್ಥಾನ

ಕೋಲಾರ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ ಮುಳುಬಾಗಿಲು. ಶಾಸನಗಳು ಈ ಊರನ್ನು ''ಮುಳುವಾಯಿ'' ಎಂದು ಹೆಸರನ್ನು ಕರೆದಿವೆ. ತಿರುಪತಿಗೆ ಹೋಗುವ ಮಾರ್ಗದಲ್ಲಿ ಪೂರ್ವದಿಕ್ಕಿನಲ್ಲಿ ಈ ಪಟ್ಟಣವು ಸಿಗುವುದರಿಂದ ಇದಕ್ಕೆ ಮೂಡಲಬಾಗಿಲು ಎಂದು ಹೆಸರಿತ್ತಂತೆ. ಇದೇ ಮುಂದೆ ಮುಳುಬಾಗಿಲು ಆಯಿತು ಎಂಬುದು ಐತಿಹ್ಯ.

ಸೋಮೇಶ್ವರ ದೇವಾಲಯವು ಮುಳುಬಾಗಿಲಿನ ಮುಖ್ಯ ದೇವಾಲಯಗಳಲ್ಲೊಂದು. ಮುಳುಬಾಗಿಲು ಪುರಾತನ ಕಾಲದ ಅವಶೇಷಗಳನ್ನು ಹೊಂದಿರುವ ಸ್ಥಳ. ವಿಜಯನಗರ ಕಾಲದಲ್ಲಿ ಒಂದು ವಿಭಾಗದ ರಾಜಧಾನಿಯಾಗಿತ್ತು. ಸಂಗಮರ ಐವರು ಸಹೋದರರಲ್ಲಿ ಮುದ್ದಪ್ಪನ ರಾಜಧಾನಿಯಾಗಿತ್ತು. ಮುಂದೆ ಎರಡನೆಯ ದೇವರಾಯನ ಕಾಲದಲ್ಲಿ ಲಕ್ಕಣ್ಣ ದಂಡೇಶನ ಕಾರ್ಯಕ್ಷೇತ್ರವಾಗಿತ್ತು. ಲಕ್ಕಣ್ಣದಂಡೇಶನು ಶೈವಸಂಸ್ಕೃತಿಯ ಉಳಿವಿಗಾಗಿ ಅವಿರತ ಶ್ರಮಿಸಿದ ಪ್ರಮುಖ ಶರಣನಾಗಿದ್ದಾನೆ. ಈ ಲಕ್ಕಣನು ಶ್ರೀಲಂಕೆಯವರೆಗೆ ದಂಡಯಾತ್ರೆ ಕೈಗೊಂಡು ಅಲ್ಲಿಯವರೆಗೂ ವಿಜಯನಗರ ಸಾಮ್ರಾಜ್ಯದ ಕೀರ್ತಿ ಪತಾಕೆಯನ್ನು ಹಾರಿಸಿದನು. ವಿಜಯನಗರ ವಾಸ್ತುಶೈಲಿಯನ್ನು ಹೊಂದಿದ ಆಂಜನೇಯ, ವಿಠಲ,













೧). ಗರ್ಭ ಗೃಹ ೨). ಅಂತರಾಳ ೩). ಅರ್ಧ ಮಂಟಪ ೪). ನವರಂಗ ೫). ನಂದಿ ಮಂಟಪ ೬).ಬಲಿ ಪೀಠ

೧೨). ಮುಳುಬಾಗಿಲಿನ ಸೋಮೇಶ್ವರ ದೇವಸ್ಥಾನ ತಲನಕ್ಷೆ.

ವೀರಭದ್ರ ಮುಂತಾದ ದೇವಾಲಯಗಳಿವೆ. ಕೃಷ್ಣ ಮಠವಿದೆ. ವೀರಶೈವ ಮಠ, ಕಟ್ಟಡಗಳನ್ನು ಕಾಣಬಹುದು.[೧೬] ಬೆಟ್ಟದ ಮೇಲೆ, ಉಂಚಾಳಮ್ಮ ದೇವಸ್ಥಾನವನ್ನು ಕಾಣಬಹುದು. ಉಂಚಾಳಮ್ಮನ ದೇವಸ್ಥಾನದ ಹಿಂದೆ ಬಂಡೆಯಲ್ಲಿ ವಿಜಯನಗರ ಅರಸರು ದೇವಿಗೆ ನೀಡಿದ ದಾನಶಾಸನವನ್ನು ಹೆಬ್ಬಂಡೆಯಲ್ಲಿ ಕೆತ್ತಲಾಗಿದೆ. ಹೀಗೆ ಇಡೀ ಮುಳುಬಾಗಿಲು ಐತಿಹಾಸಿಕ ಮಹತ್ವವುಳ್ಳ ಪ್ರದೇಶವಾಗಿದೆ.

ಸೋಮೇಶ್ವರ ದೇವಸ್ಥಾನವು ಕೋಲಾರದಿಂದ ಹೋಗುವ ಹೆದ್ದಾರಿಯ ಪಕ್ಕದಲ್ಲಿ ಊರನ್ನು ಪ್ರವೇಶಿಸುವ ಹಾದಿಯಲ್ಲಿಯೇ ಕಾಣ ಸಿಗುತ್ತದೆ. ದೇವಸ್ಥಾನವು ಪ್ರಾಕಾರವನ್ನು ಹೊಂದಿದೆ. ದೇವಸ್ಥಾನವನ್ನು ಪ್ರವೇಶಿಸುವ ದ್ವಾರಗೋಪುರವು ಬಿದ್ದು ಹೋಗಿದೆ. ಅದರ ಅವಶೇಷಗಳನ್ನು ಉಳಿಸಿಕೊಂಡು ಹೊಸದಾದ ಮಂಟಪ ರಚಿಸಿದ್ದಾರೆ. ಈ ಪ್ರಾಕಾರದ ಹೊರಗಡೆಯಲ್ಲಿ ಉತ್ಸವಮಂಟಪವಿದೆ. ಈ ಮಂಟಪದ ಅದಿಷ್ಠಾನದ ಕಟ್ಟಡವೇ ಹತ್ತು ಅಡಿ ಎತ್ತರವಾಗಿದೆ. ಮೇಲೆ ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ಮಂಟಪದ ಮೇಲೆ ಶಿಖರವನ್ನು ಕಾಣಬಹುದು.

ಒಳಗಡೆ ಕಾಲಿರಿಸಿದೊಡನೆಯೇ ಕಂಡುಬರುವುದು ದೇವಸ್ಥಾನದ ಎಡಪಾರ್ಶ್ವದಲ್ಲಿ ನಿರ್ಮಿಸಲಾಗಿರುವ ದೊಡ್ಡದಾದ ಪುಷ್ಕರಣಿ. ಪುಷ್ಕರಣಿಗೆ "ವೃಷಭ ತೀರ್ಥ"ವೆಂದು ಹೆಸರು. ವರ್ಷದ ಎಲ್ಲಾ ಕಾಲದಲ್ಲಿ ನೀರು ನಿಂತಿರುತ್ತವೆ. ವೃಷಭತೀರ್ಥದ ಮುಂದೆ ಸಾಲಾಗಿ ನಾಗರಕಲ್ಲುಗಳನ್ನು ಪ್ರತಿಷ್ಠಾಪಿಸಲಾಗಿದೆ. ದೇವಸ್ಥಾನದ ಎದುರಿನಲ್ಲಿ ಪ್ರಾಕಾರದ ದ್ವಾರದಿಂದ ಪ್ರವೇಶಿಸಿದರೆ ಸಿಗುವುದೇ ದೀಪಸ್ತಂಭ. ಇದು ಇಪ್ಪತ್ತು ಅಡಿ ಉದ್ದವಾಗಿದೆ. ದೀಪಸ್ತಂಭದ ಮುಂದೆ ಧ್ವಜಸ್ತಂಭವಿದೆ. ಅದರ ಮುಂದೆ ನಂದಿ ಮಂಟಪವಿದೆ. ನಂದಿ ಮಂಟಪವು ನಾಲ್ಕು ಸ್ತಂಭಗಳ ಸಹಾಯದಿಂದ ನಿರ್ಮಿಸಲಾಗಿದೆ. ನಂದಿ ಮಂಟಪದ ಮೇಲೆ ಶಿಖರವಿದೆ. ಶಿಖರವು ಚೌಕಾಕಾರವನ್ನು ಹೊಂದಿದೆ. ಶಿಖರದಲ್ಲಿ ಎಂಟು ನಂದಿಗಳನ್ನು ಕಾಣಬಹುದಾಗಿದೆ. ಈ ನಂದಿ ಮಂಟಪದ ಮುಂದೆ ನಾಲ್ಕು ಕಂಬಗಳ ಮುಖಮಂಟಪವಿದೆ. ಈ ಮಂಟಪದಲ್ಲಿನ ನಂದಿಯು ಎಂಟು ಅಡಿ ಎತ್ತರವಾಗಿದೆ(ಚಿತ್ರ ೨೧).

ದೇವಾಲಯದ ಮುಖಮಂಟಪವು ನಾಲ್ಕು ಪೂರ್ಣ ಕಂಬಗಳನ್ನು ನಾಲ್ಕು ಗೋಡೆ ಕಂಬಗಳನ್ನು ಒಳಗೊಂಡಿದೆ. ಪೂರ್ಣಕಂಬಗಳು ವಿಜಯನಗರ ವಾಸ್ತುಶೈಲಿಯಲ್ಲಿವೆ. ಈ ಕಂಬಗಳಲ್ಲಿ ಯಾಳಿ, ಶಿವಭಕ್ತನ ಚಿತ್ರ, ಆಂಜನೇಯ ಮೂರ್ತಿ, ಶಿವಲಿಂಗಗಳನ್ನು ಕೆತ್ತಲಾಗಿದೆ. ಕಂಬಗಳು ಮೂರು ಚೌಕಾಕಾರಗಳನ್ನು ಹೊಂದಿದ್ದು, ನಾಲ್ಕು ಮುಖಗಳನ್ನು ಒಳಗೊಂಡಿವೆ.

ಮುಖ ಮಂಟಪದ ನಂತರ ದೊರೆಯುವುದೇ ನವರಂಗ. ನವರಂಗವು ವಿಶಾಲವಾಗಿದ್ದು, ನಾಲ್ಕು ಪೂರ್ಣ ಕಂಬಗಳ ಸಹಾಯದಿಂದ ನಿಂತುಕೊಂಡಿದೆ. ಹನ್ನೆರೆಡು ಗೋಡೆಕಂಬಗಳ ಸಹಾಯದಿಂದ ನಿಂತುಕೊಂಡಿದೆ. ಹನ್ನೆರಡು ಗೋಡೆಕಂಬಗಳನ್ನು ನವರಂಗದಲ್ಲಿ ಕಾಣಬಹುದು. ಹೀಗೆ ಒಟ್ಟು ಹದಿನಾರು

ಕಂಬಗಳನ್ನು ಹೊಂದಿದ ಒಂಬತ್ತು ಅಂಕಣಕ್ಕೆ ನವರಂಗವೆಂದು ಹೆಸರು. ನವರಂಗಕ್ಕೆ ದಕ್ಷಿಣದಲ್ಲಿ ಒಂದು ಹಾಗೂ ಗರ್ಭಗೃಹದ ಎದುರಿನಲ್ಲಿ ಒಂದು ಹೀಗೆ ಎರಡು ಕಡೆಯ ಪ್ರವೇಶ ದ್ವಾರಗಳಿವೆ. ಮಹಾರಂಗಮಂಟಪದ ದಕ್ಷಿಣ ಪಾರ್ಶ್ವದಲ್ಲಿ ಗಣೇಶ, ಕಾರ್ತಿಕೇಯರ ವಿಗ್ರಹ ಮತ್ತು ಶಿವಲಿಂಗಗಳಿವೆ. ಗರ್ಭಗೃಹದ ದಕ್ಷಿಣ ಪಾರ್ಶ್ವದಲ್ಲಿ ಅಮ್ಮನವರ ಸನ್ನಿಧಿ ಇದೆ. ನವರಂಗದಿಂದ, ಮುಖಮಂಟಪಕ್ಕೆ ಪ್ರವೇಶಿಸಲು ಇರುವ ದ್ವಾರಕ್ಕೆ ಹಿತ್ತಾಳೆಯ ಕವಚವನ್ನು ತೊಡಿಸಲಾಗಿದೆ. ಹಿತ್ತಾಳೆ ಕವಚದಲ್ಲಿ ಲತಾ ಬಳ್ಳಿಯನ್ನು ಬಿಡಿಸಲಾಗಿದೆ. ಈ ಬಾಗಿಲನ್ನು ದಾಟಿದರೆ, ಒಳಗಡೆ ಸಿಗುವುದೇ, ಮುಖಮಂಟಪ. ಮುಖಮಂಟಪವು ನಾಲ್ಕು ಕಂಬಗಳನ್ನು ಹೊಂದಿದೆ. ಒಂದೊಂದು ಕಂಬಗಳು ಚೌಕಾಕಾರ ಹೊಂದಿದೆ. ಕಂಬವು ಮೂರು ಭಾಗಗಳನ್ನು ಹೊಂದಿವೆ. ಈ ಕಂಬಗಳಲ್ಲಿ ಶಿವಭಕ್ತ, ಆಕಳು, ಹಾಲನ್ನು ದೇವತೆಗೆ ಅರ್ಪಿಸುವ ಚಿತ್ರ, ಶಕ್ತಿ ಗಜಾಸುರ ನಟರಾಜ, ಶಿವನನ್ನು ಹೊತ್ತು ನಿಂತಿರುವ ಆಂಜನೇಯ, ವಿಷ್ಣು ಶಿವಪಾರ್ವತಿಯರು ಶಿವಭಕ್ತ, ಭಸ್ಮಾಸುರು, ಡೋಲು ನುಡಿಸುವಾತ, ನಂದಿಯ ವಾಹನರೂಢ ಶಿವ, ಬುದ್ದಿಗಣೇಶ, ಬಾಲಕೃಷ್ಣ, ವೀರಭದ್ರ ಮುಂತಾದ ಚಿತ್ರಗಳನ್ನು ಕಾಣಬಹುದು. ದೇವಾಲಯದ ಉತ್ತರ ಪಾರ್ಶ್ವದಲ್ಲಿ ಬ್ರಾಹ್ಮೀ, ಮಹೇಶ್ವರೀ ಕೌಮಾರಿ, ವೈಷ್ಣವೀ, ವಾರಾಹಿ, ಇಂದ್ರಾಣಿ ಚಾಮುಂಡಾರೆಂಬ ಸಪ್ತ ಮಾತೃಕೆಯ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದೇ ಮುಖಮಂಟಪದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಮುಂದೆ ಅಂತರಾಳ, ಅಂತರಾಳದಲ್ಲಿ ಮುಖಮಂಟಪದಲ್ಲಿ ಗೋಡೆಗೆ ಹಾಗೂ ನೆಲಕ್ಕೆ ಅಮೃತಶಿಲೆಗಳನ್ನು ಹಾಕಲಾಗಿದೆ. ಇದು ಈಚೀನ ಬೆಳವಣಿಗೆ. ಅಂತರಾಳವು ಗರ್ಭಗೃಹಕ್ಕಿಂತ ಚಿಕ್ಕದಿದೆ. ಗರ್ಭಗೃಹದ ಬಲಭಾಗದಲ್ಲಿ ಅಂತರಾಳದಲ್ಲಿ ಒಂದು ಕೋಣೆಯನ್ನು ನಿರ್ಮಿಸಲಾಗಿದೆ. ಪೂಜೆಗೆ ಬೇಕಾಗುವ ವಸ್ತುಗಳನ್ನು ಇಲ್ಲಿ ಇಡಲು ಅವಕಾಶ ಕಲ್ಪಿಸಲಾಗಿದೆ. ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗವಿದೆ. ಶಿವಲಿಂಗವು ನೆಲಮಟ್ಟದ್ದಾಗಿದ್ದು, ಉದ್ಭವಲಿಂಗವೆಂದು ಅರ್ಚಕರು ಹೇಳುತ್ತಾರೆ. ಇಲ್ಲಿನ ಜನರ ಹೇಳಿಕೆಯಂತೆ ಇದು ಚೋಳರ ಕಾಲದ ಪ್ರತಿಷ್ಠೆಯಾಗಿದೆ. ದೇವಾಲಯವೆಲ್ಲ ವಿಜಯನಗರ ವಾಸ್ತುಶೈಲಿಯನ್ನು ಹೊಂದಿದೆ. ಗರ್ಭಗೃಹದ ನೆಲಕ್ಕೆ ಹಾಗೂ ಗೋಡೆಗೆಲ್ಲ ಅಮೃತಶಿಲೆಯನ್ನು ಹಾಕಲಾಗಿದೆ.

ದೇವಸ್ಥಾನದ ಹೊರಗೆ, ಉಪಪೀಠ ಮತ್ತು ಅಧಿಷ್ಠಾನಗಳು ಸಂಪೂರ್ಣವಾಗಿ ನೆಲದಲ್ಲಿ ಮುಚ್ಚಿಹೋಗಿವೆ. ದೇವಾಲಯದ ಭಿತ್ತಿಯು ಸರಳವಾಗಿದೆ. ದೇವಾಲಯದ ಸುತ್ತಲೂ ಎಲ್ಲಿಯೂ ಫಲಕಕುಡ್ಯಗಳು ಕಂಡುಬರುವುದಿಲ್ಲ. ನವರಂಗದ ದಕ್ಷಿಣದ ದ್ವಾರದ ಮುಂದೆ ನಾಲ್ಕು ಕಂಬಗಳ ಒಂದು ಚಿಕ್ಕಮಂಟಪವನ್ನು ರಚಿಸಲಾಗಿದೆ. ದೇವಾಲಯದ ಗರ್ಭಗೃಹದ ಮೇಲೆ ಶಿಖರವಿದೆ. ಶಿಖರಕ್ಕೆ ಬಣ್ಣ ಬಳಿಯಲಾಗಿದೆ. ಈ ಶಿಖರದ ರಚನೆ ವಿಜಯನಗರ ಕಾಲಾನಂತರದಲ್ಲಿ ಆಗಿರಬಹುದೆಂದು ನಂಬಬಹುದು.

### ಅಮ್ಮನವರ ಸನ್ನಿಧಿ

ದೇವಾಲಯ ಪ್ರಾಕಾರದಲ್ಲೇ ಅಮ್ಮನವರ ದೇವಾಲಯವಿದೆ. ಸೋಮೇಶ್ವರ ದೇವಸ್ಥಾನದ ಎಡಪಕ್ಕದಲ್ಲಿ ಅಂದರೆ ಉತ್ತರದಲ್ಲಿ ಅಮ್ಮನವರ ಸನ್ನಿಧಿ ಇದೆ. ಈ ದೇವಾಲಯ ಚಿಕ್ಕದಾದ ಗರ್ಭಗೃಹ, ಅಂತರಾಳ ಮತ್ತು ತೆರೆದ ಮಹಾಮಂಟಪವಿದ್ದಿರಬೇಕು. ಈಗ ತೆರೆದ ಮಹಾಮಂಟಪವನ್ನು ಗೋಡೆ ಕಟ್ಟಿ ಮುಚ್ಚಲಾಗಿದೆ. ದೇವಾಲಯಕ್ಕೆ ಹತ್ತಲು ಇರುವ ಸೋಪಾನಗಳ ಪಕ್ಕದಲ್ಲಿ ಎರಡು ಕಂಬಗಳಿವೆ. ನವರಂಗವು ನಾಲ್ಕುಕಂಬಗಳ ಸಹಾಯದಿಂದ ನಿಂತುಕೊಂಡಿದೆ. ಅಂತರಾಳವು ಗರ್ಭಗೃಹಕ್ಕೆ ಚಿಕ್ಕದಾಗಿದೆ. ಗರ್ಭಗೃಹವು ಚಿಕ್ಕದಾಗಿದ್ದು, ಚೌಕಾಕಾರದಲ್ಲಿದೆ. ಗರ್ಭಗೃಹದಲ್ಲಿ ದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯದ ಹೊರಭಿತ್ತಿಯು ಯಾವುದೇ ಅಲಂಕಾರವಿಲ್ಲದೆ ಸರಳವಾಗಿದೆ. ಗರ್ಭಗೃಹದ ಮೇಲೆ ಚಿಕ್ಕದಾದ ಶಿಖರವಿದೆ. ಅದೂ ಕೂಡ ಇತ್ತೀಚಿನ ರಚನೆಯಂತೆ ಕಂಡುಬರುತ್ತದೆ.

### ೧೩. ತಿಮ್ಮಲಾಪುರದ ತ್ರಿಕೂಟಾಚಲ ಶೈವ ದೇವಾಲಯ

ತಿಮ್ಮಲಾಪುರ ಹೊಸಪೇಟೆ ತಾಲೂಕಿನ ಒಂದು ಚಿಕ್ಕಹಳ್ಳಿ ಹಿಂದೆ ವಿಜಯನಗರ ಕಾಲದಲ್ಲಿ ಅಗ್ರಹಾರವಾಗಿದ್ದು, ಅಗ್ರಹಾರ ತಿಮ್ಮಲಾಪುರವೆಂದು ಹೆಸರು ಪಡೆದಿತ್ತು. ಇಲ್ಲಿ ಬಯಕಾರ ರಾಮಪ್ಪಯ್ಯನು ಕ್ರಿ.ಶ.೧೫೫೮ರಲ್ಲಿ ಗೋಪಿನಾಥ ದೇವಾಲಯವನ್ನು ಕಟ್ಟಿಸಿದ. ಇದೆ ಕಾಲಘಟ್ಟದಲ್ಲಿ ಗೋಪಿನಾಥ ದೇವಾಲಯದ ಎದುರಿಗೆ ಪಶ್ಚಿಮಾಭಿಮುಖವಾಗಿ ಮಹಾದ್ವಾರವನ್ನು ಹೊಂದಿರುವ ಶಿವದೇವಾಲಯವನ್ನು ಬಯಕಾರ ರಾಮಪ್ಪಯ್ಯನು ನಿರ್ಮಿಸಿದ್ದಾನೆ.[೧೭] ಈ ಶೈವ ದೇವಾಲಯವು ಉತ್ತರಾಭಿಮುಖವಾಗಿದ್ದು. ಇದು ಒಟ್ಟು ಮೂರು ಗರ್ಭಗೃಹಗಳನ್ನು ಒಳಗೊಂಡಿದೆ. ಈ ಒಳಗಿನ ಗರ್ಭಗೃಹಗಳು ಪೂರ್ವಾಭಿಮುಖವಾಗಿ ಪಶ್ಚಿಮಾಭಿಮುಖವಾಗಿ ಮತ್ತು ಮುಖ್ಯ ಗರ್ಭಗೃಹವು ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದೆ. ಬಯಕಾರ ರಾಮಪ್ಪಯ್ಯ ತನ್ನ ಚಿಕ್ಕಪ್ಪ ರಾಮಯ್ಯ ಭಾಸ್ಕರ ಮತ್ತು ಆತನ ಪತ್ನಿ ಅಮ್ಮಾಜಮ್ಮ ಮತ್ತು ಆತನ ಮಗ ಕೃಷ್ಣಪ್ಪನಿಗೆ ಪುಣ್ಯವಾಗಲೆಂದು 'ಬಾಚೇಶ್ವರ', 'ಅಮ್ಮೇಶ್ವರ', 'ಕೃಷ್ಣೇಶ್ವರ'ರೆಂಬ ಮೂರು ಶಿವಲಿಂಗಗಳನ್ನು ಮೂರು ಗರ್ಭಗುಡಿಗಳಲ್ಲಿ ಸ್ಥಾಪಿಸಿ ತ್ರಿಕೂಟಚಲ ದೇವಾಲಯವನ್ನು ನಿರ್ಮಿಸಿದ. ಈ ದೇವಾಲಯ ವಿಜಯನಗರದ ದ್ರಾವಿಡ ಶೈಲಿಯಲ್ಲಿ ನಿರ್ಮಾಣವಾಗಿದೆ.ಇದನ್ನು ಈ ಹಿಂದೆ ದಕ್ಷಿಣದ ರಾಜರುಗಳಾದ ಪಲ್ಲವರು ಮತ್ತು ಚೋಳರು ಹೆಚ್ಚಾಗಿ ಬಳಸತೊಡಗಿದ್ದರು. ಇದೇ ಶೈಲಿಯ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ವಿಜಯನಗರದರಸರು ಇದೇ ದ್ರಾವಿಡಶೈಲಿಯನ್ನು ಮುಂದುವರಿಸಿದರು.

ಈ ದೇವಾಲಯವು ವಿಜಯನಗರ ಶೈಲಿಯಲ್ಲಿ ನಿರ್ಮಾಣವಾದ ಸಾವಿರಾರು ದೇವಾಲಯಗಳಲ್ಲಿ ಏಕೈಕ ತ್ರಿಕೂಟಾಚಲ ದೇವಾಲಯವಾಗಿದೆ.[೧೮] ರಾಮಾದಿತ್ಯನು ಮೊದಲು ದಕ್ಷಿಣ ಕರ್ನಾಟಕದಲ್ಲಿ ಅಧಿಕಾರಿಯಾಗಿದ್ದಾಗ ಬೇಲೂರಿನ ಚನ್ನಕೇಶವ ದೇವಾಲಯಕ್ಕೆ ದತ್ತಿಯನ್ನು ನೀಡಿರುವುದರಿಂದ ಇವನಿಗೆ



೧). ಗರ್ಭ ಗೃಹ ೨).ಅಂತರಾಳ ೩).ಅರ್ಧ ಮಂಟಪ ೪).ನವರಂಗ ೫).ಮಹಾರಂಗ ಮಂಟಪ ೬).ಬಲಿ ಪೀಠ

೭). ಸಾಲು ಮಂಟಪ ೮). ರಾಯ ಗೋಪುರ

೧೩). ತಿಮ್ಮಲಾಪುರದ ತ್ರಿಕೂಟಾಚಲ ಶಿವ ದೇವಸ್ಥಾನದ ತಳನಕ್ಷೆ.

ಹೊಯ್ಸಳ ದೇವಾಲಯಗಳ ಪ್ರಭಾವ ಉಂಟಾಗಿರಬಹುದು. ಸ್ವತಃ ವಾಸ್ತುಕಾರನು ಆಗಿರುವ ಬಯಕಾರ ರಾಮಪ್ಪಯ್ಯ ಇವನಿಗೆ ಹೊಯ್ಸಳ ದೇಗುಲಗಳ ವಾಸ್ತು ವಿನ್ಯಾಸಗಳ ಆಕರ್ಷಣೆಗೊಳಗಾಗಿ ಈ ಶಿವ ದೇವಾಲಯವನ್ನು ನಿರ್ಮಾಣ ಮಾಡಿರುವ ಸಾಧ್ಯತೆಗಳಿವೆ. ಈ ಶಿವ ದೇವಾಲಯವು ಮೊದಲೇ ಹೇಳಿದಂತೆ ಮೂರು ಗರ್ಭಗೃಹಗಳನ್ನು ಒಳಗೊಂಡಿದ್ದು, ಇವುಗಳಿಗೆ ಹೊಂದಿಕೊಂಡಿರುವ ಅಂತರಾಳ ಮುಖಮಂಟಪ ಗಳನ್ನು ನಿರ್ಮಿಸಿ ಇವು ಒಂದೇ ರಂಗಮಂಟಪಕ್ಕೆ ಜೋಡಿಸಿದಂತೆ ಕಟ್ಟಲಾಗಿದೆ. ರಂಗಮಂಟಪದ ಮುಂದಿನ ಭಾಗದಲ್ಲಿ ತೆರೆದ ಮಹಾರಂಗ ಮಂಟಪವನ್ನು ನಿರ್ಮಿಸಲಾಗಿದೆ. ಈ ಮಹಾ ರಂಗಮಂಟಪದಲ್ಲಿ ಇರುವ ಶಾಸನವು ಈ ದೇವಾಲಯದ ನಿರ್ಮಾಣದ ಉದ್ದೇಶ ಆ ದೇವರುಗಳ ಹೆಸರು ಹಾಗೂ ದಿನಾಂಕವನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ.[೧೯]

ದೇವಾಲಯವನ್ನು ಮುಖ್ಯವಾಗಿ ಒಂದು ಮಹಾರಂಗಮಂಟಪ ಒಂದು ರಂಗಮಂಟಪ ಮೂರು ಮುಖ ಮಂಟಪಗಳು ಮೂರು ಗರ್ಭಗೃಹಗಳನ್ನು ಒಳಗೊಂಡಿದೆ. ಈ ಮೂರು ಗರ್ಭಗೃಹಗಳು ಮೂರು ಶಿವಲಿಂಗಗಳನ್ನು ಹೊಂದಿದೆ. ಮುಖ್ಯವಾದ ಮದ್ಯದ ಗರ್ಭಗೃಹವು ಉತ್ತರಾಭಿಮುಖವಾಗಿದ್ದು, ಅದರ ಎರಡು ಬದಿಗೆ ಪೂರ್ವಪಶ್ಚಿಮಾಭಿಮುಖವಾಗಿ ಮತ್ತೆರಡು ಗರ್ಭಗೃಹಗಳನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಮೇಲಿನ ಗೋಪುರವು ಉತ್ತರ ಮತ್ತು ಪೂರ್ವಕ್ಕೆ ಸುರಕ್ಷಿತವಾಗಿದ್ದರೆ ಪಶ್ಚಿಮಾಭಿಮುಖ ವಾಗಿರುವ ಗರ್ಭಗೃಹದ ಮೇಲಿನ ಗೋಪುರವು ಕುಸಿದುಬಿದ್ದಿದೆ. ಇದರ ಶಿವಲಿಂಗವು ಹಾಳಾಗಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಇಟ್ಟಿಗೆ ಮತ್ತು ಗಾರೆಗಳಿಂದ ಮಾಡಿದ ಶಿಖರಗಳಿವೆ. ಈ ಮೂರು ಗರ್ಭಗೃಹಗಳ ಮುಂದೆ ಮುಖಮಂಟಪವನ್ನು ನಿರ್ಮಿಸಲಾಗಿದೆ. ಈ ಮುಖಮಂಟಪಗಳನ್ನು ಒಂದೇ ರಂಗ ಮಂಟಪಕ್ಕೆ ಜೋಡಿಸಲಾಗಿದೆ(ಚಿತ್ರ ೨೨).

ನವರಂಗವು ಮಧ್ಯದ ನಾಲ್ಕು ಪೂರ್ಣಕಂಬಗಳು ಹಾಗೂ ಗೋಡೆಗಂಬಗಳನ್ನು ಒಳಗೊಂಡು ರಚಿಸಲಾಗಿದೆ. ದೇವಾಲಯವನ್ನು ಹೊರಗಿನಿಂದ ಪ್ರವೇಶಿಸಿದರೆ ಸಿಗುವ ಎಡಕಂಬದ ಪಾದ ಭಾಗದಲ್ಲಿ ಎತ್ತರಕ್ಕೆ ಗಜ ಚರ್ಮಾಂಬರ ವಿಗ್ರಹವನ್ನು ಪೂರ್ವಕ್ಕೆ ಗಂಗಾಧರಮೂರ್ತಿಯನ್ನು ದಕ್ಷಿಣಕ್ಕೆ ಮದನಿಕೆ ಮತ್ತು ಪಶ್ಚಿಮಕ್ಕೆ ಶಿವ ಮತ್ತು ಗಣಂಗಳು, ಉಬ್ಬು ಚಿತ್ರಗಳನ್ನು ಕಲಾತ್ಮಕತೆಯಿಂದ ಕೆತ್ತಲಾಗಿದೆ. ಕಂಬದ ಮಧ್ಯ ಭಾಗದಲ್ಲಿ ಉತ್ತರಕ್ಕೆ ತಾಂಡವನೃತ್ಯ ಮಾಡುವ ಶಿವ, ಪೂರ್ವಕ್ಕೆ ಧ್ಯಾನಾಸಕ್ತ ಪರಮೇಶ್ವರ, ದಕ್ಷಿಣಕ್ಕೆ ಅರ್ಧನಾರೀಶ್ವರ ಮತ್ತು ಪಶ್ಚಿಮಕ್ಕೆ ಶಿವ ಪಾರ್ವತಿಯರು ಪೀಠದಲ್ಲಿ ಆಸೀನರಾಗಿರುವ ದೃಶ್ಯಗಳನ್ನು ನೋಡಲು ತುಂಬಾ ಮನಮೋಹಕವಾಗಿ ಕೆತ್ತಲಾಗಿದೆ. ಕಂಬದ ಮೇಲ್ಭಾಗದಲ್ಲಿ ಶಿವಲಿಂಗ ಕೂರ್ಮ ಈಶ್ವರ ರಥ ರೂಢನಾದ ಸೂರ್ಯನಾರಣನ ಉಬ್ಬುಚಿತ್ರಗಳನ್ನು ಸುಂದರವಾಗಿ ಕೆತ್ತಲಾಗಿದೆ.

ನವರಂಗದ ಎರಡನೆಯ ಎಡಭಾಗದ ಕಂಬದ ಪಾದ ಭಾಗದಲ್ಲಿ ಉತ್ತರ ಪೂರ್ವ ಮತ್ತು ದಕ್ಷಿಣ ಭಾಗದಲ್ಲಿ ವೀರಭದ್ರನ ಮೂರ್ತಿಗಳನ್ನು ಪಶ್ಚಿಮಕ್ಕೆ ನೃತ್ಯ ಮಾಡುತ್ತಿರುವ ಶಿವನಮೂರ್ತಿಯನ್ನು

ನೈಜವಾಗಿರುವಂತೆ ಚಿತ್ರಿಸಲಾಗಿದೆ. ಅದೇ ಕಂಬದ ಮಧ್ಯಭಾಗದಲ್ಲಿ ಉತ್ತರಕ್ಕೆ ಕಮಲಾಧಾರಿ ಲಕ್ಷ್ಮಿಯನ್ನು ಪೂರ್ವಕ್ಕೆ ನಾಟ್ಯ ಗಣಪತಿಯನ್ನು ದಕ್ಷಿಣಕ್ಕೆ ತಾಂಡವ ನೃತ್ಯ ಮಾಡುವ ಶಿವನನ್ನು ಪಶ್ಚಿಮಕ್ಕೆ ಭೈರವನ ಮೂರ್ತಿಗಳನ್ನು ಕೆತ್ತಲಾಗಿದೆ. ಕಂಬದ ಮೇಲ್ಭಾಗದಲ್ಲಿ ಉತ್ತರಕ್ಕೆ ನಂದಿ, ಪೂರ್ವಕ್ಕೆ ಶಿವಲಿಂಗ ಪಶ್ಚಿಮಕ್ಕೆ ಶಿವಲಿಂಗಕ್ಕೆ ಕ್ಷೀರಧಾರೆಯನ್ನು ಹರಿಸುವ ಗೋಮಾತೆಯ ಚಿತ್ರವನ್ನು ಮನಮೋಹಕವಾಗಿ ಕೆತ್ತಲಾಗಿದೆ. ನವರಂಗದ ಬಲ ಭಾಗದ ಮೊದಲನೆಯ ಕಂಬದ ಪಾದ ಭಾಗದಲ್ಲಿ ಉತ್ತರಕ್ಕೆ ಬೇಡರ ಕಣ್ಣಪ್ಪನು ಬಾಣದಿಂದ ಕಣ್ಣು ಕಿತ್ತುಕೊಳ್ಳುವ ದೃಶ್ಯವನ್ನು ಮನೋಜ್ಞನವಾಗಿ ಚಿತ್ರಿಸಲಾಗಿದೆ.

ಕಂಬದ ಮಧ್ಯಭಾಗದಲ್ಲಿ ಉತ್ತರಕ್ಕೆ ತಾಂಡವ ನೃತ್ಯ ಮಾಡುವ ಮತ್ತು ಜಡೆಬಿಚ್ಚಿ ನಿಂತಿರುವ ತಲೆಯ ಮೇಲೆ ಗಂಗೆಯಿಂದ ನೀರು ಸುರಿಯುತ್ತಿರುವ ಶಿವನಮೂರ್ತಿಯನ್ನು, ಪೂರ್ವಕ್ಕೆ ಚಾಮರ ಬೀಸುವ ಶಿವಗಣರನ್ನು, ದಕ್ಷಿಣಕ್ಕೆ ಕ್ಷೀರಧಾರೆಯನ್ನು ಎರೆಯುತ್ತಿರುವ ಗೋಮಾತೆಯನ್ನು ಕೆತ್ತಲಾಗಿದೆ. ಪಶ್ಚಿಮಕ್ಕೆ ನಾಟ್ಯ ಗಣಪತಿಯನ್ನು ಬಹು ಸೊಗಸಾಗಿ ನಿರ್ಮಿಸಲಾಗಿದೆ. ಕಂಬದ ಮೇಲ್ಭಾಗದಲ್ಲಿ ಶಿವಭಕ್ತರ ಗಂಧರ್ವರು, ಯಕ್ಷರು, ನಂದಿ, ಭೃಂಗರನ್ನು ನಿರ್ಮಿಸಲಾಗಿದೆ.

ಬಲಭಾಗದ ಎರಡನೇ ಕಂಬದ ಪಾದಭಾಗದಲ್ಲಿ ಪೂರ್ವಕ್ಕೆ ನಾಟ್ಯ ಮಾಡುವ ಯಕ್ಷ, ದಕ್ಷಿಣಕ್ಕೆ ನಾಟ್ಯ ಶಿವ, ಪಶ್ಚಿಮಕ್ಕೆ ನಾಟ್ಯ ಭಂಗಿಯ ಹೋಳಿ ಚಿತ್ರಗಳನ್ನು ಕೆತ್ತಲಾಗಿದೆ. ಕಂಬದ ಮಧ್ಯಭಾಗದಲ್ಲಿ ಉತ್ತರಕ್ಕೆ ಈಶ್ವರಲಿಂಗ ಪೂರ್ವಕ್ಕೆ ಶಿವಭಕ್ತನ ಮೂರ್ತಿ, ದಕ್ಷಿಣಕ್ಕೆ ತ್ರಿಶೂಲ ಡಮುರು ಶಂಖ ಚಕ್ರಧಾರೆಯಾಗಿರುವ ಹರಿಹರನ ಚಿತ್ರಗಳನ್ನು ಕೆತ್ತಲಾಗಿದೆ. ಈ ದೇವಾಲಯದಲ್ಲಿ ಹಂಪೆಯ ದೇಗುಲಗಳಲ್ಲಿ ಕಾಣಲಾಗದ, ಸ್ವಭೀಕ್ಷಿಕ ಮೂರ್ತಿ ನಯನಾರರಾದ ಮಾಣಿಕ್ಯವಾಚಗರ್ ಮೂರ್ತಿ ಮತ್ತು ಅಪ್ಪಾರರನ್ನು ರೂಪಿಸಲಾಗಿದೆ. ನವರಂಗದ ಗೋಡೆಗಂಬಗಳಲ್ಲಿ ಯಾಳಿ ಹಂಸ ಶಿವಭಕ್ತರು ಪಕ್ಷಿಗಳು ಶಿವಲಿಂಗ ಯಕ್ಷ ಯಕ್ಷಿಣಿಯರ ಚಿತ್ರಗಳನ್ನು ಸರಳ ರೀತಿಯಲ್ಲಿ ಕೆತ್ತಲಾಗಿದೆ.

ನವರಂಗ ಮಂಟಪದ ಮುಂದಿನ ಭಾಗವೇ ಮಹಾರಂಗ ಮಂಟಪ. ಇದನ್ನು ಗೋಡೆಗಳಿಲ್ಲದೇ ಬರಿ ಕಂಬಗಳ ಸಹಾಯದಿಂದಲೇ ನಿರ್ಮಿಸಲಾಗಿದೆ. ಅದಕ್ಕಾಗಿ ಇದನ್ನು ತೆರೆದ ಮಹಾರಂಗ ಮಂಟಪ ಎಂದು ಕರಯಲಾಗಿದೆ. ಇದು ಒಟ್ಟು ೨೪ ಕಂಬಗಳ ಸಹಾಯದಿಂದ ಎತ್ತರವಾದ ಪೀಠದ ಮೇಲೆ ನಿರ್ಮಿಸಲಾಗಿರುವುದು. ಹಾಗೂ ಪ್ರತಿಯೊಂದು ಕಂಬಗಳು ಸಹ ಪಾದ ದಂಡ ದಂಡಾಗ್ರ ಭಾಗಗಳನ್ನು ಹೊಂದಿದ್ದು ಮೇಲ್ಭಾಗದಲ್ಲಿ ಕಂಬಗಳು ತರಂಗ ಬೋದಿಗೆ ಸಹಾಯದೊಂದಿಗೆ ಸೇರಿಸಲಾಗಿದೆ. ಈ ಕಂಬದ ಮೇಲೆ ಧ್ಯಾನ ಮಾಡುತ್ತಿರುವ ಶಿವಭಕ್ತರನ್ನು ನಂದಿ ಕಾಮಧೇನು ಹಂಸಗಳು ಯಾಳಿ ಮತ್ತು ಗಜಗಳ ಉಬ್ಬು ಚಿತ್ರಗಳನ್ನು ಆಕರ್ಷಣೆಯವಾಗಿ ಕೆತ್ತಲಾಗಿರುವುದು. ಇದಲ್ಲದೆ ಪೂರ್ಣಕುಂಭ, ಶಿವಲಿಂಗಕ್ಕೆ ಕ್ಷೀರವನ್ನು ತನ್ನ ಕೆಚ್ಚಲಿನಿಂದ ಧಾರೆ ಹರಿಸುತ್ತಿರುವ ಗೋಮಾತೆಯ ಉಬ್ಬುಶಿಲ್ಪ, ಶಂಖ, ಊರ್ಧ್ವಪುಂಡ, ವಾದ್ಯವೃಂದದವರು ನೃತ್ಯಗಾರರ ಉಬ್ಬುಶಿಲ್ಪಗಳನ್ನು ನೈಜವಾಗಿ ಚಿತ್ರಿಸಲಾಗಿದೆ. ಮತ್ತೆ

ಕೆಲವು ಕಂಬಗಳಲ್ಲಿ ಮೂಷಕವಾಹನ ರೂಢನಾದ ಗಣಪತಿಯನ್ನು, ನಂದಿವಾಹನ ರೂಢನಾದ ಪಾರ್ವತಿ ಪರಮೇಶ್ವರ ವಿಗ್ರಹಗಳನ್ನು ಮಯೂರ ವಾಹನ ರೂಢನಾದ ಷಣ್ಮುಖಸ್ವಾಮಿಯನ್ನು ಮತ್ಸ್ಯಕನ್ಯೆಯರನ್ನು ಮದನಿಕೆಯರಂತಹ ಉಬ್ಬು ಚಿತ್ರಗಳನ್ನು ತೆರೆದ ಮಹಾರಂಗ ಮಂಟಪದಲ್ಲಿ ನಿರ್ಮಿಸಲಾಗಿದೆ. ಹಾಗೂ ಇದೇ ಮಂಟಪದಲ್ಲಿ ಉಗ್ರನರಸಿಂಹ, ವೀರಭದ್ರ ಚೋಳಿನ ಮೇಲೆ ಪವಡಿಸಿರುವ ವಿಷಕನ್ಯೆಯರನ್ನ ಕೆತ್ತಲಾಗಿದೆ. ಮಹಾರಂಗ ಮಂಟಪದಿಂದ ನವರಂಗಕ್ಕೆ ಪ್ರವೇಶಿಸುವ ದ್ವಾರದಲ್ಲಿ ಶೈವ ದ್ವಾರಪಾಲಕರು ತ್ರಿಶೂಲ, ಢಮರು ಹಿಡಿದು ನಿಂತಿರುವಂತೆ ಕೆತ್ತಲಾಗಿದೆ. ಮೇಲ್ಗಡೆಯ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯರ ವಿಗ್ರಹವನ್ನು ಕೆತ್ತಲಾಗಿರುವುದು ಮಹಾರಂಗ ಮಂಟಪದ ಎಡ, ಬಲಭಾಗದ ಭಿತ್ತಿಯಲ್ಲಿ ಅಂದರೆ ಪ್ರವೇಶ ದ್ವಾರದ ಎಡಬಲಗಳಲ್ಲಿ ಹಂಸ ಗಜಗಳು ಮದನಿಕೆ ವಿಗ್ರಹಗಳನ್ನು ಲತಾ ಸುರುಳಿಗಳನ್ನು ಸುಂದರವಾಗಿ ಕೆತ್ತಲಾಗಿದೆ. ಪಕ್ಕದ ಭಿತ್ತಿಯಲ್ಲಿ ಸುಂದರವಾದ ಕುಂಭಪಂಜರ ಅರ್ಧಗಂಬಗಳನ್ನು ನಿರ್ಮಿಸಿದೆ. ಇವು ದ್ರಾವಿಡಶೈಲಿಯ ಶಿಖರಗಳನ್ನು ಒಳಗೊಂಡಿದೆ(ಚಿತ್ರ ೨೩).

ಶಿವಾಲಯದ ಪ್ರಾಂಗಣವು ವಿಶಾಲವಾಗಿದ್ದು ಸುತ್ತಲೂ ಮಂಟಪವನ್ನು ಹೊಂದಿದೆವಿ. ಪ್ರಾಂಗಣಕ್ಕೆ ಪಶ್ಚಿಮ ದಿಕ್ಕಿನಲ್ಲಿ ಪ್ರವೇಶದ್ವಾರವಿದ್ದು, ಅದು ರಾಯಗೋಪುರವನ್ನು ಒಳಗೊಂಡಿದೆ. ಈ ರಾಯಗೋಪುರದ ಪ್ರವೇಶ ದ್ವಾರದ ಎದುರಿನಲ್ಲಿ ಬಯಕಾರ ರಾಮಪ್ಪಯ್ಯ ನಿರ್ಮಿಸಿದ ಭವ್ಯವಾದ ಶ್ರೀ ವೇಣುಗೋಪಾಲ ಸ್ವಾಮಿದೇವಾಲಯವನ್ನು ನೋಡಬಹುದು. ಹೀಗೆ ವಿಜಯನಗರ ಶೈಲಿಯ ಶ್ರೇಷ್ಠ ಕಲಾ ಕುಸುಮವಾದ ತಿಮ್ಮಲಾಪುರದ ಶಿವಾಲಯವು ವಿಜಯನಗರ ಶೈಲಿಯ ಏಕೈಕ ತ್ರಿಕೂಟಾಚಲ ದೇವಾಲಯವಾಗಿದೆ ಎಂದು ಹೇಳಬಹುದು.

## ೧೪. ನಾಗಮಂಗಲದ ವೀರಭದ್ರೇಶ್ವರ ದೇವಾಲಯ

ನಾಗಮಂಗಲವು ಮಂಡ್ಯ ಜಿಲ್ಲೆಯ ಒಂದು ತಾಲೂಕು ಕೇಂದ್ರ ಮೈಸೂರಿನಿಂದ ೯೦.ಕಿ.ಮೀ. ದೂರದಲ್ಲಿನ ನಾಗಮಂಗಲವು ಜಿಲ್ಲಾಕೇಂದ್ರ ಮಂಡ್ಯದಿಂದ ೭೦ ಕಿ.ಮೀ. ದೂರದಲ್ಲಿದೆ. ಈ ನಾಗಮಂಗಲವು ಐತಿಹಾಸಿಕ ಪ್ರಸಿದ್ಧಿಯನ್ನು ಹೊಂದಿದ ಸ್ಥಳವಾಗಿದೆ. ಈ ಪಟ್ಟಣದಲ್ಲಿ ಹತ್ತು ದೇವಾಲಯಗಳು ಕಂಡುಬರುತ್ತವೆ. ವಿಜಯನಗರ ಶೈಲಿಯಲ್ಲಿ ಈ ಊರಿನಲ್ಲಿ ಮೂರು ದೇವಾಲಯಗಳನ್ನು ಕಾಣಬಹುದು. ಅವುಗಳೆಂದರೆ ವೀರಭದ್ರ ದೇವಾಲಯ, ನಾಗರೇಶ್ವರ ದೇವಾಲಯ, ಸೌಮ್ಯಕೇಶವ ದೇವಾಲಯಗಳು ವಿಜಯನಗರ ಶೈಲಿಯ ದೇವಾಲಯಗಳಾಗಿವೆ.[೨೦] ನಾಗಗಳ ಆರಾಧನೆಯು ಈ ಭಾಗದಲ್ಲಿ ಕಂಡುಬರುವುದರಿಂದ ಈ ಊರಿಗೆ ನಾಗಮಂಗಲ ಎಂದು ಹೆಸರು ಬಂದಿದೆ. ಮಧ್ಯಯುಗೀನ ಕಾಲದಲ್ಲಿ ಹಾಗಲವಾಡಿಯ ಪಾಳೆಗಾರರು ವಿಜಯನಗರದ ಸಾಮಂತ ಪಾಳೆಯಪಟ್ಟುವಾಗಿತ್ತು. ಈ ವಂಶದ ಹಿರಿಮೆಯನಾಯಕನು ನಾಗಮಂಗಲವನ್ನು ವಶಪಡಿಸಿಕೊಂಡು, ನಾಗಮಂಗಲವನ್ನು ಹಾಗಲವಾಡಿಯ ರಾಜ್ಯಕ್ಕೆ ಸೇರಿಸಿಕೊಂಡನು[೨೧] ಎಂಬುದು ನಾಗಮಂಗಲದ ಇತಿಹಾಸವಾಗಿದೆ.ಈ ನಾಗಮಂಗಲದಲ್ಲಿ



೧). ಗರ್ಭ ಗೃಹ ೨). ಅಂತರಾಳ ೩). ಅರ್ಧ ಮಂಟಪ ೪). ನವರಂಗ ಮಂಟಪ ೫). ಮುಖ ಮಂಟಪ ೬). ಧ್ವಜ ಸ್ತಂಭ
೭).ನಂದಿ ಮಂಟಪ .

೧೪). ನಾಗಮಂಗಲದ ವೀರಭದ್ರ ದೇವಸ್ಥಾನದ ತಲನಕ್ಷೆ.

ವಿಜಯನಗರ ವಾಸ್ತುಶೈಲಿಯ ವೀರಭದ್ರೇಶ್ವರ ದೇವಸ್ಥಾನವನ್ನು ಕಾಣಬಹುದು. ಈ ದೇವಾಲಯದ ದ್ರಾವಿಡ ಶೈಲಿಯಲ್ಲಿ ನಿರ್ಮಾಣಗೊಂಡಿದೆ.[೨೨] ದೇವಸ್ಥಾನವನ್ನು ನೋಡಿದಾಗ ಈ ದೇವಾಲಯವು ಹಂತ ಹಂತವಾಗಿ ನಿರ್ಮಾಣಗೊಂಡಂತಿದೆ. ಈ ವೀರಭದ್ರೇಶ್ವರ ದೇವಾಲಯವು ಪೂರ್ವಕ್ಕೆ ಮುಖ ಮಾಡಿದೆ. ವೀರಭದ್ರನ ದೇವಸ್ಥಾನಕ್ಕೆ ಹೊಂದಿಕೊಂಡಂತೆ ಎಡಬದಿಯಲ್ಲಿ ಅಮ್ಮನವರಾದ ಭದ್ರಕಾಳಮ್ಮನ ಸನ್ನಿಧಿಯನ್ನು ಕಾಣಬಹುದು. ವೀರಭದ್ರನ ದೇವಸ್ಥಾನದ ಅಂತರಾಳಕ್ಕೂ ಭದ್ರಕಾಳಮ್ಮನ ದೇವಸ್ಥಾನದ ಅಂತರಾಳಕ್ಕೂ ಭದ್ರಕಾಳಮ್ಮನ ದೇವಸ್ಥಾನದ ಅಂತರಾಳಗಳು ಒಂದಕ್ಕೊಂದು ಸೇರಿಕೊಂಡಿವೆ. ಎರಡೂ ಅಂತರಾಳಗಳ ಮಧ್ಯದಲ್ಲಿ ಒಂದು ಬಾಗಿಲನ್ನು ಅಳವಡಿಸಲಾಗಿದೆ. ಈ ಎರಡೂ ದೇವಾಲಯಗಳ ಪೂಜೆ ಕೈಕಾರ್ಯ ನಡೆಸುವವರು ವೀರಶೈವ ಲಿಂಗಾಯತರಾಗಿದ್ದಾರೆ. ಈ ಎರಡೂ ದೇವಾಲಯಗಳ ಪೂಜೆಗಳನ್ನು ಒಬ್ಬರೇ ನಿರ್ವಹಿಸಲು ಅನುಕೂಲವಾಗುವಂತೆ ಈ ಬಾಗಿಲು ರಚನೆಗೊಂಡಿರಬೇಕು(ಚಿತ್ರ ೨೪).

ಗರ್ಭಗೃಹವು ಚಚ್ಚೌಕಾಕಾರದಲ್ಲಿದೆ, ಅದರ ಮುಂದಿನ ಭಾಗದಲ್ಲಿ ಅಂತರಾಳವಿದೆ. ಅಂತರಾಳವು ಸಾಮಾನ್ಯವಾಗಿ ಎಲ್ಲಾ ದೇವಾಲಯಗಳಲ್ಲಿ ಸಣ್ಣದಾಗಿರುತ್ತದೆ. ಆದರೆ ನಾಗಮಂಗಲದ ಈ ದೇವಾಲಯದಲ್ಲಿ ಅಂತರಾಳವು ಗರ್ಭಗೃಹಕ್ಕಿಂತ ದೊಡ್ಡದಾಗಿದೆ. ಅಂತರಾಳವು ಗರ್ಭಗೃಹ ಮತ್ತು ನವರಂಗಕ್ಕೆ ಸೇರಿಕೊಂಡಿದೆ. ಅಂತರಾಳದ ಎಡಬಲ ಬದಿಯಲ್ಲಿ ಸಣ್ಣಕೋಣೆಗಳನ್ನು ನಿರ್ಮಿಸಲಾಗಿದೆ. ಈ ಕಾರಣದಿಂದಲೇ ಅಂತರಾಳವು ಗರ್ಭಗೃಹಕ್ಕಿಂತ ದೊಡ್ಡದಾಗಿದೆ. ಎಡಬದಿಯ ಅಂತರಾಳದ ಕೋಣೆಯ ಒಳಗೆ, ಅಮ್ಮನವರ ಸನ್ನಿಧಿಯ ಅಂತರಾಳಕ್ಕೆ ಪ್ರವೇಶ ಕಲ್ಪಿಸುವ ಬಾಗಿಲಿದೆ. ಅಂತರಾಳದಿಂದ ಗರ್ಭಗುಡಿಗೆ ಪ್ರವೇಶಿಸುವ ಬಾಗಿಲು ನಾಲ್ಕು ಅಡಿ ಎತ್ತರವಾಗಿದೆ. ಇದಕ್ಕೆ ಈಗ ಹಿತ್ತಾಳೆಯ ಕವಚವನ್ನು ತೊಡಿಸಿದ್ದಾರೆ. ಗರ್ಭಗೃಹವು ನೆಲಮಟ್ಟಕ್ಕಿಂತ ಮೂರು ಅಡಿಯಷ್ಟು ತಗ್ಗಾಗಿದೆ. ಗರ್ಭಗುಡಿಯಲ್ಲಿ ನಾಲ್ಕು ಅಡಿ ಎತ್ತರದ ವೀರಭದ್ರ ಸ್ವಾಮಿಯು ವಿರಾಜಮಾನವಾಗಿದ್ದಾನೆ. ವೀರಭದ್ರನು ಒಂದು ಕೈಯಲ್ಲಿ ಖಡ್ಗ, ಇನ್ನೊಂದು ಕೈಯಲ್ಲಿ ಬಿಲ್ಲು ಮುಂತಾದ ಆಯುಧಗಳನ್ನು ಹಿಡಿದು ನಿಂತಿದ್ದಾನೆ. ವೀರಭದ್ರನ ಎದುರಿನಲ್ಲಿ ಅಂತರಾಳದಲ್ಲಿ ಒಂದು ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ವೀರಭದ್ರನ ಎದುರಿನಲ್ಲಿ ನಂದಿ ಇರುವುದು ಈ ದೇವಾಲಯದ ವಿಶೇಷಗಳಲ್ಲಿ ಒಂದು. ಅಂತರಾಳದ ಬಲಭಾಗದಲ್ಲಿ ಹಿತ್ತಾಳೆಯ ವೀರಭದ್ರ, ಭದ್ರಕಾಳಮ್ಮ, ದಕ್ಷಯಜ್ಞರ ಉತ್ಸವಮೂರ್ತಿಗಳನ್ನು ಇಟ್ಟಿದ್ದಾರೆ. ಇವು ಕೂಡ ಪುರಾತನವಾದವು ಎಂದು ಅರ್ಚಕರು ಹೇಳುತ್ತಾರೆ. ಪ್ರಧಾನವಾದ ವೀರಭದ್ರನ ಉತ್ಸವ ಮೂರ್ತಿಯು ಸುಮಾರು ಎರಡುವರೆ ಅಡಿ ಎತ್ತರವಾಗಿದೆ. ಅದರ ಹಿಂದೆ ಮೂರು ಅಡಿ ಎತ್ತರದ ಪ್ರಭಾವಳಿಯನ್ನು ರಚಿಸಲಾಗಿದೆ. ಇದರ ಪಕ್ಕದಲ್ಲಿ ಇನ್ನೊಂದು ಎಂಟು ಇಂಚು ಎತ್ತರದ ಉತ್ಸವಮೂರ್ತಿ ಇದ್ದು ಅದರ ಹಿಂಬದಿಯಲ್ಲಿ ಕೂಡ ಒಂದು ಅಡಿ ಎತ್ತರದ ಪ್ರಭಾವಳಿ ಇದೆ. ಇದೇ ಅಂತರಾಳದಲ್ಲಿ ಗಣೇಶ, ನಂದಿ ಮುಂತಾದ ಶೈವ ಸಂಪ್ರದಾಯಕ್ಕೆ ಸೇರಿದ ಹಿತ್ತಾಳೆಯ ಉತ್ಸವ ಮೂರ್ತಿಗಳಿವೆ.

ಅಂತರಾಳದ ಮುಂದಿನ ಭಾಗವೇ ಗಣಪತಿ ಅಂಕಣ-ಅಂತರಾಳದ ಮುಂದೆ ಮುಖಮಂಟಪವಿದೆ. ನಾಗಮಂಗಲದ ಈ ವೀರಭದ್ರನ ದೇವಸ್ಥಾನದಲ್ಲಿ ಗಣಪತಿ ಅಂಕಣ ಎಂದು ಕರೆಯುವ ಎರೆಡು ಕಂಬಗಳ ಸಹಾಯದಿಂದ ನಿರ್ಮಿಸಿದ ಈ ಅಂಕಣವಿದೆ. ಇದು ಮುಖಮಂಟಪದ ರಚನೆಯನ್ನು ಹೊಂದಿದ್ದು ಇದು ಎರಡೇ ಕಂಬಗಳ ಸಹಾಯದಿಂದ ನಿರ್ಮಾಣವಾಗಿದೆ. ಈ ಎರಡೂ ಕಂಬಗಳ ಮೇಲಿನ ಬೋದಿಗೆಗಳು ಯಾವುದೇ ಕೆತ್ತನೆಗಳಿಲ್ಲದೆ ಸರಳವಾದ ರಚನೆಯನ್ನು ಹೊಂದಿವೆ. ದೇವಾಲಯದ ಬಲಭಾಗದಲ್ಲಿ ವಿಘ್ನೇಶ್ವರನ ಮೂರ್ತಿಯನ್ನು ಪಾಣಿಪೀಠದ ಮೇಲೆ ಕೂಡಿಸಲಾಗಿದೆ. ಗಣಪತಿ ಅಂಕಣದಿಂದ ಅಂತರಾಳಕ್ಕೆ ಪ್ರವೇಶಿಸುವ ದ್ವಾರವು ಆರುವರೆ ಅಡಿ ಎತ್ತರವಾಗಿದೆ. ಈ ದ್ವಾರವು ಸಹ ಹಿತ್ತಾಳೆಯ ಕವಚವನ್ನು ಹೊಂದಿದೆ. ಹಿತ್ತಾಳೆಯ ಕವಚದ ಲಲಾಟ ಬಿಂಬದಲ್ಲಿ ಗಣೇಶನ ವಿಗ್ರಹವನ್ನು ಕೆತ್ತಲಾಗಿದೆ. ದ್ವಾರದ ಎಡ ಭಾಗದಲ್ಲಿ ಡಮರು, ತ್ರಿಶೂಲ, ಅಭಯಹಸ್ತ, ಗದೆಯನ್ನು ಹೊಂದಿದ ದ್ವಾರಪಾಲಕನನ್ನು ಹೊಂದಿದೆ. ಇನ್ನೊಂದು ಭಾಗದಲ್ಲಿ ಕೂಡ ಇದೇ ತೆರನಾದ ರಚನೆಯನ್ನು ಹೊಂದಿದ್ದ ದ್ವಾರಪಾಲಕ ಮೂರ್ತಿಯನ್ನು ನಿಲ್ಲಿಸಲಾಗಿದೆ. ಗರ್ಭಗೃಹದ ಎಡಭಾಗದಲ್ಲಿ ಗಣಪತಿ ಅಂಕಣದಲ್ಲಿ ತ್ರಿಶೂಲ, ಖಡ್ಗ, ಡಮರು ಹಾಗೂ ಇನ್ನೊಂದು ಕೈಯಲ್ಲಿ ದಕ್ಷಬ್ರಹ್ಮನ ತಲೆಯನ್ನು ಹಿಡಿದು ನಿಂತಿರುವ ಉಗ್ರರೂಪಿಯಾದ ವೀರಭದ್ರನ ಶಿಲ್ಪವನ್ನು ಕಾಣಬಹುದು. ಈ ಅಂಕಣದಲ್ಲಿ ಸ್ತಂಭಗಳಿಗೆ ಟೈಲ್ಸನ್ನು ಅಳವಡಿಸಿರುವುದರಿಂದ ಅಲ್ಲಿನ ಶಿಲ್ಪಗಳಾಗಲಿ ಕಂಬಗಳ ಆಕಾರಗಳಾಗಲಿ ಕಂಡುಬರುವುದಿಲ್ಲ.

ಈ ಅಂಕಣವು ಗರ್ಭಗೃಹಕ್ಕೆ ನೇರವಾಗಿ ಪೂರ್ವಕ್ಕೆ ಒಂದು ಬಾಗಿಲನ್ನು ಹೊಂದಿದ್ದರೆ, ಬಲಕ್ಕೆ ಅಂದರೆ ಉತ್ತರಕ್ಕೆ ಒಂದು ದ್ವಾರವನ್ನು ಹೊಂದಿದೆ. ಈ ದ್ವಾರವು ನಾಲ್ಕು ಅಡಿ ಎತ್ತರವಾಗಿದೆ. ಗಣಪತಿ, ಅಂಕಣದಿಂದ ನವರಂಗಕ್ಕೆ ಪ್ರವೇಶ ಕಲ್ಪಿಸುವ ದ್ವಾರವು ಐದುವರೆ ಅಡಿ ಎತ್ತರವನ್ನು ಹೊಂದಿದೆ. ಈ ಗಣಪತಿ ಅಂಕಣದ ಎಲ್ಲಾ ಗೋಡೆಗೂ ಟೈಲ್ಸನ್ನು ಹಾಕಿರುವುದರಿಂದ ಇದರ ಮೂಲ ರಚನೆಯು ತಿಳಿಯುವುದಿಲ್ಲ. ಈ ಗಣಪತಿ ಅಂಕಣದ ಮಧ್ಯದಲ್ಲಿ ಗಣಪತಿಯನ್ನು ಇಡಲಾಗಿದೆ. ಈ ಗಣಪತಿಯು ಉತ್ಸವಮೂರ್ತಿಯಾಗಿದ್ದು, ಹಿತ್ತಾಳೆಯಲ್ಲಿ ನಿರ್ಮಿಸಲಾಗಿದೆ. ಈ ಕಾರಣದಿಂದ ಈ ಅಂಕಣಕ್ಕೆ ಗಣಪತಿ ಅಂಕಣ ಎಂದು ಕರೆಸಿಕೊಳ್ಳುತ್ತಿದೆ. ಈ ಗಣಪತಿಯ ಮೂರ್ತಿಯನ್ನು ಗಣೇಶ ಚೌತಿಯಂದು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿಸುತ್ತಾರೆ. ಗಣೇಶನ ಮೂರ್ತಿ ಎರಡು ಅಡಿ ಎತ್ತರವಾಗಿದೆ. ಗಣೇಶನ ಮುಂದುಗಡೆ ಒಂದು ಅಡಿ ಎತ್ತರದ ವಾಹನ ಇಲಿ ಇದೆ. ಈ ಗಣೇಶನ ಮುಂದೆ ಇಬ್ಬರು ಋಷಿಗಳು ಭಕ್ತಿಯಿಂದ ಕೈಮುಗಿದು ನಿಂತಿದ್ದಾರೆ.

ಗಣಪತಿ ಅಂಕಣದ ಮುಂದಿನ ಭಾಗವೇ ನವರಂಗ, ನವರಂಗದಲ್ಲಿನ ದ್ವಾರವು ಹಿತ್ತಾಳೆಯ ಕವಚದಿಂದ ಆವೃತವಾಗಿದೆ. ಇದರ ಲಲಾಟಬಿಂಬದಲ್ಲಿ ಶಿವಪಾರ್ವತಿಯರ ವಿಗ್ರಹಗಳನ್ನು ಕಾಣಬಹುದು.

ಈ ಬಾಗಿಲ ಪಕ್ಕದಲ್ಲಿ ಶೈವ ದ್ವಾರಪಾಲಕರ ವಿಗ್ರಹಗಳು ಇವೆ. ಈ ಮೂರ್ತಿಗಳು ಬಹಳ ಸುಂದರವಾದ ಅಲಂಕೃತ ಮೂರ್ತಿಗಳಾಗಿವೆ. ದ್ವಾರಪಾಲಕರ ಮೂರ್ತಿಗಳು ಸುಮಾರು ನಾಲ್ಕು ಅಡಿ ಎತ್ತರವಾಗಿವೆ. ದ್ವಾರಪಾಲಕರ ಮೂರ್ತಿಗಳು ಪಾಶ, ಖಡ್ಗ, ಬಿಲ್ಲು, ಗದೆಯನ್ನು ನಾಲ್ಕು ಕೈಗಳಲ್ಲಿ ಹಿಡಿದು ನಿಂತಿರುವಂತೆ ಚಿತ್ರಿಸಲಾಗಿದೆ. ದ್ವಾರ ಪಾಲಕರ ತಲೆಯ ಮೇಲೆ ಕೀರ್ತಿ ಮುಖವಿದ್ದು ಅಲ್ಲಿ ಸಿಂಹದ ಮುಖವನ್ನು ಕೆತ್ತಲಾಗಿದೆ. ಈ ಅಂಕಣದ ಬಲಭಾಗದಲ್ಲಿ ಕೋಣೆಯನ್ನು ಹೊಂದಿದೆ. ಅಲ್ಲಿ ಶಿವಲಿಂಗವಿದೆ. ಶಿವಲಿಂಗದ ಎದುರಿನಲ್ಲಿ ಚಿಕ್ಕದಾದ ಕೋಣೆ ಇದೆ. ಕೋಣೆಯಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯ ಪಕ್ಕದ ಕೋಣೆಯಲ್ಲಿ(ಮಂಟಪದಲ್ಲಿ) ದಕ್ಷಿಣಾಮೂರ್ತಿಯ ಪಂಚಲೋಹದ ಒಂದು ಅಡಿ ಎತ್ತರದ ಮೂರ್ತಿ ಇದೆ. ಮೂರ್ತಿಯ ಹಿಂದೆ ಪ್ರಭಾವಳಿಯನ್ನು ರಚಿಸಲಾಗಿದೆ. ಪ್ರಭಾವಳಿಯು ಸರ್ಪದ ಆಕಾರದಲ್ಲಿ ಇದೆ. ಇಲ್ಲಿನ ನಾಲ್ಕೂ ಕಂಬಗಳು ಸರಳವಾದ ಶೈಲಿಯಲ್ಲಿ ರಚನೆಯಾಗಿದೆ. ಕಂಬಗಳು ಮೂರು ಭಾಗಗಳನ್ನು ಹೊಂದಿದೆ. ಈ ಕಂಬಗಳಲ್ಲಿ ಯಾವುದೇ ಮೂರ್ತಿಯ ಕೆತ್ತನೆಗಳಿರುವುದಿಲ್ಲ. ಬೋದಿಗೆಗಳು ಕೂಡ ಸರಳವಾಗಿ ರಚನೆಗೊಂಡಿದೆ. ಭುವನೇಶ್ವರಿಯು ಅಷ್ಟಕೋನಾಕೃತಿಯಲ್ಲಿದೆ. ಅದರ ಮೇಲೆ ಪದ್ಮವನ್ನು ರಚಿಸಲಾಗಿದೆ.

ಮಹಾರಂಗಮಂಟಪವು ಹದಿನಾರು ಕಂಬಗಳನ್ನು ಹೊಂದಿದೆ. ಈ ಮಹಾರಂಗ ಮಂಟಪ ಮೊದಲಿಗೆ ತೆರೆದ ಮಹಾರಂಗ ಮಂಟಪವಾಗಿತ್ತು. ಕಾಲಾನಂತರದಲ್ಲಿ ಇದಕ್ಕೆ ಎಡಬಲಗಳಲ್ಲಿ ಗೋಡೆಯನ್ನು ನಿರ್ಮಿಸಿದ್ದಾರೆ. ಮೊದಲಿಗೆ ಇದು ಕಲ್ಲು ಚಪಡ್ಡಿಗಳಿಂದ ಕೂಡಿದ ಮಂಟಪವಾಗಿತ್ತು. ಈಗ ಇದಕ್ಕೆ ಸಿಮೆಂಟ್ ಕಾಂಕ್ರೀಟ್ ಹಾಕಲಾಗಿದೆ. ಇದರಲ್ಲಿನ ದ್ವಾರವನ್ನು ಸಹ ಹಿತ್ತಾಳೆಯ ಕವಚದಿಂದ ನಿರ್ಮಿಸುತ್ತಾರೆ. ಈ ಬಾಗಿಲ ಲಲಾಟ ಬಿಂಬದಲ್ಲಿ ಶಿವಪಾರ್ವತಿಯರ ಮೂರ್ತಿಗಳನ್ನು ಕೆತ್ತಲಾಗಿದೆ. ಇದರ ಮುಂದಿನ ಸಾಲಿನ ಕಂಬಗಳಲ್ಲಿ ಮದನಿಕೆ, ಮಲ್ಲಯುದ್ಧ ಕಾಳಗ ಮಾಡುವ ಶಿಲ್ಪಗಳು, ಋಷಿಗಳು, ದ್ವಾರಪಾಲಕರನ್ನು ಕೆತ್ತಲಾಗಿದೆ. ಇದರ ಮುಂದೆ ಎರಡು ಕಂಬಗಳ ಸಹಾಯದಿಂದ ಮುಖಮಂಟಪದ ರಚನೆಯನ್ನು ಹೊಂದಿದೆ. ಅದರ ಮೇಲೆ ನಾಲ್ಕು ಕಂಬಗಳನ್ನೊಳಗೊಂಡ ಒಂದು ಅಂತಸ್ತಿನ ಶಿಲಾರಚನೆಯನ್ನು ಕಾಣಬಹುದು. ಈ ಶಿಲಾ ರಚನೆಯನ್ನು ಹೆಚ್ಚಾಗಿ ಚೋಳರ ಕಾಲದಲ್ಲಿ ಕಾಣಬಹುದು. ಈ ದೇವಾಲಯದಲ್ಲಿ ಚೋಳರ ಪ್ರಭಾವವು ಈ ರಚನೆಯಿಂದ ಸಾಬೀತಾಗಿರುತ್ತದೆ. ದೇವಾಲಯಗಳನ್ನು ನಿರ್ಮಿಸುವ ಹೊಸತರಲ್ಲಿ ವಿಜಯನಗರದ ಅರಸರು ಚೋಳರಿಂದ ಪ್ರಭಾವಿತರಾಗಿದ್ದರು ಎಂಬುದನ್ನು ನಾವು ಇಲ್ಲಿ ಸ್ಮರಿಸಬಹುದು. ದೇವಸ್ಥಾನವು ಮೊದಲಿಗೆ ಬಹಳ ದೊಡ್ಡದಾದ ಪ್ರಾಕಾರ ಹೊಂದಿರಬಹುದು. ಈಗ ಪ್ರಾಕಾರದ ಗೋಡೆ ಬಿದ್ದು ಹೋಗಿದೆ. ಪ್ರಾಕಾರದ ಮುಖ್ಯ ದ್ವಾರವು ಎಲ್ಲಿತ್ತು ಎಂಬುದು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ.

ಪ್ರಾಕಾರದ ಒಳಗಡೆಯಲ್ಲಿ ಒಂದು ನಂದಿ ಮಂಟಪವಿದೆ. ಇದರ ಮೇಲೆ ಶಿಖರವನ್ನು ಹೊಂದಿದೆ. ಶಿಖರದ ಮೇಲೆ ನಾಲ್ಕು ಕಡೆಯಲ್ಲಿ ಶಿವನ ವಾಹನವಾದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಅದರ

ಮೇಲೆ ಕಳಸವನ್ನು ಹೊಂದಿದೆ. ಈ ನಂದಿ ಮಂಟಪದ ಮುಂದೆ ಧ್ವಜ ಸ್ತಂಭವಿದೆ. ನಂದಿ ಮಂಟಪದ ಪಕ್ಕದಲ್ಲಿ ಒಂದು ತುಲಾಭಾರದ ಎರಡು ಶಿಲೆಗಳಿವೆ. ಈ ದೇವಸ್ಥಾನವು ಹಿಂದೆ ತೂಕದ ಕೇಂದ್ರಗಳಾಗಿಯೂ ಸಹ ಕಾರ್ಯನಿರ್ವಹಿಸುತ್ತಿದ್ದವು ಎಂಬುದನ್ನು ಸಾಬೀತುಪಡಿಸುತ್ತದೆ. ಈ ತೆರನಾದ ತುಲಾಭಾರವು ವಿಜಯನಗರದ ರಾಜಧಾನಿಯಾದ ಹಂಪೆಯಲ್ಲಿದೆ. ಅದು ಕೃಷ್ಣದೇವಸ್ಥಾನವಿರುವ ಕೃಷ್ಣಪೇಟೆಯಲ್ಲಿ ಕೃಷ್ಣನ ದೇವಸ್ಥಾನದ ಮುಂಭಾಗದಲ್ಲಿದೆ. ಅದು ಕೂಡ ಇದೇ ಕಾರ್ಯಕ್ಕೆ ಬಳಕೆಯಾಗಿರಬೇಕು. ಹೀಗೆ, ಇಡೀ ನಾಗಮಂಗಲದ ವೀರಭದ್ರ ದೇವಸ್ಥಾನವು ಒಂದು ವಿಜಯನಗರ ಶೈಲಿಯ ಸುಂದರ ದೇವಾಲಯವಾಗಿದೆ.

**ಅಮ್ಮನವರ ಸನ್ನಿಧಿ : (ಭದ್ರ ಕಾಳಿದೇವಾಲಯ)**

ವೀರಭದ್ರನ ದೇವಸ್ಥಾನಕ್ಕೆ ಹೊಂದಿಕೊಂಡಂತೆ ಈ ಭದ್ರಕಾಳಿಯ ದೇವಸ್ಥಾನವನ್ನು ನಿರ್ಮಿಸಲಾಗಿದೆ. ಭದ್ರಕಾಳಿ ದೇವಸ್ಥಾನದ ಅಂತರಾಳದಿಂದ ವೀರಭದ್ರನ ದೇವಸ್ಥಾನದ ಅಂತರಾಳಕ್ಕೆ ಪ್ರವೇಶ ಮಾರ್ಗವಿದೆ. ಇದು ಕೇವಲ ಅರ್ಚಕರಿಗಾಗಿ ಉಪಯೋಗವಾಗುವ ಮಾರ್ಗ. ದೇವಿಯ ಗರ್ಭಗೃಹವು ಚಚ್ಚೌಕಾರದಲ್ಲಿ ನಿರ್ಮಾಣಗೊಂಡಿದೆ. ಅಂತರಾಳವು ದೊಡ್ಡದಾಗಿದ್ದರೂ, ಎಡಬಲ ಬದಿಗಳಲ್ಲಿ ಕೋಣೆಗಳು ನಿರ್ಮಾಣ ಹೊಂದಿದ್ದರಿಂದ ನಡುವಿನ ಅಂತರಾಳದ ಪ್ರದೇಶವು ಆಯತಾಕಾರದಲ್ಲಿದೆ. ಗರ್ಭಗುಡಿಯಲ್ಲಿ ಮೂರು ಅಡಿ ಎತ್ತರದ ಭದ್ರಕಾಳಿಯು ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದಲ್ಲಿ ಒಂದು ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಅಂತರಾಳದ ಎಡಬಲ ಬದಿಗಳಲ್ಲಿ ಎರಡು ಚಿಕ್ಕ ಕೋಣೆಗಳಿಗೆ ಅಂತರಾಳದಲ್ಲಿರುವ ದ್ವಾರದ ಲಲಾಟ ಬಿಂಬದಲ್ಲಿ ಶಿವಪಾರ್ವತಿಯರಿದ್ದಾರೆ. ಲಲಾಟ ಬಿಂಬದ ಮೇಲೆ, ತ್ರಿಶೂಲ, ಓಂ ಮತ್ತು ಡಮರುಗಳನ್ನು ಹಿತ್ತಾಳೆಯಲ್ಲಿ ಕೆತ್ತಲಾಗಿದೆ. ಇದರ ಮುಂದಿನ ಭಾಗವೇ ನವರಂಗ. ನವರಂಗದಿಂದ ಅಂತರಾಳಕ್ಕೆ ಪ್ರವೇಶಿಸುವ ದ್ವಾರವು ಕೂಡ ಹಿತ್ತಾಳೆಯ ಕವಚವನ್ನು ಹೊಂದಿದೆ. ನವರಂಗವು ಒಟ್ಟು ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಲಾಗಿದ್ದು, ಆ ಕಂಬಗಳು ವಿಜಯನಗರ ಶೈಲಿಯಲ್ಲಿವೆ. ನವರಂಗವನ್ನು ಪ್ರವೇಶಿಸುವಲ್ಲಿ, ಎಡದ ಕಂಬದಲ್ಲಿ ಪೂರ್ವಕ್ಕೆ ಬೇಟೆಯಾಡುವ ಶಿವ, ಬೇಡರ ಕಣ್ಣಪ್ಪ, ಶಿವಲಿಂಗಕ್ಕೆ ಕಣ್ಣನ್ನು ಅರ್ಪಿಸುವ ಶಿಲ್ಪ, ಇನ್ನೊಂದು ಭಾಗದ ಶಿಲ್ಪಸ್ಪಷ್ಟವಾಗಿ ಕಾಣಿಸುವುದಿಲ್ಲ. ಇದೇ ಕಂಬದ ದಕ್ಷಿಣ ಭಾಗದಲ್ಲಿ ಶಿವನ ಎರಡು ಭಿನ್ನರೂಪಗಳನ್ನು ಕೆತ್ತಲಾಗಿದೆ. ಪಶ್ಚಿಮಕ್ಕೆ ವೀರಭದ್ರ ಮತ್ತು ಶಿವನ ಮೂರ್ತಿಗಳನ್ನು ಕೆತ್ತಲಾಗಿದೆ. ಬಲ ಭಾಗದಲ್ಲಿನ ಒಂದನೇಯ ಕಂಬದಲ್ಲಿ ಶಕ್ತಿ ಶಿವರನ್ನು ಉತ್ತರದಲ್ಲಿ ಗಣೇಶ ಮತ್ತು ದಕ್ಷಬ್ರಹ್ಮರನ್ನು ಪಶ್ಚಿಮದಲ್ಲಿ ಉಗ್ರ ರೂಪದ ಶಿವನನ್ನು, ಇನ್ನೊಂದು ಭಾಗದಲ್ಲಿ ಪಾರ್ವತಿ ಸಮೇತನಾದ ಶಿವನನ್ನು ಕೆತ್ತಲಾಗಿದೆ. ದಕ್ಷಿಣದಲ್ಲಿ ಶಿವ ಮತ್ತು ವೀರಭದ್ರರರ ವಿಗ್ರಹಗಳನ್ನು ಕೆತ್ತಲಾಗಿದೆ. ಎಡಭಾಗದ ಎರಡನೆಯ ಕಂಬದಲ್ಲಿ ಪೂರ್ವದಲ್ಲಿ ಗಣೇಶ, ಶಿವನು ರಾಕ್ಷಸ ಸಂಹಾರದ ದೃಶ್ಯ, ಶಿವಭಕ್ತನನ್ನು ಕೆತ್ತಲಾಗಿದೆ.

ಪಶ್ಚಿಮದಲ್ಲಿ ಶಿವಪೂಜೆಯನ್ನು ಮಾಡುತ್ತಿರುವ ಭಕ್ತನ ಚಿತ್ರವನ್ನು ಕೆತ್ತಲಾಗಿದೆ. ದಕ್ಷಿಣ ದಿಕ್ಕಿನಲ್ಲಿ ಶಿವನ ಬೇರೆ, ಬೇರೆ, ರೂಪಗಳನ್ನು ಕೆತ್ತಲಾಗಿದೆ. ಎಡಭಾಗ ಎರಡನೆಯ ಕಂಬದಲ್ಲಿ ಸಹ ಶಿವನ ವಿವಿಧ ರೂಪಗಳನ್ನು ಕೆತ್ತಲಾಗಿದೆ. ಇದೇ ನವರಂಗದಲ್ಲಿ ಮೈಸೂರಿನ ಮಹಾರಾಜರು ದೇವರ ಸೇವೆಗಾಗಿ ನೀಡಿದ ಮನೆ ಇದೆ. ಇದರಲ್ಲಿನ ಕುಸುರಿಯ ಕೆಲಸ ತುಂಬಾ ಸೂಕ್ಷ್ಮವಾಗಿದೆ. ಮುಂದಿನ ಭಾಗವೇ ಮಹಾರಂಗಮಂಟಪ. ಇದರ ಮುಂದಿನ ಭಾಗವನ್ನೆಲ್ಲ ಕಾಲಾನಂತರದಲ್ಲಿ ಹೊಸದಾಗಿ ರಚಿಸಲಾಗಿದೆ. ಮಹಾರಂಗಮಂಟಪದಲ್ಲಿ ವೀರಭದ್ರ ದೇವರಿಗೆ ರಥೋತ್ಸವದ ಸಂದರ್ಭದಲ್ಲಿ ದೇವರಿಗೆ ನಡೆಯುವ ಹನ್ನೊಂದು ಉತ್ಸವಗಳ ವಾಹನಗಳನ್ನು ಇಡಲಾಗಿದೆ. ಇವೆಲ್ಲ ಹಿತ್ತಾಳೆಯ ಶಿಲ್ಪಗಳಾಗಿವೆ. ಇವುಗಳಲ್ಲಿ ಆದಿಶೇಷ, ನವಿಲು, ನಂದಿ, ಆಂಜನೇಯ, ಆನೆ ಮುಂತಾದ ಶಿಲ್ಪಗಳು ಬೃಹದಾಕಾರದಲ್ಲಿವೆ(ಚಿತ್ರ ೨೫). ಈಗ ಈ ದೇವಾಲಯವನ್ನು ವೀರಭದ್ರನ ದೇವಾಲಯದ ಮುಖಮಂಟಪದವರೆಗೆ ಸಮನಾಗಿ ಕಟ್ಟಲಾಗಿದೆ.

### ೧೫. ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಸ್ಥಾನ

ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನಲ್ಲಿ ನಿಂಬಾಪುರ ಗ್ರಾಮವಿದೆ. ಈ ಗ್ರಾಮದಲ್ಲಿ ಸೌಮ್ಯ ಸೋಮೇಶ್ವರ ಎಂಬ ಶೈವ ದೇವಸ್ಥಾನವಿದೆ. ಈ ದೇವಾಲಯವು ಕ್ರಿ.ಶ.೧೪೫೦ರಲ್ಲಿ ನಿರ್ಮಾಣವಾದದ್ದು.[೨೫] ವಿಜಯನಗರ ಸಿಂಹಾಸನದಲ್ಲಿ ಪ್ರೌಢದೇವರಾಯನು ಆಳ್ವಿಕೆ ಮಾಡುತ್ತಿದ್ದ ಕಾಲದಲ್ಲಿ ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಸ್ಥಾನವು ನಿರ್ಮಾಣವಾಯಿತು. ಈ ಸೌಮ್ಯ ಸೋಮೇಶ್ವರ ದೇವರ ಪೂಜೆಗಾಗಿ ಗ್ರಾಮವೊಂದನ್ನು ರಾಜನು ದಾನ ನೀಡಿದ್ದನ್ನು ಶಾಸನವು ಉಲ್ಲೇಖಿಸಿದೆ. ಹಂಪೆಯ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟದಲ್ಲಿ ಈ ಶಾಸನದ ಕಾಲವನ್ನು ಪರಿಷ್ಕರಿಸಿ, ಶಾಸನದ ಕಾಲವನ್ನೂ ಕ್ರಿ.ಶ.೧೪೫೫ ಎಂದು ನಿಗದಿ ಮಾಡಲಾಗಿದೆ. ಇದರಿಂದಾಗಿ ದೇವಸ್ಥಾನವು ಕ್ರಿ.ಶ.೧೪೫೫ರಲ್ಲಿ ರಚನೆಗೊಂಡಿರಬೇಕು.

ವಿಶಾಲವಾದ ಪ್ರಾಕಾರದಲ್ಲಿ ದೇವಸ್ಥಾನವು ರಚನೆಗೊಂಡಿದೆ. ದೇವಸ್ಥಾನವನ್ನು ಪ್ರವೇಶಿಸುತ್ತಿದ್ದಂತೆ ದೀಪಸ್ತಂಭವು ಕಾಣಸಿಗುತ್ತವೆ. ದೀಪಸ್ತಂಭವು ದೇವಸ್ಥಾನದ ಎದುರಿನಲ್ಲಿ ನಿಲ್ಲಿಸಲಾಗಿದೆ. ಇದೇ ದೇವಸ್ಥಾನವನ್ನು ಪ್ರಾಕಾರದ ಗೋಡೆಯು ಸುತ್ತುವರೆದಿದೆ. ಪ್ರಾಕಾರವು ದಕ್ಷಿಣದಲ್ಲಿ ಮತ್ತು ಉತ್ತರದಲ್ಲಿ ಎರಡು ದ್ವಾರಗಳನ್ನು ಹೊಂದಿದೆ. ದೇವಸ್ಥಾನವು ಚಚ್ಚೌಕಾಕಾರದ ಗರ್ಭಗೃಹವನ್ನು ಹೊಂದಿದೆ. ಆಯಾತಾಕಾರದ ಅಂತರಾಳ ದೇವಸ್ಥಾನದಲ್ಲಿದೆ. ಚೌಕಾಕಾರದ ರಂಗಮಂಟಪವನ್ನು ಮತ್ತು ಇದು ಮೂರು ಬಾಗಿಲುಗಳನ್ನು ದೇವಸ್ಥಾನವು ಪಡೆದುಕೊಂಡಿದೆ.

ದೇವಸ್ಥಾನವು ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಅಧಿಷ್ಠಾನವು ಉಪಾನ ಜಗತಿ ತ್ರಿಪಟ್ಟ ಕುಮುದಗಳನ್ನೊಳಗೊಂಡಿದೆ. ಒಂದು ಸಣ್ಣದಾದ ಕಂಠ, ಅದರ ಮೇಲೆ ಪಟ್ಟಿಕೆಯನ್ನು ಕಂಟವನ್ನು




೧). ಗರ್ಭ ಗೃಹ ೨). ಅಂತರಾಳ ೩).ನವರಂಗ ಮಂಟಪ ೪) ರಾಯ ಗೋಪುರ .

೧೫). ನಿಂಬಾಪುರದ ಸೌಮ್ಯ ಸೋಮೇಶ್ವರ ದೇವಾಲಯದ ತಲನಕ್ಷೆ.

ಅಧಿಷ್ಠಾನವು ಒಳಗೊಂಡಿದೆ. ನವರಂಗದ ಭಿತ್ತಿಯು ಗೋಡೆಕಂಬಗಳನ್ನು ಹೊಂದಿದೆ. ಅಂತರಾಳದ ಭಿತ್ತಿಯಲ್ಲಿ ಉಬ್ಬು, ಕುಂಭ ಪಂಜರವನ್ನು ನಿರ್ಮಿಸಲಾಗಿದೆ. ಅದರಲ್ಲಿ ಕೂಡ ಒಂದೊಂದು ಅರ್ಧಕಂಬಗಳ ರಚನೆ ಕಾಣಬಹುದು. ಗರ್ಭಗೃಹದ ಮೂರು ದಿಕ್ಕುಗಳಾದ ಉತ್ತರ, ದಕ್ಷಿಣ ಮತ್ತು ಪಶ್ಚಿಮದಲ್ಲಿ ಕೋಷ್ಠವನ್ನು ಕಾಣಬಹುದು. ಕೋಷ್ಠಗಳ ಪಕ್ಕದಲ್ಲಿ ಅರ್ಧಕಂಬಗಳ ರಚನೆಯನ್ನು ಕಾಣಬಹುದು. ದೇವಸ್ಥಾನದ ಪ್ರಾಕಾರ ಭಾಗವು ಉತ್ತರ, ವಾಜನ, ವಲಭಿ ಕಪೋತಗಳನ್ನು ಒಳಗೊಂಡಿದೆ.

ಗರ್ಭಗೃಹದ ಮೇಲೆ ತ್ರಿತಲ ವಿಮಾನದ ರಚನೆಯು ಕಂಡುಬರುತ್ತಿದ್ದು, ಇದಕ್ಕೆ ಜಾತಿವಿಮಾನ ಎಂದು ಕರೆಯಲಾಗಿದೆ. ಗ್ರೀವದಲ್ಲಿ ನಾಲ್ಕು ದಿಕ್ಕಿನಲ್ಲಿ ಗ್ರೀವ ದೇವತೆಯನ್ನು ಪ್ರತಿಷ್ಠಾಪಿಸಲಾಗಿದೆ. ಇದು ಶೈವ ದೇವಸ್ಥಾನವಾದುದರಿಂದ ಶಿವನ ವಾಹನವಾದ ನಂದಿಯನ್ನು ಗ್ರೀವದಲ್ಲಿ ಪ್ರತಿಷ್ಠಾಪಿಸಲಾಗಿದೆ. ತುದಿಯಲ್ಲಿ ಕಲಶವನ್ನು ಪ್ರತಿಷ್ಠಾಪಿಸಿರಬೇಕು. ಈಗ ಅದು ಬಿದ್ದು ಹೋಗಿದೆ.

ರಂಗಮಂಟಪವು ಸರಳ ಕಂಬಗಳಿಂದ ರಚನೆಗೊಂಡಿದೆ. ರಂಗಮಂಟಪವನ್ನು ದಾಟಿ ಮುಂದೆ ನಡೆದರೆ ಸಿಗುವುದೇ ನವರಂಗ. ಇದು ಚಚ್ಚೌಕಾರದಲ್ಲಿ ರಚನೆಗೊಂಡಿದ್ದು, ನಾಲ್ಕು ಸ್ತಂಭಗಳ ಸಹಾಯದಿಂದ ನಿರ್ಮಾಣಗೊಂಡಿದೆ. ಅಂತರಾಳವು ಆಯತಾಕಾರದಲ್ಲಿ ನಿರ್ಮಾಣಗೊಂಡಿದೆ. ಗರ್ಭಗೃಹವು ಸೋಮೇಶ್ವರ ಲಿಂಗವನ್ನು ಹೊಂದಿದೆ. ಶಿವಲಿಂಗವು ಸುಮಾರು ನಾಲ್ಕಡಿಗಳಷ್ಟು ಎತ್ತರವನ್ನು ಹೊಂದಿದೆ.

ಹೀಗೆ ವಿಜಯನಗರದ ಪಕ್ಕದಲ್ಲೇ ರಚನೆಗೊಂಡ ದೇವಸ್ಥಾನವು ಅದೇ ವಿಜಯನಗರದ ದ್ರಾವಿಡ ಶೈಲಿಯಲ್ಲೇ ನಿರ್ಮಾಣಗೊಂಡಿದೆ. ಅತ್ಯಂತ ವೈಭವದಿಂದ ಪೂಜೆಗೊಂಡಿದ್ದ ಈ ದೇವಸ್ಥಾನವು ಬಹಳಷ್ಟು ಹಾಳಾಗುವ ಸ್ಥಿತಿಯಲ್ಲಿದೆ.

## ೧೬. ಯಳಂದೂರಿನ ಗೌರೇಶ್ವರ ದೇವಸ್ಥಾನ

ಯಳಂದೂರು ಒಂದು ತಾಲೂಕುಕೇಂದ್ರ. ವಿಜಯನಗರ ಕಾಲದಲ್ಲಿ ಯಳಂದೂರನ್ನು ಹದಿನಾಡಿನ ಪಾಳೆಯಗಾರರು ಎಂಬ ಪ್ರಾಂತೀಯ ಅರಸರು ಆಳ್ವಿಕೆ ನಡೆಸುತ್ತಿದ್ದರು. ಯಳಂದೂರು ಹದಿನಾಡಿನ ರಾಜಧಾನಿಯಾಗಿತ್ತು.[೨೪] ಯಳಂದೂರಿನ ಹದಿನಾಡಿನ ಪಾಳೆಯಗಾರರು ವೀರಶೈವ ಧರ್ಮಕ್ಕೆ ವಿಶೇಷ ಪ್ರಾಧಾನ್ಯತೆಯನ್ನು ಕೊಟ್ಟರೂ, ಇತರೆ ಎಲ್ಲಾ ಧರ್ಮಗಳಿಗೂ ಆಶ್ರಯ ನೀಡಿದರು. ಉತ್ತರದಲ್ಲಿ ಪ್ರಬಲವಾಗಿ ಬೇರುಬಿಟ್ಟಿದ್ದ ವೀರಶೈವ ದಕ್ಷಿಣ ಕರ್ನಾಟಕದಲ್ಲಿ ಬೇರೂರಲು ಈ ಹದಿನಾಡಿನ ಪಾಳೆಗಾರರು ಸಾಕಷ್ಟು ಶ್ರಮಿಸಿದರು.

ಹದಿನಾಡಿನ ಪಾಳೆಗಾರರ ಮೊದಲ ದೊರೆಯಾದ ದೇವಪ್ಪಗೌಡನ ಕಾಲದಲ್ಲಿ ಯಳಂದೂರಿನಲ್ಲಿ ಗೌರೀಶ್ವರ ದೇವಸ್ಥಾನವು ನಿರ್ಮಿಸಲಾಯಿತು.[೨೫] ಈತನ ಮಗನಾದ ಚಾಮರಸ ಒಡೆಯನು ಈ ದೇವಸ್ಥಾನಕ್ಕೆ ಕೊಡುಗೆ ನೀಡಿದನು. ಹದಿನಾಡಿನ ಪಾಳೆಯಾಗಾರರಲ್ಲಿ ಒಬ್ಬನಾದ ರಾಮನೃಪಾಲನು ಈ ದೇವಾಲಯಕ್ಕೆ ಗಾಣಿಗನೂರು ಗ್ರಾಮವನ್ನು ದತ್ತಿಯಾಗಿ ಬಿಟ್ಟನು. ತಿರುಮಲ ನಾಯಕನು ಬಾದಿರಾಜಪುರ




೧). ಗರ್ಭ ಗೃಹ ೨).ಅಂತರಾಳ ೩).ಮಹಾರಂಗ ಮಂಟಪ ೪).ಮುಖ ಮಂಟಪ

೧೬). ಯಳಂದೂರಿನ ಗೌರಿಶ್ವರ ದೇವಸ್ಥಾನದ ತಲನಕ್ಷೆ.

ಸೇನು ಗುಂಡಲ ಮತ್ತು ಬೆಂಚನಪುರ ಎಂಬ ಗ್ರಾಮಗಳನ್ನು ದತ್ತಿಯಾಗಿ ನೀಡಿದ್ದನು. ಮುಂದೆ ಬಂದಂತೆ ಮುದ್ದುರಾಜನ ಕಾಲದಲ್ಲಿ ಗೋಪುರವನ್ನೂ "ಮಂಟಪ" ಗುಡಿಗಳನ್ನು ಕಟ್ಟಿಸಿ ಈ ದೇವಸ್ಥಾನದಲ್ಲಿ ಪಂಚಲಿಂಗೇಶ್ವರರನ್ನು ಪ್ರತಿಷ್ಠಾಪನೆ ಮಾಡಿಸಿದನು.

ಹದಿನಾಡಿನ ಪಾಳೆಗಾರರು ವಾಸ್ತುಶಿಲ್ಪಕ್ಕೆ ನೀಡಿದ ಕೊಡುಗೆ ಅಪಾರವಾದದ್ದು. ಇವರ ಕಾಲದ ದೇವಾಲಯಗಳು, ಗಾತ್ರದಲ್ಲಿ ಸಣ್ಣದಾದರೂ ಕಲೆಯ ದೃಷ್ಟಿಯಿಂದ ಸುಂದರವಾಗಿವೆ. ಯಳಂದೂರಿನಲ್ಲಿ ವಿಜಯನಗರ ಕಾಲದಲ್ಲಿ ನಿರ್ಮಾಣವಾದ

೧. ಚನ್ನಿಗರಾಯಸ್ವಾಮಿ ೨. ಬಸವಣ್ಣ ೩. ಕೆಂಪಮ್ಮ ೪. ಚೌಡೇಶ್ವರಿ ೫. ಗೌರೀಶ್ವರಿ ೬. ಮಾರಮ್ಮ ೭. ಗೌರೀಶ್ವರ ೮. ಮಂಟೇಸ್ವಾಮಿ ಗದ್ದಿಗೆ ಎಂಬ ದೇವಸ್ಥಾನಗಳನ್ನು ಕಾಣಬಹುದು. ಇವುಗಳಲ್ಲೆ ಗೌರಿದೇವಸ್ಥಾನದ ಕಲಾ ಸೌಂದರ್ಯ, ಶ್ರೀಮಂತಿಕೆಯಿಂದ ಕೂಡಿದೆ. ಈ ಮೇಲಿನ ಎಲ್ಲಾ ದೇವಸ್ಥಾನಗಳಲ್ಲಿ ಚನ್ನಿಗರಾಯಸ್ವಾಮಿ ಮತ್ತು ಗೌರೀಶ್ವರ ದೇವಾಲಯಗಳು ಶಿಷ್ಟ ಸಂಸ್ಕೃತಿಯ ಪ್ರತೀಕವಾಗಿವೆ.

ಎಳಂದೂರಿನ ಗೌರೀಶ್ವರ ದೇವಸ್ಥಾನವು. ಅತ್ಯಂತ ಪ್ರಸಿದ್ಧವಾದ ದೇವಸ್ಥಾನವಾಗಿದೆ. ದೇವಸ್ಥಾನದಲ್ಲಿ ದೊರೆತ ಶಾಸನದ ಪ್ರಾಕಾರ ವಿಜಯನಗರದ ಸಾಮಂತ ಅರಸನಾದ ಮುದ್ದುಭೂಪರಾಜನು ಇದರ ಮುಖ್ಯ ದ್ವಾರವನ್ನು ಗೋಪುರವನ್ನು ಕಟ್ಟಿಸಿದನು. ಎಳಂದೂರಿನ ಗೌರೀಶ್ವರ ದೇವಸ್ಥಾನದ ಈ ದ್ವಾರಗೋಪುರವು ಅತ್ಯಂತ ಸುಂದರವಾದದ್ದು. ಈಗ ದ್ವಾರಮಂಟಪ ಮಾತ್ರ ಉಳಿದುಕೊಂಡಿದ್ದು, ಮೇಲಿನ ಗೋಪುರವು ಸಂಪೂರ್ಣವಾಗಿ ಹಾಳಾಗಿದೆ. ಈ ದ್ವಾರಮಂಟಪದ ಶಿಲ್ಪಕಲಾ ಸೌಂದರ್ಯವು ನೋಡುಗರನ್ನು ಆಕರ್ಷಿಸುತ್ತದೆ. ಇದರಲ್ಲಿ ಪ್ರಸ್ತಾರಭಾಗದಲ್ಲಿ ಇಳಿಬಿದ್ದ ಕಲ್ಲಿನ ಸರಪಳಿಯು ಅತ್ಯಂತ ಸೂಕ್ಷ್ಮವಾದ ಕಲಾ ಸಿರಿವಂತಿಕೆಯನ್ನು ಹೊಂದಿದೆ. ಈ ದ್ವಾರಮಂಟಪ ತುಂಬೆಲ್ಲಾ ರಚನೆಯಾದ ಮೂರ್ತಿಗಳ ಅಂಗ ಪೌಷ್ಠವವು ಅತ್ಯಂತ ನಿಖರವಾಗಿ ಮೂಡಿ ಬಂದಿವೆ. ಈ ದ್ವಾರದಲ್ಲಿ ಉಮಾಮಹೇಶ್ವರ ಮತ್ತು ವಿಷ್ಣುವಿನ ವಿಗ್ರಹಗಳು ಸುಂದರವಾಗಿ ರಚನೆಗೊಂಡಿವೆ. ಇಡೀ ದ್ವಾರಮಂಟಪವು ಎತ್ತರವಾದ ಅಧಿಷ್ಠಾನದ ಮೇಲೆ ನಿಂತಿದೆ. ದ್ವಾರದ ಭಿತ್ತಿಯಲ್ಲಿ ನರ್ತಕ, ಗಾಯಕರ, ಉಮಾ ಮಹೇಶ್ವರ, ಯಕ್ಷಯಜ್ಞ ಶಿಲ್ಪಗಳಿವೆ. ದ್ವಾರ ಮಂಟಪದ ದಕ್ಷಿಣದ ಭಿತ್ತಿಯ ಮೇಲೆ ವಿಷ್ಣು, ಶಿವಮೂರ್ತಿಗಳನ್ನು ಕೆತ್ತಲಾಗಿದೆ. ಶಿವನ ಸುತ್ತಲೂ ನಾಲ್ಕು ಋಷಿಮುನಿಗಳು ಶಿವನನ್ನು ಆರಾಧಿಸುವ ದೃಶ್ಯವನ್ನು ಕೆತ್ತಲಾಗಿದೆ.

ದ್ವಾರಮಂಟಪದ ಪೂರ್ವದಲ್ಲಿ ಪ್ರವೇಶದ್ವಾರವಿದೆ. ದ್ವಾರದ ಲಲಾಟಬಿಂಬದಲ್ಲಿ ಶಿವಪಾರ್ವತಿಯರ ಚಿತ್ರಗಳನ್ನು ಕೆತ್ತಲಾಗಿದೆ. ದ್ವಾರದ ಪಕ್ಕಭಿತ್ತಿಯಲ್ಲಿ ನಂದಿ, ಶಿವಭಕ್ತರು ಶಿವನ ಒಡ್ಡೋಲಗದಲ್ಲಿ ಆಸೀನರಾದ ದೃಶ್ಯವಿದೆ. ಮಂಟಪದ ಎಡಬಲಗಳಲ್ಲಿ ನೃತ್ಯಗಾರರು, ವಾದ್ಯವೃಂದದವರು ಇದ್ದಾರೆ.

ಮಂಟಪದ ಉತ್ತರ ದಿಕ್ಕಿನಲ್ಲಿ ಮದನಿಕೆಯ ಚಿತ್ರವಿದೆ. ಅದರಲ್ಲೆ ಗಣೇಶ ಲಕ್ಷ್ಮೀಯರ ಮೂರ್ತಿ ಕೆತ್ತಲಾಗಿದೆ. ದ್ವಾರದ ಪಶ್ಚಿಮದಲ್ಲಿ ವೀರಭದ್ರ ದುರ್ಗೆಯ ಚಿತ್ರಗಳನ್ನು ಕೆತ್ತಲಾಗಿದು, ಇವು ಇಡೀ

ಮಂಟಪದ ಕಲೆಯನ್ನು ಹೆಚ್ಚಿಸಿವೆ. ಈ ದ್ವಾರಮಂಟಪವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಅಂದಿನ ಕಾಲದ ಉಡುಗೆ, ಆಭರಣಗಳ, ಸಂಗೀತ ವಾದ್ಯಗಳು ಮತ್ತು ಇತರೆ ಅಂಶಗಳ ಬಗೆಗೆ ವಿಶೇಷ ಮಾಹಿತಿ ದೊರಕುತ್ತವೆ. ಅಲ್ಲಲ್ಲಿ ನಡುವೆ ಪ್ರಾಣಿಗಳ ಮೂರ್ತಿಗಳನ್ನು ಕೆತ್ತಲಾಗಿದೆ. ಹಣ್ಣು ತಿನ್ನುತ್ತಿರುವ ಒಂದು ಕೋತಿಯ ವಿಗ್ರಹ ಬಹಳ ಸೊಗಸಾಗಿದೆ. ಈ ದ್ವಾರಮಂಟಪದ ಪ್ರಸ್ತಾರದ ಮೇಲಿನ ಭಾಗದಲ್ಲಿ ಸಿಂಹದ ಮುಖಗಳನ್ನು ಚಿತ್ರಿಸಲಾಗಿದೆ. ಅದರಲ್ಲೇ ಅಲ್ಲಲ್ಲಿ ಚಿತ್ರಪಟ್ಟಿಕೆಗಳನ್ನು ಸಹ ನಿರ್ಮಿಸಲಾಗಿದೆ. ಹೀಗೆ ಇಡೀ ದ್ವಾರಮಂಟಪ ಒಂದು ಶಿಲ್ಪಕಲೆಯ ಶ್ರೇಷ್ಠತೆಯಿಂದ ಕಂಗೊಳಿಸುತ್ತಿದೆ.

ಗೌರೀಶ್ವರ ದೇವಸ್ಥಾನವು ವಿಜಯನಗರ ಶೈಲಿಯ ನಿರ್ಮಾಣವಾದ ದೇವಸ್ಥಾನ ಪೂರ್ವಕ್ಕೆ ಮುಖಮಾಡಿರುವ ದೇವಸ್ಥಾನವು ದ್ರಾವಿಡಶೈಲಿಯಲ್ಲಿ ರಚನೆಗೊಂಡಿದೆ. ದೇವಾಲಯದಲ್ಲಿ ಪ್ರಥಮವಾಗಿ ಸಿಗುವುದೇ ಇಪ್ಪತ್ತೆರಡು ಕಂಬಗಳಿಂದ ಕೂಡಿದ ಮಹಾರಂಗಮಂಟಪ. ಇದು ನಕ್ಷತ್ರಾಕಾರದಲ್ಲಿ ರಚನೆಗೊಂಡಿದೆ. ಇದರಲ್ಲಿನ ಕಂಬಗಳು ವಿಜಯನಗರದ ಸರಳಕಂಬಗಳಂತೆ ರಚನೆಗೋಂಡಿವೆ. ಈ ಮಹಾರಂಗಮಂಟಪ ವಿವಿಧ ಕಂಬಗಳಲ್ಲಿ ನಾಗಶಿಲ್ಪದ ವಿವಿಧ ರೂಪಗಳನ್ನು ಕೆತ್ತಲಾಗಿದೆ(ಚಿತ್ರ ೨೬).

ಲಕ್ಷ್ಮಿಯ ವಿಗ್ರಹ, ಬೇಡರ ಕಣ್ಣಪ್ಪನ ವಿಗ್ರಹ, ಉಗ್ರಶಿವನ ರೂಪ. ನಂದಿಶಿಲ್ಪ, ರಾಕ್ಷಸನನ್ನು ಸಂಹರಿಸುವ ಶಿವನ ಶಿಲ್ಪ, ಡೊಳ್ಳು ಬಡಿಯುವ ವಾದ್ಯಗಾರನ ಚಿತ್ರ. ಮದನಿಕೆಯರು ಕಾರ್ತಿಕೇಯನು ನವಿಲು ವಾಹನವನ್ನು ಹೊಂದಿ, ಶಿಲ್ಪವು ಅತೀ ಸುಂದರವಾಗಿ ಮೂಡಿಬಂದಿದೆ. ಇದಕ್ಕೆ ಹತ್ತು ಕೈಗಳನ್ನು ಕೆತ್ತಲಾಗಿದೆ. ಇದೇ ಮಹಾರಂಗ ಮಂಟಪದಲ್ಲಿ ಶಿವನನ್ನು ಪೂಜೆ ಮಾಡುತ್ತಿರುವ ಆಂಜನೇಯನ ಚಿತ್ರವನ್ನು ಕಾಣಬಹುದು. ನಕ್ಷತ್ರಾಕಾರದ ರಂಗಮಂಟಪವನ್ನೇರಲು ಸಿಂಹವ್ಯಾಳಿಸೋಪಾನವನ್ನು ಕಾಣಬಹುದು. ಅರ್ಧಸಿಂಹಗಳು ಸೋಪಾನವನ್ನು ಕಾಣಬಹುದು. ಅರ್ಧಸಿಂಹಗಳು ನೆಲದಲ್ಲಿ ಹೂತುಹೋಗಿದೆ. ದೇವಸ್ಥಾನದ ಈ ಮಂಟಪದ ಕಂಬಗಳು ಒಂದಕ್ಕಿಂತ ಇನ್ನೊಂದು ಭಿನ್ನಭಿನ್ನವಾಗಿವೆ.

ದೇವಸ್ಥಾನದ ಗರ್ಭಗೃಹದಲ್ಲಿ ಶಿವಲಿಂಗವಿದೆ. ಇದೇ ದೇವಸ್ಥಾನದಲ್ಲಿರುವ ಭೈರವನ ವಿಗ್ರಹವಿದೆ. ವೆಂಕಟೇಶ್ವರನ ವಿಗ್ರವು ಶೈವ, ವೈಷ್ಣವರ ಸಾಮಾರಸ್ಯದ ಸಂಖ್ಯೇತವಾಗುತ್ತದೆ. ಅಲ್ಲದೆ ಪಕ್ಕದ ತಿರುಪತಿಯ ಪ್ರಭಾವವನ್ನು ಸೂಚಿಸುತ್ತದೆ. ವೀರಭದ್ರ ದಕ್ಷಯಜ್ಞ ಅರ್ಧನಾರೀಶ್ವರ, ರತಿ-ಮನ್ಮಥ, ಋಷಿಗಳು ಇತ್ಯಾದಿ ಮೂರ್ತಿಗಳನ್ನು ಕಾಣಬಹುದು.

ಪಂಚಲಿಂಗೇಶ್ವರ ಗೌರಿಶ್ವರ ದೇವಸ್ಥಾನದ ಹಿಂಬದಿಯಲ್ಲಿ ಪಂಚಲಿಂಗಗಳಿಂದ ಕೂಡಿದ ಪಂಚಲಿಂಗೇಶ್ವರ ದೇವಸ್ಥಾನಗಳನ್ನು ಕಾಣಬಹುದು. ಒಂದೇ ಸಾಲಿನಲ್ಲಿ ಪಕ್ಕಪಕ್ಕದಲ್ಲಿ ಐದು ಗರ್ಭಗೃಹಗಳನ್ನೊಳಗೊಂಡಿರುವ ಈ ಐದೂ ಗರ್ಭಗೃಹದಲ್ಲಿ ಐದು ಶಿವಲಿಂಗಗಳನ್ನು ಕಾಣಬಹುದು. ಈ ಗರ್ಭಗೃಹದ ಮುಂದಿರುವ ಸಾಲುಮಂಟಪವು ಆರು ಪೂರ್ಣ ಕಂಬಗಳನ್ನು ಮತ್ತು ಆರು ಗೋಡೆ ಕಂಬಗಳನ್ನು ಒಳಗೊಂಡಿದೆ.

ಪೂರ್ಣ ಕಂಬಗಳು ಮೂರು ಚಚ್ಚೌಕಾರದ ರಚನೆ ಹೊಂದಿದ್ದು ಮೇಲೆ ಬೋದಿಗೆ ಪದ್ಮಲಂಕರಣವನ್ನು ಹೊಂದಿದೆ. ಕಂಬಗಳ ಮೂರು ಭಾಗದಲ್ಲಿ ಪದ್ಮಚಿತ್ರಗಳನ್ನು ಕೆತ್ತಲಾಗಿದೆ. ಗರ್ಭಗೃಹದಲ್ಲಿರುವ ಐದು ಲಿಂಗಗಳ ಹೆಸರನ್ನು

೧. ಮಲ್ಲಿಕಾರ್ಜುನೇಶ್ವರ

೨. ಜಂಬುನಾಥೇಶ್ವರ

೩. ಅರುಣಾಚಲೇಶ್ವರ

೪. ತಾರಕೇಶ್ವರ

೫. ಚಿದಂಬರೇಶ್ವರ

ಎಂದು ಕರೆಯಲಾಗುತ್ತದೆ. ಇವೆಲ್ಲ ಐದು ಆರು ಅಡಿ ಎತ್ತರದ ಶಿವಲಿಂಗಗಳಾಗಿವೆ.

**ಅಮ್ಮನವರ ಸನ್ನಧಿ**

ಗೌರೀಶ್ವರ ದೇವಸ್ಥಾನದ ಎಡಬದಿಯಲ್ಲಿ ಅಮ್ಮನವರ ಸನ್ನಿಧಿಯನ್ನು ಕಾಣಬಹುದು. ಅಮ್ಮನವರ ಸನ್ನಿಧಿಯ ಮುಖಮಂಟಪವು ಎಂಟು ಕಂಬಗಳನ್ನು ಒಳಗೊಂಡಿದೆ. ಇದರಲ್ಲಿ ಇವನ ವಿವಿಧ ರೂಪಗಳ ಮೂರ್ತಿಗಳನ್ನು ಕೆತ್ತಲಾಗಿದೆ. ಈ ಮಂಟಪಕ್ಕೆ ಪೂರ್ವದಲ್ಲಿ ಸೋಪಾನವನ್ನು ರಚಿಸಲಾಗಿದೆ. ಗೌರೀಶ್ವರ ದೇವಸ್ಥಾನದ ರಚನೆಯ ಕಾಲದಲ್ಲೇ ಈ ದೇವಸ್ಥಾನದ ರಚನೆಯಾಗಿದೆ. ದೇವಾಲಯದ ಗರ್ಭಗುಡಿಯಲ್ಲಿ ಗೌರಿಯ ವಿಗ್ರಹವನ್ನು ಕೆತ್ತಲಾಗಿದೆ. ಗೌರಿಯ ವಿಗ್ರಹವು ಮೂರಡಿ ಎತ್ತರವಾಗಿದ್ದು, ಕಪ್ಪು ಶಿಲೆಯಲ್ಲಿ ನಿರ್ಮಾಣಗೊಂಡಿದೆ.

ಗೌರೀಶ್ವರ ದೇವಸ್ಥಾನದ ಬಲ ಬದಿಯಲ್ಲಿ ಒಂದು ಶಿಲಾಶಾಸನವಿದೆ. ಮೇಲೆ ಸಿಂಹದ ಮುಖವನ್ನು ಹೊಂದಿರುವ ಈ ಶಿಲಾಶಾಸನವು ಕರ್ನಾಟಕದ ಶಾಸನಗಳಲ್ಲೇ ಸುಂದರ ಶಿಲಾಶಾಸನಗಳಲ್ಲೊಂದು. ವಿಜಯನಗರದ ಶಿಲಾಶಾಸನಗಳು ಹೆಚ್ಚಾಗಿ ಒರಟುಗಲ್ಲಿನಲ್ಲೇ ರಚಿತವಾಗುತ್ತಿದ್ದವು. ಬೆಣಚು ಕಲ್ಲಿನಲ್ಲಿ ಶಿಲಾಶಾಸನಗಳನ್ನು ರಚಿಸುತ್ತಿದ್ದರಿಂದ ಅಲ್ಲಿ ಸೂಕ್ಷ್ಮ ಕೆತ್ತನೆಗೆ ಅವಕಾಶ ಕಡಿಮೆ. ಹಾಗಾಗಿ ಒರಟು ಕಲ್ಲಿನಲ್ಲೇ ಶಿಲಾಶಾಸನಗಳು ರಚನೆಗೊಳ್ಳುತ್ತಿದ್ದವು. ಇದರಿಂದ ಶಾಸನಗಳ ಅಲಂಕಾರ ಕಡಿಮೆಯಾಯಿತು ಎಂದು ವಿದ್ವಾಂಸರ ಅಭಿಪ್ರಾಯಕ್ಕೆ ವಿರುದ್ಧವಾಗಿ ಈ ಹದಿನಾರು ಪಾಳೆಗಾರರು ಬಹಳ ಸುಂದರವಾದ ಮತ್ತು ಸ್ಫುಟವಾಗಿ ಬರೆದ ಈ ಶಾಸನವನ್ನು ಹಾಕಿಸಿದ್ದಾರೆ(ಚಿತ್ರ ೨೭). ಇದೇ ರೀತಿಯಲ್ಲಿ ಬಯಕಾರ ರಾಮಪ್ಪಯ್ಯನು ತಿಮ್ಮಲಾಪುರದ ಶಾಸನಗಳು ಹೆಚ್ಚು ಅಲಂಕಾರಗಳಿಲ್ಲದಿದ್ದರೂ ಸ್ಪಷ್ಟಶಾಸನವನ್ನು ಕಾಣಬಹುದು. ಒಟ್ಟಾರೆಯಾಗಿ ವಿಜಯನಗರ ಕಾಲದಲ್ಲಿ ರಚನೆಗೊಂಡ ಶಾಸನಗಳೆಲ್ಲ ಅತ್ಯಂತ ಅಲಂಕೃತವಾದ ಶಾಸನವೆಂದರೆ, ಈ ಗೌರೀಶ್ವರದೇವಸ್ಥಾನ ಆವರಣದಲ್ಲಿರುವ ಶಾಸನವಾಗಿದೆ ಎಂದು ಹೇಳಬಹುದು.

ಹೀಗೆ ದೇವಸ್ಥಾನ, ಅಮ್ಮನವರ ಸನ್ನಿಧಿ ಪಂಚಲಿಂಗೇಶ್ವರನ ಸನ್ನಿಧಿ, ಶಾಸನಗಳನ್ನು ಹೊಂದಿರುವ ಗೌರೀಶ್ವರ ದೇವಸ್ಥಾನವು ಒಂದು ವಿಶಾಲವಾದ ಪ್ರಾಕಾರವನ್ನು ಹೊಂದಿರಬೇಕು. ಈಗ ಪ್ರಾಕಾರವೆಲ್ಲ ಹಾಳಾಗಿ ಸುಂದರವಾದ ಪೂರ್ವದ ದ್ವಾರಮಂಟಪ ಮಾತ್ರ ನೋಡುಗರನ್ನು ತನ್ನತ್ತ ಆಕರ್ಷಿಸುತ್ತಿದೆ

## ೧೭. ಸಿಂಧುವಳ್ಳಿಯ ಸೋಮೇಶ್ವರ ದೇವಸ್ಥಾನ

ಸಿಂಧುವಳ್ಳಿಯ ಉತ್ತರಕ್ಕೆ ಒಂದು ಕಿ.ಮೀ. ದೂರದಲ್ಲಿ ಸೋಮೇಶ್ವರ ದೇವಸ್ಥಾನವಿದೆ. ಸಿಂಧುವಳ್ಳಿಯಲ್ಲಿ ಈ ಸೋಮೇಶ್ವರ ದೇವಸ್ಥಾನ ತೋಟಗದ್ದೆಗಳ ಸುಂದರ ಪ್ರಕೃತಿಯ ಮಧ್ಯದಲ್ಲಿದೆ. ದೇವಾಲಯವು ಪೂರ್ವಾಭಿಮುಖವಾಗಿದೆ. ದೇವಸ್ಥಾನವು ಗರ್ಭಗೃಹ, ಅಂತರಾಳ, ನವರಂಗಗಳನ್ನು ಒಳಗೊಂಡಿದೆ.

ದೇವಾಲಯದ ಮುಖಮಂಟಪವು ನಾಲ್ಕು ಗೋಡೆ ಕಂಬಗಳನ್ನು ಹೊಂದಿದೆ. ನಾಲ್ಕು ಪೂರ್ಣಕಂಬಗಳನ್ನು ಹೊಂದಿದೆ. ಹೀಗೆ ಮುಖಮಂಟಪವು ಒಟ್ಟು ಎಂಟು ಕಂಬಗಳನ್ನು ಹೊಂದಿದೆ. ನವರಂಗಕ್ಕೆ ಹೋಗುವ ದ್ವಾರದ ಹತ್ತಿರವಿರುವ ಮಧ್ಯದ ಪಾದ ಭಾಗದಲ್ಲಿ ಚಚ್ಚೌಕಾರವಾಗಿವೆ. ಕಂಬಗಳ, ಮೇಲಿನ ಭಾಗಗಳೆಲ್ಲ ದುಂಡಾಗಿವೆ. ಕೊನೆಯ ಕಂಬಗಳು ಮೂರು ಭಾಗಗಳಿವೆ. ಹನ್ನೆರಡು ಚೌಕಗಳನ್ನು ಹೊಂದಿವೆ. ಗೋಡೆ ಕಂಬಗಳು ಸರಳವಾದ ರಚನೆಯನ್ನು ಹೊಂದಿವೆ.

ಸೋಮೇಶ್ವರ ದೇವಾಲಯದಲ್ಲಿ ಮುಚ್ಚಿದ ನವರಂಗವಿದೆ. ನವರಂಗವು ನಾಲ್ಕು ಕಂಬಗಳನ್ನು ಹೊಂದಿದೆ. ಮುಖಮಂಟಪದಿಂದ ನವರಂಗಕ್ಕೆ ಪ್ರವೇಶಿಸುವ ದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿಯ ವಿಗ್ರಹವಿದೆ. ನವರಂಗದಲ್ಲಿರುವ ಪೂರ್ಣವಾದ ಕಂಬಗಳು ಪಾದಭಾಗದಲ್ಲಿ ಮಾತ್ರ ಚೌಕಾರ ಹೊಂದಿದೆ. ಕಂಬಗಳ ಮೇಲಿರುವ ಬೋದಿಗೆಗಳು ತೀರ ಸರಳವಾದ ರಚನೆಯನ್ನು ಹೊಂದಿವೆ. ನವರಂಗದಲ್ಲಿ ಮೂರು ನಂದಿಗಳನ್ನು ಪ್ರತಿಷ್ಠಾಪಿಸಲಾಗಿದೆ. ಒಂದೊಂದು ನಂದಿಯು ಕೂಡ, ಒಂದಕ್ಕಿಂತ ಇನ್ನೊಂದು ಚಿಕ್ಕದಾಗಿವೆ. ಈ ಎಲ್ಲಾ ನಂದಿಗಳು ಸೋಮೇಶ್ವರನ ಲಿಂಗದ ಎದುರಿನಲ್ಲಿ ಪ್ರತಿಷ್ಠಾಪಿಸಲಾಗಿದೆ. ಅಂತರಾಳವು ನವರಂಗಕ್ಕಿಂತ ಚಿಕ್ಕದಾಗಿದೆ. ಗರ್ಭಗೃಹವು ಚಚ್ಚೌಕಾಕಾರದಲ್ಲಿದೆ. ದೇವಸ್ಥಾನದ ಗರ್ಭಗೃಹದ ಒಳಭಿತ್ತಿಯು ಒರಟಾಗಿದೆ. ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ಸೋಮೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಶಿವಲಿಂಗವು ಪಾಣಿಪೀಠ ಮತ್ತು ಲಿಂಗಗಳನ್ನು ಹೊಂದಿದೆ. ಅಭಿಷೇಕದ ನೀರು ಉತ್ತರಕ್ಕೆ ಹರಿಯುವಂತೆ ಏರ್ಪಾಡು ಮಾಡಲಾಗಿದೆ(ಚಿತ್ರ ೨೮).

ಮುಖಮಂಟಪದ ಎಡಭಾಗದಲ್ಲಿ ವಿಜಯನಗರ ಕಾಲದ ಶಿಲಾಶಾಸನವಿದೆ.[೨೬] ದೇವಾಲಯದ ಮುಂದೆ ಬಲಿಪೀಠವಿದೆ. ದೇವಸ್ಥಾನ ಉಪಾನ ಅಧಿಷ್ಠಾನದ ಭಾಗಗಳೆಲ್ಲ ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತು ಹೋಗಿವೆ. ಭಿತ್ತಿಯು ಕೂಡ ಸರಳ ರಚನೆಯನ್ನು ಹೊಂದಿದೆ. ಈ ಭಿತ್ತಿಯಲ್ಲಿ ಯಾವ




೧). ಗರ್ಭ ಗೃಹ ೨). ಅಂತರಾಳ ೩).ನವರಂಗ ೪) ಮಹಾರಂಗ ಮಂಟಪ

೧೭. ಸಿಂಧುವಳ್ಳಿಯ ಸೋಮೇಶ್ವರ ದೇವಾಲಯದ ತಲನಕ್ಷೆ.

ಕಡೆಯಲ್ಲಿ ಕುಡ್ಯಸ್ತಂಭಗಳು ಕಂಡುಬರುವುದಿಲ್ಲ. ಕೋಷ್ಠಕಗಳು ಕಂಡುಬರುವುದಿಲ್ಲ. ಪ್ರಾಸ್ತಾರ ಭಾಗದಲ್ಲಿ ಭಾಗ ಮುಂಚಾಚಿದೆ. ಉಳಿದಂತೆ ಸರಳವಾದ ರಚನೆ ಕಂಡುಬರುವುದು.

ಇದೇ ದೇವಾಲಯವು ದ್ವಿತಲ ರಚನೆಯನ್ನು ಹೊಂದಿದೆ. ಗರ್ಭಗೃಹದ ಮೇಲೆ ದ್ರಾವಿಡಶೈಲಿಯ ಶಿಖರವಿದೆ. ಶಿಖರವು ಅಷ್ಟೇನೂ ಎತ್ತರವಾಗಿಲ್ಲ. ಶಿಖರದ ಗ್ರೀವಭಾಗದಲ್ಲಿ ಗೋಪುರದ ನಾಲ್ಕು ದಿಕ್ಕುಗಳ ಮೂಲೆಯಲ್ಲಿ ನಂದಿ ಶಿಲ್ಪವನ್ನು ನಿರ್ಮಿಸಲಾಗಿದೆ. ಶಿಖರದ ಮೇಲ್ಭಾಗದ ತುದಿಯಲ್ಲಿ ಕಳಸವಿಲ್ಲ.

## ೧೮. ಶ್ರೀರಂಗಪಟ್ಟಣದ ಗಂಗಾಧರೇಶ್ವರ ದೇವಸ್ಥಾನ

ಶ್ರೀರಂಗಪಟ್ಟಣ ಮಂಡ್ಯ ಜಿಲ್ಲೆಯ ಪ್ರಸಿದ್ಧವಾದ ಯಾತ್ರಾಕೇಂದ್ರ. ಶ್ರೀರಂಗ ಪಟ್ಟಣವು ಮೈಸೂರು ಬೆಂಗಳೂರು ಹೆದ್ದಾರಿಯಲ್ಲೇ ಬರುವ ಮುಖ್ಯ ಕೇಂದ್ರ. ಶ್ರೀರಂಗಪಟ್ಟಣವು ವಿಜಯನಗರ ಕಾಲದಲ್ಲಿ ಪ್ರಸಿದ್ಧಿ ಹೊಂದಿದ ಪಟ್ಟಣವಾಗಿತ್ತು. ಇಲ್ಲಿ ವಿಜಯನಗರ ವಾಸ್ತುಶೈಲಿಯನ್ನು ಹೊಂದಿರುವ ಅನೇಕ ದೇವಸ್ಥಾನಗಳನ್ನು ಕಾಣಬಹುದು. ಇವುಗಳಲ್ಲೆಲ್ಲಾ ಅತ್ಯಂತ ಪ್ರಮುಖವಾದದ್ದು ಶ್ರೀರಂಗನಾಥ ದೇವಸ್ಥಾನ. ಶ್ರೀರಂಗನಾಥ ದೇವಸ್ಥಾನದಿಂದಾಗಿಯೇ ಈ ಪಟ್ಟಣಕ್ಕೆ ಶ್ರೀರಂಗಪಟ್ಟಣ ಎಂದು ಹೆಸರು ಬಂದಿರುವುದು. ಕಾವೇರಿ ನದಿಯ ದಂಡೆಯ ಮೇಲೆ ಶ್ರೀರಂಗಪಟ್ಟಣ ಇದೆ. ಕಾವೇರಿ ನದಿಯು ಇಲ್ಲಿ ಎರಡು ಕವಲಾಗಿ ಒಡೆಯುತ್ತದೆ. ಹೊಯ್ಸಳರ ಕಾಲದಿಂದಲೂ ಪ್ರಸಿದ್ಧಿ ಪಡೆದಿದ್ದ ಶ್ರೀರಂಗಪಟ್ಟಣವು ವಿಜಯನಗರ ಕಾಲದಲ್ಲಿ ಅಷ್ಟೇ ಪ್ರಾಮುಖ್ಯತೆಯನ್ನು ಹೊಂದಿತ್ತು. ಚಂದ್ರಗಿರಿಯು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಸಮಯದಲ್ಲಿ ಶ್ರೀರಂಗಪಟ್ಟಣವನ್ನು ಶ್ರೀರಂಗರಾಯನೆಂಬ ರಾಜ ಪ್ರತಿನಿಧಿಯೋರ್ವನು ನೇರವಾಗಿ ರಾಜ್ಯಭಾರಮಾಡುತ್ತಿದ್ದನು. ಕ್ರಿ.ಶ.೧೬೧೦ರಲ್ಲಿ ಮೈಸೂರಿನ ರಾಜ, ಒಡೆಯರು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡರು.[೨] ಹೈದರಾಲಿಯು ಟಿಪ್ಪುಸುಲ್ತಾನರು ಇದನ್ನೆ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು.

ಶ್ರೀರಂಗಪಟ್ಟಣದಲ್ಲಿ ಶ್ರೀರಂಗನಾಥ ದೇವಾಲಯದಷ್ಟೇ ಪ್ರಾಮುಖ್ಯತೆಯನ್ನು ಹೊಂದಿದ ದೇವಸ್ಥಾನವೆಂದರೆ ಗಂಗಾಧರೇಶ್ವರ ದೇವಸ್ಥಾನ. ದೇವಸ್ಥಾನದ ಸುತ್ತಲೂ ವಿಶಾಲವಾದ ಪ್ರಾಕಾರವನ್ನು ಹೊಂದಿದೆ. ಪ್ರಾಕಾರವು ದ್ವಾರಬಾಗಿಲನ್ನು ಹೊಂದಿದೆ. ಪ್ರಮುಖವಾದ ಮಹಾದ್ವಾರ ಪೂರ್ವಾಭಿಮುಖ ವಾಗಿದೆ. ಇದೇ ಪ್ರಾಕಾರಕ್ಕೆ ದಕ್ಷಿಣದಲ್ಲಿ ಒಂದು ದ್ವಾರವನ್ನು ಹೊಂದಿದೆ. ಪೂರ್ವಾಭಿಮುಖವಾದ ಮಹಾದ್ವಾರವು ಸಂಪೂರ್ಣವಾಗಿ ಹಾಳಾಗಿ ಹೋಗಿದೆ. ದಕ್ಷಿಣದ ದ್ವಾರವು ರಾಯಗೋಪುರ ಹೊಂದಿರಬೇಕು. ಕೆಳಗಿನ ಮಂಟಪ ಮಾತ್ರ ಈಗ ಕಾಣಸಿಗುತ್ತಿದ್ದು, ಮೇಲಿನ ಗೋಪುರವೆಲ್ಲ ಹಾಳಾಗಿ ಹೋಗಿವೆ. ಈ ದಕ್ಷಿಣದ ದ್ವಾರಗೋಪುರದಲ್ಲಿ ಒಳಗಡೆಯಲ್ಲಿ ಶಿಲ್ಪ ಸೌಂದರ್ಯವು ಅತ್ಯಂತ ಮನಮೋಹಕವಾಗಿದೆ.




೧). ಗರ್ಭ ಗೃಹ ೨).ಅಂತರಾಳ ೩).ನವರಂಗ ೪).ಮುಖ ಮಂಟಪ ೫). ಅಮ್ಮನವರ ಸನ್ನಿಧಿ

೧೮). ಶ್ರೀ ರಂಗಪಟ್ಟಣ ಗಂಗಾಧರೇಶ್ವರ ದೇವಾಲಯದ ತಲನಕ್ಷೆ.

ಇದರ ಹಿಂಬದಿಯ ದ್ವಾರದಲ್ಲಿ ಚಾಮರದಾರಿಯರಿದ್ದಾರೆ. ಮುಂದುಗಡೆಯಲ್ಲಿ ಶೈವ ದ್ವಾರಪಾಲಕರಿದ್ದಾರೆ. ಈ ದ್ವಾರಗೋಪುರವು ಹನ್ನೆರಡು ಕಂಬಗಳ ಸಹಾಯದಿಂದ ನಿರ್ಮಾಣವಾಗಿದೆ. ದ್ವಾರದ ಒಳಗಿನ ಸ್ತಂಭಗಳು ಬಹುಭುಜಾಕೃತಿಯಲ್ಲಿ ನಿರ್ಮಾಣವಾಗಿದೆ. ಆರು ಅಡಿ ಎತ್ತರವಾದ ಜಗಲಿಯ ಮೇಲೆ ಈ ಸ್ತಂಭಗಳನ್ನು ನಿರ್ಮಿಸಲಾಗಿದೆ. ಸ್ತಂಭದ ಕೆಳಗೆ ಕಟ್ಟೆಯಲ್ಲಿ ಕುಬ್ಜನನ್ನು ನಿರ್ಮಿಸಲಾಗಿದೆ. ರಾಯಗೋಪುರದ ಈ ಕೆಳಗಿನ ಮಂಟಪವು ಗೋಡೆಗಂಬಗಳನ್ನು ಹೊಂದಿದೆ. ಮಧ್ಯೆದಲ್ಲಿ ಅರ್ಧಮಂಟಪವನ್ನು ಒಳಗೊಂಡಿದೆ. ಮೇಲ್ಗಡೆಯಲ್ಲಿ ಪ್ರಸ್ತಾರಭಾಗವು ಕಾಣಸಿಗುತ್ತದೆ. ಒಟ್ಟಾರೆಯಾಗಿ ದೇವಸ್ಥಾನದ ದಕ್ಷಿಣದ ಈ ದ್ವಾರಬಾಗಿಲು ಸುಂದರವಾಗಿ ಮೂಡಿ ಬಂದಿದೆ.

ಮಹಾದ್ವಾರವನ್ನು ಪ್ರವೇಶಿಸಿದೊಡನೆಯೇ ವಿಶಾಲವಾದ ಪ್ರಾಂಗಣವು ದೊರೆಯುತ್ತದೆ. ಗಂಗಾಧರೇಶ್ವರ ದೇವಸ್ಥಾನವು ಪೂರ್ವಾಭಿಮುಖವಾಗಿ ನಿರ್ಮಿತವಾದೆ. ದೇವಸ್ಥಾನದ ಸುತ್ತಲೂ ಪ್ರಾಕಾರವಿದೆ. ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ಪರಿವಾರ ದೇವರುಗಳ ಗುಡಿಗಳನ್ನು ನಿರ್ಮಿಸಲಾಗಿದೆ. ದೇವಸ್ಥಾನದ ಮುಂದುಗಡೆಯಲ್ಲಿ, ಧ್ವಜಸ್ತಂಭ ಬಲಿಪೀಠವನ್ನು ನಿಲ್ಲಿಸಲಾಗಿದೆ. ಧ್ವಜಸ್ತಂಭವು ಅಧಿಷ್ಠಾನವನ್ನು ಹೊಂದಿದ್ದು, ಕೆಳಗಿನ ಭಾಗದಲ್ಲಿ ಯಾಳಿಗಳನ್ನು ಕೆತ್ತಲಾಗಿದೆ. ಮೇಲೆ ಕಟ್ಟಿಗೆ ಕಂಬವನ್ನು ನಿಲ್ಲಿಸಲಾಗಿದೆ. ಅದಕ್ಕೆ ಹಿತ್ತಾಳೆಯ ಹೊದಿಕೆಯನ್ನು ಹಾಕಲಾಗಿದೆ. ಈ ಧ್ವಜಸ್ತಂಭದ ಮುಂದೆ ಬಹುಭುಜಾಕೃತಿಯ ಬಲಿಪೀಠವನ್ನು ನಿರ್ಮಿಸಲಾಗಿದೆ. ಬಲಿಪೀಠವು ಸುಮಾರು ಆರು ಅಡಿ ಎತ್ತರವಾಗಿದೆ. ಇದರ ಕೆಳಭಾಗದಲ್ಲೂ ಸಹ ಯಾಳಿಗಳನ್ನು ಕೆತ್ತಲಾಗಿದೆ(ಚಿತ್ರ ೨೯).

ಧ್ವಜಸ್ತಂಭದ ಎದುರಿನಲ್ಲೇ ಮಹಾರಂಗಮಂಟಪವನ್ನು ೩೨ ಕಂಬಗಳ ಸಹಾಯದಿಂದ ನಿರ್ಮಿಸಲಾಗಿದೆ. ಇದರಲ್ಲಿ ಅರ್ಧಭಾಗದಲ್ಲಿ ವೇದಿಕೆಯನ್ನು ನಿರ್ಮಿಸಲಾಗಿದ್ದು, ಇನ್ನುಳಿದ ಭಾಗವು ಹಾಗೆ ಇದೆ. ಹಾಗಾಗಿ ಅರ್ಧಸ್ತಂಭಗಳು ವೇದಿಕೆಯ ಮೇಲೆ ಕುಳಿತುಕೊಂಡರೆ ಇನ್ನುಳಿದ ಕಂಬಗಳು ಪ್ರಾಕಾರದ ಸಮತಟ್ಟಾದ ಭಾಗಕ್ಕೆ ಹೊಂದಿಕೊಂಡಂತಿವೆ. ಈ ವೇದಿಕೆಯ ಮೇಲೆ ದೇವಸ್ಥಾನದ ಉತ್ಸವಗಳ ಸಮಯದಲ್ಲಿ ರಂಗಭೋಗ ನಡೆಸಲು ಅನುಕೂಲವಾಗುವಂತೆ ನಿರ್ಮಿಸಲಾಗಿದೆ. ಕೆಳಗಡೆಯಲ್ಲಿ ಜನರು ಕುಳಿತು ನೋಡಲು ಅವಕಾಶವನ್ನು ಕಲ್ಪಿಸಲಾಗಿದೆ. ವೇದಿಕೆಯ ಮೇಲೆ ಭರತನಾಟ್ಯ, ಸಂಗೀತ ಮುಂತಾದ ಕಲೆಗಳ ಪ್ರದರ್ಶನವು ಆ ಕಾಲದಲ್ಲಿ ನಡೆಯುತ್ತಿತ್ತು ಎಂಬುದಕ್ಕೆ ಈ ವೇದಿಕೆಯೇ ಸಾಕ್ಷಿಯಾಗಿದೆ. ಈ ಮಂಟಪದ ಕಂಬಗಳು ಯಾವುದೇ ರೀತಿಯ ಶಿಲ್ಪಗಳನ್ನೊಳಗೊಳ್ಳದೆ ಸರಳವಾದ ಶೈಲಿಯಲ್ಲಿ ನಿರ್ಮಿತವಾಗಿದೆ.

ಈ ಮಹಾರಂಗ ಮಂಟಪದಿಂದ ದೇವಸ್ಥಾನದ ಒಳಗೆ ಪ್ರವೇಶಿಸಿದರೆ ದೊರೆಯುವುದೇ ನವರಂಗ. ನವರಂಗವು ವಿಶಾಲವಾದದ್ದಾಗಿದೆ. ನವರಂಗದ ಪೂರ್ವಕ್ಕೆ ಪ್ರವೇಶ ದ್ವಾರವಿದೆ. ಅಲ್ಲದೆ, ದಕ್ಷಿಣದ ದಿಕ್ಕಿಗೂ ಪ್ರವೇಶದ್ವಾರವಿದೆ. ಅಂದರೆ ನವರಂಗಕ್ಕೆ ದಕ್ಷಿಣ ಮತ್ತು ಪೂರ್ವದಲ್ಲಿ ಎರಡೂ ಕಡೆ ಪ್ರವೇಶದ್ವಾರವನ್ನು ಹೊಂದಿದೆ. ನವರಂಗದಲ್ಲಿರುವ ಕಂಬಗಳು ಅನೇಕ ಶಿಲ್ಪಗಳನ್ನು ಒಳಗೊಂಡಿವೆ.

ನವರಂಗದಲ್ಲಿ ಗರ್ಭಗೃಹದ ಎಡಬಲಗಳಲ್ಲಿ ಅನೇಕ ಶಿಲ್ಪಗಳನ್ನು ಕಾಣಬಹುದು. ಇವುಗಳಲ್ಲಿ ಗಣೇಶಶಿಲ್ಪವು ಮನೋಜ್ಞವಾಗಿ ಮೂಡಿ ಬಂದಿದೆ. ದೇವಸ್ಥಾನ ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳನ್ನು ಕಾಣಬಹುದು. ಇವು ಸುಂದರ ಶ್ರೀಮಂತಿಕೆಯನ್ನು ಹೊಂದಿವೆ. ನವರಂಗದ ಮುಂದೆ ಅಂತರಾಳವಿದೆ. ಅಂತರಾಳವು ನವರಂಗ ಮತ್ತು ಗರ್ಭಗುಡಿಯನ್ನು ಸೇರಿಸುವ ಭಾಗವಾಗಿದೆ. ಅಂತರಾಳವು ಗರ್ಭಗೃಹಕ್ಕಿಂತ ಮತ್ತು ನವರಂಗಕ್ಕಿಂತ ಬಹಳ ಚಿಕ್ಕದಾಗಿದೆ.

ಅಂತರಾಳದ ನಂತರ ಸಿಗುವುದೇ ಗರ್ಭಗೃಹ. ಇದು ದೇವರ ಸನ್ನಿಧಿ. ಇಲ್ಲಿ ಬಹುಸುಂದರವಾದ ಶಿವಲಿಂಗವಿದೆ. ಇದು ಕರಿಯ ಕಲ್ಲಿನ ಸುಂದರ ವಿಗ್ರಹವಾಗಿದೆ. ದಕ್ಷಿಣದ ಪ್ರವೇಶದ್ವಾರದ ಮುಖಮಂಟಪದ ಮೇಲಿನ ಶಾಸನವು ವಿಜಯನಗರ ಕಾಲದಾಗಿದ್ದು, ಗಂಗಾಧರೇಶ್ವರ ದೇವಾಲಯಕ್ಕೆ ದತ್ತಿಬಿಟ್ಟ ವಿಷಯವನ್ನು ನಿರೂಪಿಸುತ್ತದೆ.

ದೇವಸ್ಥಾನದ ಹೊರಗೆ ಅದಿಷ್ಟಾನವನ್ನು ಹೊಂದಿದೆ. ದೇವಾಲಯದ ಗರ್ಭಗೃಹದ ಹೊರಭಿತ್ತಿಯಲ್ಲಿ ಅರ್ಧಕಂಬಗಳನ್ನು ಅರ್ಧಮಂಟಪಗಳನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಮೂರು ದಿಕ್ಕಿಗೆ ಅರ್ಧಮಂಟಪಗಳ ರಚನೆಗಳನ್ನು ಕಾಣಬಹುದು. ದೇವಾಲಯದ ಪ್ರಸ್ತಾರಭಾಗದಲ್ಲಿ ಎತ್ತರವನ್ನು ಕಾಣಬಹುದು. ಉತ್ತರವು ಸರಳ ರಚನೆಯಿಂದ ಕೂಡಿದೆ. ಪ್ರಸ್ತಾರದಲ್ಲಿ ಕಪೋತ ಭಾಗವು ಹೆಚ್ಚು ಹೊರಚಾಚಿದೆ. ಗೋಪುರದ ಮೇಲಿನ ನೀರು ಭಿತ್ತಿಗೆ ಬೀಳದಂತೆ ತಡೆಯಲು ಇದು ಸಹಕಾರಿಯಾಗಿರುತ್ತದೆ.

ದೇವಸ್ಥಾನದ ವಿಮಾನವು ಜಾತಿ ವಿಮಾನದ ರಚನೆಯನ್ನು ಹೊಂದಿದೆ. ಮೇಲ್ಮಟ್ಟದ ಶಾಲಾ ಕೂಟ, ನಾಸಿಗಳನ್ನು ಒಳಗೊಂಡಿದೆ. ಗ್ರೀವವು, ಗ್ರೀವ ದೇವತೆಯನ್ನು ಹೊಂದಿದೆ. ಮೇಲೆ ತುತ್ತತುದಿಯಲ್ಲಿ ಲೋಹದ ಕಲಶದೊಂದಿಗೆ ಮೇಲ್ಕಟ್ಟಡವು ಕೊನೆಗೊಂಡಿದೆ. ಇಡೀ ದೇವಸ್ಥಾನದ ಗರ್ಭಗೃಹದ ಮೇಲಿನ ವಿಮಾನವು ಅತ್ಯಂತ ಮನಮೋಹಕವಾಗಿ ಮೂಡಿಬಂದಿದೆ. ನವರಂಗದ ಭಿತ್ತಿಯು ಸರಳವಾದ ರಚನೆಯನ್ನು ಹೊಂದಿದ್ದು, ಅಲ್ಲಲ್ಲಿ ಕಂಬಗಳು ಕಂಡುಬರುತ್ತದೆ(ಚಿತ್ರ ೩೦).

**ಅಮ್ಮನವರ ಸನ್ನಿಧಿ**

ದೇವಸ್ಥಾನದ ಉತ್ತರದಲ್ಲಿ ಅಂದರೆ ಮುಖ್ಯ ದೇವಸ್ಥಾನದ ಎಡಬದಿಯಲ್ಲಿ ಅಮ್ಮನವರ ಸನ್ನಿಧಿಯನ್ನು ಕಾಣಬಹುದು. ಅಮ್ಮನವರ ಸನ್ನಿಧಿ ಕೂಡ ಪೂರ್ವಾಭಿಮುಖವಾಗಿ ರಚನೆಗೊಂಡಿದೆ. ಇದು ಕೂಡ ಮುಖ ಮಂಟಪ, ನವರಂಗ ಮತ್ತು ಗರ್ಭಗೃಹಗಳನ್ನು ಹೊಂದಿದ ಭಾಗವಾಗಿದೆ.

ಹೊರಗೆ ಇರುವ ಮುಖಮಂಟಪವು ಸರಳವಾದ ರಚನೆಯಿಂದ ಕೂಡಿದ ಕಂಬಗಳನ್ನೊಳಗೊಂಡಿದೆ. ಮುಖಮಂಟಪದಿಂದ ನವರಂಗಕ್ಕೆ ಪ್ರವೇಶಿಸಿದರೆ ಅಲ್ಲಿ ನಾಲ್ಕು ಮುಖ್ಯ ಕಂಬಗಳಿಂದ ರಚಿತವಾದ ನವರಂಗವನ್ನು ಕಾಣಬಹುದು. ನವರಂಗದ ಮುಂದೆ ಅಂತಾರಾಳ, ಗರ್ಭಗೃಹವನ್ನು ಕಾಣಬಹುದು.

ಗರ್ಭಗೃಹದಲ್ಲಿ ಪಾರ್ವತಿ ಅಮ್ಮನವರ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಹೀಗೆ ಅಮ್ಮನವರ ಸನ್ನಿಧಿಯು ಸರಳವಾದ ರಚನೆಯಲ್ಲಿ ಸುಂದರವಾಗಿ ಮೂಡಿ ಬಂದಿದೆ.

**ನಾಗರಕಲ್ಲು**

ಅಮ್ಮನವರ ಸನ್ನಿಧಿಯ ಮುಂದುಗಡೆಯಲ್ಲಿ ನಾಗರಕಲ್ಲುಗಳನ್ನು ಕಾಣಬಹುದು. ನಾಗರಕಲ್ಲು ಕರ್ನಾಟಕದ ಪ್ರತಿಯೊಂದು ಹಳ್ಳಿಗಳಲ್ಲಿಯೂ ದೊರೆಯುತ್ತವೆ. ನಾಗಾರಾಧನೆ ಕರ್ನಾಟಕದ ಪ್ರಾಚೀನ ಆರಾಧನೆಯ ಸಂಕೇತವಾಗಿ ಉಳಿದುಬಂದಿದ್ದು, ಇದು ಈ ಶ್ರೀರಂಗಪಟ್ಟಣದ ಗಂಗಾಧರೇಶ್ವರ ದೇವಸ್ಥಾನದಲ್ಲೂ ಕಂಡುಬರುವುದು ಸರ್ವೇಸಾಮಾನ್ಯವಾಗಿದೆ.

**ಪುರಾತನರ ವಿಗ್ರಹಗಳು :** ಕ್ರಿ.ಶ.ಎಂಟರಿಂದ ಹತ್ತನೆಯ ಶತಮಾನದವರೆಗೆ ಆಗಿ ಹೋದ ತಮಿಳುನಾಡಿನ ಶಿವಭಕ್ತರ ವಿಗ್ರಹಗಳನ್ನು ಈ ಗಂಗಾಧರೇಶ್ವರ ದೇವಸ್ಥಾನದಲ್ಲಿ ಕಾಣಬಹುದು. ಇವರ ಸಂಖ್ಯೆ ಅರವತ್ತುಮೂರು ಇದರಿಂದ ಇವರನ್ನು ಅರವತ್ಮೂರು ಪುರಾತನರು ಎಂದು ಸಾಹಿತ್ಯಕೃತಿಗಳು ಉಲ್ಲೇಖಿಸುತ್ತವೆ. ಇವರ ಕಾರ್ಯಸ್ಥಾನ ತಮಿಳುನಾಡು. ಇವರ ಭಕ್ತಿಮಾರ್ಗವು ಕರ್ನಾಟಕದ ವಚನ ಚಳುವಳಿಯ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಇವರ ಅರವತ್ಮೂರು ವಿಗ್ರಹಗಳನ್ನು ನಂಜನಗೂಡಿನ ಶ್ರೀಕಂಠೇಶ್ವರ ದೇವಸ್ಥಾನದಲ್ಲೂ ಕಾಣಬಹುದು. ಇದೇ ರೀತಿಯಲ್ಲಿ ಬಳ್ಳಾರಿಯ ಮಲ್ಲಿಕಾರ್ಜುನ ದೇವಸ್ಥಾನದಲ್ಲೂ ಅರವತ್ಮೂರು ಪುರಾತನರ ವಿಗ್ರಹಗಳನ್ನು ಕಾಣಬಹುದಾಗಿದೆ. ಆದರೆ ಶ್ರೀರಂಗಪಟ್ಟಣದ ಗಂಗಾಧರೇಶ್ವರ ದೇವಸ್ಥಾನದಲ್ಲಿ ಮೊದಲಿಗೆ ಅರವತ್ಮೂರು ಪುರಾತನರ ಎಲ್ಲಾ ವಿಗ್ರಹಗಳು ಇದ್ದವೆಂದು ಅರ್ಚಕರು ಹೇಳುತ್ತಾರೆ. ಆದರೆ ಈಗ ಉಳಿದಿರುವುದು ಕೇವಲ ಹದಿನಾರು. ಹೀಗಾಗಿ, ತಮಿಳುನಾಡಿನ ಶಿವಭಕ್ತರಾದ ಇವರನ್ನು ದೇವಸ್ಥಾನದ ಪ್ರಾಕಾರದ ಮೂಲೆ ಮೂಲೆಯಲ್ಲೂ ಪ್ರತಿಷ್ಠಾಪಿಸಿ ಪೂಜಿಸಲಾಗುತ್ತದೆ. ಇದರಿಂದ ದೇವಸ್ಥಾನಕ್ಕೆ ವಿಶೇಷ ಕಳೆ ಬಂದಂತೆ ಕಂಡುಬರುವುದು.

## ೧೯. ಹರಳುಕೋಟೆಯ ವೀರಭದ್ರೇಶ್ವರ

ಹರಳು ಕೋಟೆಯು ಒಂದು ಐತಿಹಾಸಿಕ ಮಹತ್ವದ ಸ್ಥಳ. ಚಾಮರಾಜನಗರ ಜಿಲ್ಲೆಯಲ್ಲಿರುವ ಈಗ ಬೇಚರಾಕ್ ಗ್ರಾಮ ಹಳ್ಳಕೊಳ್ಳಗಳಿಂದ ಕೂಡಿದ ಈ ಊರಿಗೆ ಹರಳುಕೋಟೆ ಎಂಬ ಹೆಸರು ಬಂದಿತೆಂದು ಸ್ಥಳೀಯ ಜನರು ಹೇಳುತ್ತಾರೆ. ಈ ಗ್ರಾಮದಲ್ಲಿ

೧. ವೀರಭದ್ರೇಶ್ವರ ದೇವಸ್ಥಾನ

೨. ಆಂಜನೇಯ ದೇವಸ್ಥಾನ

೩. ಜನಾರ್ಧನ ದೇವಸ್ಥಾನ

೪. ಗಣೇಶ ದೇವಸ್ಥಾನ

ಆಂಜನೇಯ ದೇವಸ್ಥಾನ ಮತ್ತು ಜನಾರ್ಧನ ದೇಪಸ್ಥಾನಗಳು ವಿಜಯನಗರ ವಾಸ್ತುಮಾದರಿಯ ಉತ್ತಮ ದೇವಸ್ಥಾನಗಳಾಗಿವೆ. ವೀರಭದ್ರ ದೇವಸ್ಥಾನವು ಉತ್ತಮ ವಾಸ್ತುಮಾದರಿಯ ದೇವಸ್ಥಾನ ಆಗಿರಬೇಕು. ಆದರೆ ಈಗ ದೇವಸ್ಥಾನವನ್ನು ಸಂಪೂರ್ಣವಾಗಿ ಹೊಸದಾಗಿ ನಿರ್ಮಿಸಲಾಗಿದೆ. ಹಳೆಯದೇವಸ್ಥಾನಕ್ಕೆ ಸಂಬಂಧಿಸಿದ ಯಾವುದೇ ಕುರುಹುಗಳು ಈಗ ಅಲ್ಲಿ ದೊರೆಯುವುದಿಲ್ಲ. ದೇವಸ್ಥಾನದ ಬಲಭಾಗದಲ್ಲಿ ವಿಜಯನಗರಕಾಲದ ದೊಡ್ಡದಾದ ಶಾಸನವು ಮುಳ್ಳುಪೊದೆಗಳ ನಡುವೆ ಬಿದ್ದಿದೆ. ವೀರಭದ್ರಸ್ವಾಮಿ ದೇವಸ್ಥಾನವು ಈಗ ಗರ್ಭಗೃಹವನ್ನು ಮಾತ್ರ ಹೊಂದಿದೆ. ಇದರಲ್ಲಿ ವೀರಭದ್ರನ ಮೂರ್ತಿಯನ್ನು ನಿರ್ಮಿಸಲಾಗಿದೆ. ವಾರಕ್ಕೆ ಒಂದು ಬಾರಿ ಪಕ್ಕದ ಹಳ್ಳಿಯ ಪೂಜಾರಿಗಳು ಬಂದು ದೇವರಿಗೆ ಪೂಜೆ ಸಲ್ಲಿಸಿ ಹೋಗುತ್ತಾರೆ. ದೇವಸ್ಥಾನಕ್ಕೆ ಹತ್ತಿರದಲ್ಲಿ ರಾಮಸಮುದ್ರ ಎಂಬ ಗ್ರಾಮವಿದೆ(ಚಿತ್ರ ೩೧).

ಕ್ರಿ.ಶ.೧೫೨೩ರಲ್ಲಿ ಕೃಷ್ಣದೇವರಾಯನು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಈತನ ಮಂತ್ರಿ ಸಾಳುವ ಗೋವಿಂದರಾಜ ಒಡೆಯನು ಹಟ್ಟಲುಕೋಟೆಯ ಶ್ರೀವೀರಭದ್ರ ದೇವರನ್ನು ಪ್ರತಿಷ್ಠೆ ಮಾಡಿ ಮಾಗಣಿಯನ್ನು ಮತ್ತು ಭೂಮಿಯನ್ನು ದಾನ ಬಿಟ್ಟಿದ್ದನ್ನು ದೇವಸ್ಥಾನದ ಪಕ್ಕದಲ್ಲಿ ಬಿದ್ದಿರುವ ಶಾಸನವು ತಿಳಿಸುತ್ತದೆ.[೨೮] ಆದರೆ ಈಗ ದೇವಸ್ಥಾನ ಸಂಪೂರ್ಣವಾಗಿ ಹೊಸದಾಗಿ ರಚನೆಗೊಂಡು ಶಾಸನದ ಕಾಲದ ಯಾವುದೇ ಅವಶೇಷಗಳು ಅಲ್ಲಿ ಉಳಿದುಬಂದಿಲ್ಲ. ದೇವಸ್ಥಾನದ ಮುಂದೆ ಬಯಲಿನಲ್ಲಿ ನಂದಿಯನ್ನು ಇಟ್ಟಿದ್ದಾರೆ. ಹೊಸದಾಗಿ ನಿರ್ಮಿಸಿದ ದೇವಸ್ಥಾನದ ಲಲಾಟಬಿಂಬದಲ್ಲಿ ವಿಘ್ನೇಶ್ವರಮೂರ್ತಿ ಇದೆ. ದೇವಸ್ಥಾನದ ಎದುರಿನಲ್ಲಿ ಸುಮಾರು ಎರಡು ನೂರು ಅಡಿದೂರದಲ್ಲಿ ಭದ್ರಕಾಳಿಯ ಸಣ್ಣ ದೇವಸ್ಥಾನವನ್ನು ನಿರ್ಮಿಸಿದ್ದಾರೆ. ಇದು ಒಂದು ಪುಟ್ಟದಾದ ಮಣ್ಣಿನ ಗುಡಿಯಾಗಿದೆ. ಅಲ್ಲೇ ಪಕ್ಕದಲ್ಲಿ ಇರುವ ಗಣೇಶ ಗುಡಿಯ ಹತ್ತಿರದಲ್ಲಿ ಐತಿಹಾಸಿಕವಾದ ಕೆಲವೊಂದು ಮೂರ್ತಿಗಳನ್ನು ಇಟ್ಟಿದ್ದಾರೆ. ಅವುಗಳಲ್ಲಿ ಕೆಲವು ವೀರಗಲ್ಲುಗಳು ಲಿಂಗಮುದ್ರೆ ಕಲ್ಲುಗಳು, ನಾಗರಕಲ್ಲುಗಳನ್ನು ಕಾಣಬಹುದು. ಐತಿಹಾಸಿಕ ದೇವಾಲಯದ ಕನಸು ಹೊತ್ತು ಹೋದ ಇತಿಹಾಸಕಾರನಿಗೆ ಈ ಅವಶೇಷಗಳು ನಿರಾಶೆಯನ್ನುಂಟುಮಾಡುತ್ತವೆ.

## ೨೦. ಹಂಪಿಯ ಉದ್ದಾನ ವೀರಭದ್ರ

ಕೃಷ್ಣ ದೇವಸ್ಥಾನದ ದಕ್ಷಿಣದಲ್ಲಿ ಉದ್ಧಾನ ವೀರಭದ್ರ ದೇವಾಲಯವಿದೆ. ಶಾಸನದಲ್ಲಿ, ಈ ದೇವರನ್ನು ಮುದ್ದುವೀರಣ್ಣ ಎಂದು ಕರೆದಿದೆ.[೨೯] ಪ್ರಾಚೀನ ಶೈವಕ್ಷೇತ್ರಗಳಲ್ಲುಂಟಾದ ಹಂಪೆಯಲ್ಲಿ ಕ್ರಿ.ಶ.೧೫೪೫ರಲ್ಲಿ ದೇವಸ್ಥಾನವು ನಿರ್ಮಾಣಗೊಂಡಿತು. ಕೃಷ್ಣಪುರಪೇಟೆಯ ಹಿರಿಯ ಕಾಲುವೆಯ ಛತ್ರದ ಬಳಿಯಲ್ಲಿ ಉದ್ದಾನ ವೀರಭದ್ರನ ದೇವಸ್ಥಾನವಿದೆ. ಸದಾಶಿವರಾಯನು ವಿಜಯನಗರವ ನ್ನಾಳುತ್ತಿರುವ ಸಮಯದಲ್ಲಿ ಈತನ ಅಧಿಕಾರಿಯಾದ ಜಂಗಮಯ್ಯನು ಮುದ್ದುವೀರಣ್ಣನನ್ನು ಪ್ರತಿಷ್ಠಾಪಿಸಿದನು. ದೇವಾಲಯವನ್ನು ನಿರ್ಮಿಸಿದ ಸಮಯದಲ್ಲಿ ದೇವರಿಗೆ ಚಿನ್ನಬೆಳ್ಳಿಯ ಆಭರಣಗಳನ್ನು ಚಿನ್ನದ




೧). ಗರ್ಭ ಗೃಹ ೨).ಅಂತರಾಳ ೩).ನವರಂಗ ೪).ಮಹಾರಂಗ ಮಂಟಪ

೨೦). ಹಂಪಿ ಉದ್ದಾನೆ ವೀರಭದ್ರನ ತಲನಕ್ಷೆ.

ಉಪಕರಣಗಳನ್ನು ದಾನ ನೀಡುತ್ತಾನೆ. ದೇವಸ್ಥಾನಗಳಲ್ಲಿ ನಡೆಯುವ ನಿತ್ಯನೈವೇದ್ಯ, ಪಂಚಪರ್ವ ರಥೋತ್ಸವ ಬ್ರಾಹ್ಮಣ ವಿನಿಯೋಗ, ಅಂಗ ರಂಗವೈಭೋಗ ಮೊದಲಾದ ಉತ್ಸವಗಳಿಗೆ ಜಂಗಮಯ್ಯನು ದಾನ ನೀಡಿದ್ದಾನೆ. ದೇವಸ್ಥಾನದಲ್ಲಿ ನಡೆಸಲಾಗುವ ಛತ್ರದಲ್ಲಿನ ದಿನದ ವೆಚ್ಚಕ್ಕಾಗಿ ಅಕ್ಕಿ, ಹೆಸರು, ಎಣ್ಣೆ, ಉಪ್ಪು, ತೆಂಗಿನಕಾಯಿ, ವೀಳೆದೆಲೆ, ನಿಂಬೆಹಣ್ಣು ಮುಂತಾದವುಗಳ ವೆಚ್ಚಕ್ಕೆ ನಾನಾ ಹೇರಿನ ವ್ಯಾಪಾರಿಗಳು ಹೇರು ಒಂದಕ್ಕೆ ಒಂದು ಕಾಸನ್ನು ಸೋಮವಾರದ ಅಂಗಡಿಯವರು ಒಂದು ಕಾಸನ್ನು, ಮಂಗಳವಾರದ ಅಂಗಡಿಯವರು ಅಡಿಗೆಗೆ ಒಂದು ಕಾಸನ್ನು ನೀಡಬೇಕೆಂದು ಜಂಗಮಯ್ಯನು ಆಜ್ಞೆ ಹೊರಡಿಸಿದ್ದಾನೆ.[೩೦] ಶಾಸನಗಳಲ್ಲಿ ಮುದ್ದು ವೀರಣ್ಣನೆಂದು ಕರೆಯಿಸಿಕೊಳ್ಳುವ ಈತನ ಮೂರ್ತಿಯ ಗಾತ್ರವನ್ನು ನೋಡಿ ಉದ್ದಾನ ವೀರಭದ್ರನೆಂದು ಕರೆದಿರುವರು. ಗರ್ಭಗೃಹದಲ್ಲಿರುವ ವೀರಭದ್ರನ ಪೂಜಾಮೂರ್ತಿಯ ಎತ್ತರ ೩.೬.ಮೀಟರ್ ಗಳು. ಇದರಿಂದಾಗಿಯೇ ಜನರು ಉದ್ದಾನ ವೀರಭದ್ರನೆಂದು ಕರೆಯುತ್ತಾರೆ.

ದೇವಸ್ಥಾನವು ಒಂದು ಸುತ್ತ ಪ್ರಾಕಾರವನ್ನು ಹೊಂದಿದೆ. ಪ್ರಾಕಾರಕ್ಕೆ ಉತ್ತರದಿಕ್ಕಿನಲ್ಲಿ ದ್ವಾರವಿದೆ. ದ್ವಾರವು ಸರಳ ವಿಜಯನಗರ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ದ್ವಾರದ ಮಂಟಪದ ಮೇಲಿನ ರಾಯಗೋಪುರವು ಅಷ್ಟೇನೂ ಎತ್ತರವಾಗಿಲ್ಲ. ಗೋಪುರವನ್ನು ಗಾರೆಯಿಂದ ನಿರ್ಮಿಸಲಾಗಿದೆ(ಚಿತ್ರ ೩.೨).

ದ್ವಾರಮಂಟಪವನ್ನು ದಾಟಿ ಮುಂದೆ ನಡೆದರೆ ಸಿಗುವುದೇ ದೀಪಸ್ತಂಭ ಇದು ಸುಮಾರು ಇಪ್ಪತು ಅಡಿ ಎತ್ತರವಾಗಿದೆ. ದೀಪಸ್ತಂಭವು ಕಣಜ ಶಿಲೆಯಲ್ಲಿ ನಿರ್ಮಾಣಗೊಂಡಿದೆ. ಬೇರೆಲ್ಲಿರದ ದೀಪ ಸ್ತಂಭಗಳ ವಿಶೇಷತೆ ಈ ಸ್ತಂಭದಲ್ಲಿದೆ. ಇದರಲ್ಲಿ ಪೀಠ ಭಾಗದಿಂದ ನಾಲ್ಕು ಅಡಿ ಎತ್ತರದಲ್ಲಿ ಗರ್ಭಗೃಹದ ಎದುರಿಗೆ ಒಂದು ಪೀಠಸ್ಥ ಲಿಂಗಕ್ಕೆ ಇನ್ನೊಂದು ಪೀಠಸ್ಥ ಲಿಂಗವು ಆಧಾರವಾಗಿರುವಂತೆ ಒಂದು ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಶಿಲ್ಪದ ವಿನ್ಯಾಸವು ದೇವಾಲಯದಲ್ಲಿರುವ ಮೂರ್ತಿಗೆ ಎದುರಾಗಿರುವಂತೆ ದೀಪಸ್ಥಂಬದ ದಕ್ಷಿಣ ಮುಖದ ಮೇಲೆ ಶಿಲ್ಪವನ್ನು ಚಿತ್ರಿಸಲಾಗಿದೆ. ಉಬ್ಬುಶಿಲ್ಪ ಕೆಳಗಿನ ಭಾಗದಲ್ಲಿ ಆರು ದಳಗಳುಳ್ಳ ಒಂದು ಕಮಲದ ಹೂವನ್ನು ತೋರಿಸಲಾಗಿದೆ.

ಶಿಲ್ಪದಲ್ಲಿ ಕಂಡುಬರುವ ಹೂವು ಮತ್ತು ಲಿಂಗದ ಮೇಲೆ ಲಿಂಗಗಳು ಸೊನ್ನಲಾಪುರದಲ್ಲಿ ಸಿದ್ಧರಾಮನ ಜೀವಿತ ಕಾಲದಲ್ಲಿ ಅಸ್ಥಿತ್ವಕ್ಕೆ ಬಂದ ಲಿಂಗ ಪ್ರತಿನಿಧಿಸುತ್ತವೆ ಎಂದು ವಿದ್ವಾಂಸರಾದ ಸಿ.ಟಿ.ಎಮ್. ಕೊಟ್ರಯ್ಯನವರು ಅಭಿಪ್ರಾಯ ಪಡುತ್ತಾರೆ(ಚಿತ್ರ ೩.೩).

ಕಮಲದ ಹೂವು ಒಂದು ಜಲಾಶಯವನ್ನು ಸೂಚಿಸುತ್ತದೆ ಎಂದು ಈ ಹೂವು ಸೊಲ್ಲಾಪುರದ ಕೆರೆಯನ್ನು ಸೂಚಿಸುತ್ತದೆಂದು ಅವರು ಅಭಿಪ್ರಾಯಪಡುತ್ತಾರೆ. ಈ ರೀತಿಯ ಲಿಂಗದ ಶಿಲ್ಪವು ಒಂದು

ವಿನೂತನವಾದ ಮತ್ತು ಅಪೂರ್ವವಾದ ಶಿಲ್ಪಕೃತಿಯಾಗಿದೆ. ಈ ವಿನ್ಯಾಸ ಲಕ್ಷಣಗಳುಳ್ಳ, ಶಿವಲಿಂಗವು ಇದುವರೆಗೂ ಬೇರೆಲ್ಲಿಯೂ ಕಂಡುಬಂದಿಲ್ಲ. ಈ ದೀಪಸ್ತಂಭದ ಮುಂದೆ ನಾಲ್ಕು ಕಂಬಗಳ ಸಹಾಯದಿಂದ ನಿರ್ಮಿಸಿರುವ ನಂದಿಮಂಟಪವನ್ನು ಕಾಣಬಹುದು. ನಂದಿಯನ್ನು ಮಂಟಪದಲ್ಲಿ ಪ್ರತಿಷ್ಠಾಪಿಸಲಾಗಿದೆ. ಶಿಲಾಮಂಟಪದ ಮೇಲೆ ವಿಮಾನವನ್ನು ನಿರ್ಮಿಸಲಾಗಿದೆ. ಗೋಪುರದ ಪ್ರಾಸ್ತಾರಭಾಗದ ಮೇಲೆ ಈಶ್ವರನ ಮೂರ್ತಿಯನ್ನು ಕಾಣಬಹುದು.

ನಂದಿಮಂಟಪದ ಮುಂದುಗಡೆಯೇ ಉದ್ದಾನ ವೀರಭದ್ರಸ್ವಾಮಿಯ ದೇವಸ್ಥಾನವಿದೆ. ದೇವಸ್ಥಾನವು ಉತ್ತರಕ್ಕೆ ಮುಖ ಮಾಡಿದೆ. ದೇವಸ್ಥಾನದಲ್ಲಿ ಮೊದಲಿಗೆ ಸಿಗುವುದೇ ನವರಂಗ. ನವರಂಗವು ನಾಲ್ಕು ಕಂಬಗಳಿಂದ ನಿರ್ಮಾಣವಾಗಿದೆ. ನವರಂಗದ ಈ ನಾಲ್ಕು ಕಂಬಗಳು ಸರಳ ವಿಜಯನಗರ ಶೈಲಿಯಲ್ಲಿ ರಚನೆಗೊಂಡಿವೆ. ನವರಂಗದ ಮುಂದೆ ಅಂತರಾಳವಿದೆ. ಅಂತರಾಳವು ನವರಂಗ ಮತ್ತು ಗರ್ಭಗೃಹವನ್ನು ಸೇರಿಸುವ ಭಾಗವಾಗಿದೆ.

ಅಂತರಾಳದಲ್ಲಿ ಸರ್ವಾಂಗ ಲಿಂಗವೆಂದು ಕರೆಯುವ ಒಂದು ತ್ರಿಕೋನಾಕೃತಿಯ ಶಿಲ್ಪವನ್ನು ಕಾಣಬಹುದು. ಇದು ಲಿಂಗಶಿಲ್ಪಗಳ ಶಾಸ್ತ್ರಾಧ್ಯಯನ ಮಾಡುವವರಿಗೆ ಬಹುಮುಖ್ಯವಾದ ಅಧ್ಯೆಯನ ವಸ್ತುವಾಗಿದೆ. ಕರ್ನಲ್ ಮೆಕೆಂಝಿಯ ಕೈಫಿಯತ್ತು ಈ ಶಿಲ್ಪಕ್ಕೆ ತ್ರಿಕೋಣ ಯಂತ, ಮೂರು ಮೂಲಿಯ ಕಲ್ಲು, ಮೂರುಮೂತಿಯಗಲ್ಲು, ಮೂವತ್ತಾರು ಲಿಂಗ ಎಂದು ಹೆಸರಿಸುತ್ತದೆ. ವಿದ್ವಾಂಸರಾದ ಸಿ.ಟಿ.ಎಂ.ಕೊಟ್ರಯ್ಯನವರು ಈ ಶಿಲ್ಪವನ್ನು ವೀರಶೈವಧರ್ಮ ಪ್ರತಿಪಾದಿಸುವ ಷಟ್ಚಕ್ರ-ಷಟ್ ಸ್ಥಲ ಸಿದ್ಧಾಂತವನ್ನು ರೇಖಾ ರೂಪಗಳ ಮೂಲಕ ನಿರೂಪಿಸುವ "ಸರ್ವಾಂಗಲಿಂಗ" ಎಂದು ಕರೆದಿದ್ದಾರೆ. ತ್ರಿಕೋನಾಕಾರದ ಆ ಮೂರು ಚಪ್ಪಟೆಯಾದ ಪಟ್ಟಿಗಳ ಮೇಲೆ ಒಂದರ ಮೇಲೊಂದರಂತೆ ಮೂರು ಚಿತ್ರಗಳನ್ನು ಒಂದು ಬದಿಯಲ್ಲಿ ಕೆತ್ತಲಾಗಿದೆ. ಮೂರು ಬದಿಯಲ್ಲಿ ಒಟ್ಟು ಒಂಬತ್ತು ಚಿತ್ರಗಳನ್ನು ಕೆತ್ತಲಾಗಿದೆ. ಇವೆಲ್ಲ ವೀರಶೈವ ಧರ್ಮದ ತಿರುಳನ್ನು ತಿಳಿಸುವ ಸುರಖೇತವೆಂದು ಕೊಟ್ರಯ್ಯನವರು ಅಭಿಪ್ರಾಯವಾಗಿದೆ. ಹೀಗೆ ಅಂತರಾಳದಲ್ಲಿರುವ ಈ ಸರ್ವಾಂಗಲಿಂಗವು ಅತ್ಯಂತ ಪ್ರಮುಖ ಶಿಲ್ಪವಾಗಿದೆ.

ಅಂತರಾಳದ ನಂತರ ಬರುವುದೇ ಗರ್ಭಗೃಹ, ಗರ್ಭಗೃಹವು ೩.೬.ಮೀಟರ್ ಎತ್ತರದ ವೀರಭದ್ರಮೂರ್ತಿಯನ್ನು ಕೆತ್ತಲಾಗಿದೆ. ಆ ಶಿಲಾಮೂರ್ತಿಗೆ ಈಗಲೂ ದಿನನಿತ್ಯ ಪೂಜಾಕಾರ್ಯಗಳು ಜರುಗುತ್ತವೆ. ದೇವಸ್ಥಾನದ ಅರ್ಚಕರು ವೀರಶೈವರಾಗಿರುತ್ತಾರೆ. ೩.೬. ಮೀಟರ್ ಎತ್ತರದಲ್ಲಿಯ ಮುಖದ ಭಾಗಕ್ಕೆ ಪೂಜಾಕಾರ್ಯಗಳನ್ನು ನೆರವೇರಿಸಲು ಒಂದು ಮರದ ತೊಲೆಯನ್ನು ವೀರಭದ್ರಸ್ವಾಮಿಯ ಸೊಂಟದ ಮಟ್ಟಕ್ಕೆ ಅಡ್ಡ ಹಾಕಲಾಗಿದೆ. ಇದರಿಂದ ವೀರಭದ್ರನ ಪೂಜಾ ಕಾರ್ಯಗಳು ಸುಲಭವಾಗಿ ನಡೆಯುತ್ತವೆ.

ಭವ್ಯವಾದ ಈ ವೀರಭದ್ರಮೂರ್ತಿಯು ದ್ವಿಭಂಗಿಯಲ್ಲಿ ಎರಡು ಹಾವುಗಳ ಮೇಲೆ ನಿಂತಿರುವಂತೆ ಏಕಶಿಲೆಯಲ್ಲಿ ಕಡೆಯಲಾಗಿದೆ. ವೀರಭದ್ರನ ಮೂರ್ತಿಗೆ ನಾಲ್ಕುಗಳಿದ್ದು ಎಡದ ಹಸ್ತವು ದೀರ್ಘಾಕಾರದ ಗುರಾಣಿಯನ್ನು ಹಿಡಿದು ಕೊಂಡಿದೆ. ಬಲದ ಮುಂದಿನ ಕೈಯಲ್ಲಿ ಉದ್ದನೆಯ ಖಡ್ಗವನ್ನು ಕಾಣಬಹುದು. ಹಿಂದಿನ ಎಡದ ಮತ್ತು ಬಲದ ಕೈಗಳಲ್ಲಿ ಅನುಕ್ರಮವಾಗಿ ಬಿಲ್ಲು ಮತ್ತು ಬಾಣಗಳಿವೆ. ಮೂರ್ತಿಯ ಬಲಪಕ್ಕದಲ್ಲಿ ಮೊಣಕಾಲೆತ್ತರದವರೆಗೆ ಕುರಿತಲೆಯ ದಕ್ಷಬ್ರಹ್ಮನ ಮೂರ್ತಿಯೂ ಇದೆ. ಅದು ಅಂಜಲಿ ಹಸ್ತಗಳ ಮುದ್ರೆಯಲ್ಲಿ ಸಮಭಂಗದಲ್ಲಿ ನಿಂತಿರುವಂತೆ ತೋರಿಸಲಾಗಿದೆ. ಈ ವೀರಭದ್ರ ಮೂರ್ತಿಯ ಕಿರೀಟ ಮುಂತಾದ ಶ್ರೀಮಂತಿಕೆಯ ಆಭರಣಗಳಿಂದ ಸಾಲಂಕೃತವಾದುದಾಗಿದೆ.

ದೇವಾಲಯವು ಅಧಿಷ್ಠಾನದ ಮೇಲೆ ನಿರ್ಮಿತವಾಗಿದ್ದು, ಸರಳವಾದ ಭಿತ್ತಿಯನ್ನು ಹೊಂದಿದೆ. ದೇವಾಲಯದ ಗರ್ಭಗೃಹದ ಮೇಲೆ ಗೋಪುರವನ್ನು ರಚಿಸಲಾಗಿದೆ. ದೇವಸ್ಥಾನವು ಧಾರ್ಮಿಕ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇಡೀ ದೇವಸ್ಥಾನವನ್ನು ಗ್ರಾನೈಟ್ ಕಲ್ಲಿನಲ್ಲಿ ನಿರ್ಮಿಸಲಾಗಿದೆ.

ಹೀಗೆ ವಿಜಯನಗರದಲ್ಲಿ ಪ್ರಮುಖವಾದ ಕೃಷ್ಣಪೇಟೆಯಲ್ಲಿ ಸುಂದರವಾದ ಈ ಉದ್ಯಾನ ವೀರಭದ್ರ ದೇವಸ್ಥಾನವು ವಿಜಯನಗರ ವಾಸ್ತುಶೈಲಿಯಲ್ಲಿ ನಿರ್ಮಾಣಗೊಂಡ ದೇವಾಲಯಗಳಲ್ಲಿ ಅತೀ ವಿಶಿಷ್ಟವಾದ ದೇವಸ್ಥಾನವಾಗಿದೆ.

## ೨೧. ಹಂಪಿಯ ವಿರೂಪಾಕ್ಷ ದೇವಸ್ಥಾನ

ಹಂಪೆಯು ಪ್ರಾಚೀನ ದೇವಾಲಯಗಳಲ್ಲಿ ವಿರೂಪಾಕ್ಷ ದೇವಾಲಯವೂ ಒಂದು. ಈತನು ವಿಜಯನಗರದ ಅರಸರ ಕುಲದೈವ ಮಾತ್ರವಾಗಿರದೆ ಅವರ ಸಾಮ್ರಾಜ್ಯದ ಅಧಿದೈವನಾಗಿದ್ದ. ವಿಜಯನಗರ ಅರಸರು ಯಾವ ಧರ್ಮದ ಉಪಾಸಕರೇ ಆಗಿರಲಿ, ವಿಜಯನಗರದ ಅರಸರ ಅಂಕಿತಗಳು ಶ್ರೀವಿರೂಪಾಕ್ಷನ ಹೆಸರಿನಲ್ಲೇ ಇರುತ್ತಿದ್ದುದೊಂದು ವಿಶೇಷ. ಇದಕ್ಕೆ ಕಾರಣ ರಾಜಧಾನಿ ಪಂಪಾ ವಿರೂಪಾಕ್ಷ ಸನ್ನಿಧಿಯಲ್ಲಿದ್ದುದಾಗಿದೆ. ಸಂಗಮ ಅರಸರು ತಾಮ್ರ ಶಾಸನಗಳಲ್ಲಿ ತಮ್ಮ ಒಪ್ಪದ ಬದಲು ಶ್ರೀವಿರೂಪಾಕ್ಷನ ಹೆಸರನ್ನೇ ಬಳಸುತ್ತಿದ್ದರು.[೬೧] ವಿಜಯನಗರ ಸ್ಥಾಪನೆಯ ನಂತರ ವಿರೂಪಾಕ್ಷನ ದೇವಸ್ಥಾನಗಳು ತುಂಗಭದ್ರೆಯ ಇಕ್ಕೆಲಗಳಲ್ಲಿ ಬಹಳಷ್ಟು ಕಾಣಿಸಿಕೊಂಡವು. ವಿರೂಪಾಕ್ಷನು ನೆಲಸಿದ ಸ್ಥಳ ಮತ್ತು ಕಾಶಿಕ್ಷೇತ್ರಗಳು ಯಾವ ರಾಜನ ಅಂಕಿತಕ್ಕೂ ಸೇರುವುದಿಲ್ಲ ಎಂಬಷ್ಟರ ಮಟ್ಟಿಗೆ ಈತನ ಮಹಿಮೆ ಬೆಳೆಯಿತು. ಈ ರೀತಿ ಪ್ರಭಾವವನ್ನು ಬೆಳೆಸಿಕೊಂಡ ವಿರೂಪಾಕ್ಷನು ಪ್ರಾಚೀನವಾದ ಕುರುಹ ವನ್ನು ಹೊಂದಿರಬೇಕು.

ಕ್ರಿ.ಶ.೧೧೧೮ ವೇಳೆಗಾಗಲೇ ವಿರೂಪಾಕ್ಷ ದೇವಸ್ಥಾನವು ನಿರ್ಮಾಣವಾಗಿರಬೇಕು ಎಂಬ ಅಭಿಪ್ರಾಯ ಹಂಪೆಯ ಶಾಸನ ಸಂಪುಟದಲ್ಲಿ ಉಲ್ಲೇಖಿಸಲಾಗಿದೆ. ಕೆಲವು ವಿದ್ವಾಂಸರು ಕ್ರಿ.ಶ.೯೮೮ರಲ್ಲೇ ವಿರೂಪಾಕ್ಷ




೧). ಗರ್ಭ ಗೃಹ ೨).ಅಂತರಾಳ ೩).ಅರ್ಧ ಮಂಟಪ ೪). ರಂಗ ಮಂಟಪ ೫).ಮಹಾರಂಗ ಮಂಟಪ

೨೧). ಹಂಪಿ ವಿರೂಪಾಕ್ಷದೇವಸ್ಥಾನದ ತಲನಕ್ಷೆ.

ದೇವಾಲಯ ಸಂಕೀರ್ಣವು ಅಸ್ಥಿತ್ವದಲ್ಲಿತ್ತು ಎಂದು ಹೇಳುತ್ತಾರೆ.[೩೨] ಆದರೆ ಇದಕ್ಕೆ ಆಧಾರಗಳು ಸಾಲದು ಕುಷ್ಟಗಿ ಶಾಸನವನ್ನು ಉಲ್ಲೇಖಿಸಿ ಹೇಳಿರುವ ಶಾಸನ ಸಂಪುಟದ ವಿದ್ವಾಂಸರ ಉಲ್ಲೇಖ ಸರಿ ಎನಿಸುತ್ತದೆ. ವಿರೂಪಾಕ್ಷ ದೇವಸ್ಥಾನದ ನಿರ್ಮಾಣವನ್ನು ಹನ್ನೊಂದನೆಯ ಶತಮಾನದಲ್ಲಿ ಆಯಿತು ಎಂದು ಕೊಂಡರೂ, ಕ್ರಿ.ಶ.೧೧೯೯ರಲ್ಲಿ ಕುರುಗೋಡಿನ ಸಿಂಧ ಅರಸರು,[೩೩] ಕ್ರಿ.ಶ.೧೨೩೨ ಹೊಯ್ಸಳ ಅರಸರು[೩೪] ಈ ದೇವಸ್ಥಾನಕ್ಕೆ ದಾನ ದತ್ತಿಗಳನ್ನು ನೀಡಿದ್ದಾರೆ. ವಿಜಯನಗರ ಸಾಮ್ರಾಜ್ಯವು ಅಸ್ಥಿತ್ವಕ್ಕೆ ಬರುವುದಕ್ಕಿಂತಲೂ ಪೂರ್ವದಲ್ಲಿ ಹಂಪಿ, ವಿರೂಪಾಕ್ಷನ ಸನ್ನಿಧಿಯಾಗಿತ್ತು. ಸಂಗಮರ ಕಾಲದಲ್ಲಿ ವಿರೂಪಾಕ್ಷ ದೇವಾಲಯವು ಅಸ್ಥಿತ್ವದಲ್ಲಿದ್ದು, ಪೂಜೆಯೂ ನಡೆಯುತ್ತಿತ್ತು ಎಂದು ಮೇಲಿನ ಶಾಸನಗಳಿಂದ ತಿಳಿಯಬಹುದು.

ಕ್ರಿ.ಶ.೧೩೮೦ ಶಾಸನದಲ್ಲಿ ಮುದ್ದದಂಡೇಶ ವಿರೂಪಾಕ್ಷನ ಪೂಜೆಗೆ ಹೆಬ್ಬಾಳು ಮತ್ತು ದಂಡನಾಥಪುರ ಗಳನ್ನು ದಾನ ನೀಡಿದ್ದಾನೆ. ಕ್ರಿ.ಶ.೧೪೦೬ರಲ್ಲಿ ಸೋಮಣ್ಣ ದಂಡನಾಯಕನ ಮಗ ನಾಗಪ್ಪನು ವಿರೂಪಾಕ್ಷ ದೇವರಿಗೆ ದಾನವನ್ನು ನೀಡಿದ್ದಾನೆ. ಕ್ರಿ.ಶ.೧೪೯೪ರ ಶಾಸನದಲ್ಲಿ ಅನ್ನಯ್ಯ ಎಂಬುವನು ತನಗೆ ಶ್ರೇಯಸ್ಸು ಲಭಿಸಲೆಂದು ದಾನ ನೀಡಿದ್ದಾನೆ. ಹೀಗೆ ಇಡೀ ವಿರೂಪಾಕ್ಷ ದೇವಸ್ಥಾನದ ಸಮುಚ್ಚಯವು ಕಾಲಕಾಲಕ್ಕೆ ಜೀರ್ಣೋದ್ಧಾರವಾಗಿರಬೇಕು. ಮುಂದೆ ಪ್ರೌಢದೇವರಾಯನ ಕಾಲಕ್ಕೆ ಒಳಗಿನ ಮುಖಮಂಟಪ ರಚನೆಯಾಗಿರಬಹುದು. ಕೃಷ್ಣದೇವರಾಯನು ಪಟ್ಟಕ್ಕೆ ಆಸೀನನಾದ ಮೇಲೆ ವಿರೂಪಾಕ್ಷ ದೇವಾಲಯದ ಸಂಕೀರ್ಣವು ಈಗಿನ ಸ್ಥಿತಿಗೆ ಬಂದಿತು. ಹಿಂದಿನ ವರುಷ ನಿರ್ಮಿಸಿದ ದೇವಾಲಯವನ್ನು ಉಳಿಸಿಕೊಂಡು ತಾನು ಪಟ್ಟಕ್ಕೆ ಬಂದುದರ ಸವಿನೆನಪಿಗಾಗಿ ವಿರೂಪಾಕ್ಷ ದೇವರ ಮುಖಮಂಟಪ ರಚಿಸಿದ ಜೊತೆಯಲ್ಲಿಯೇ ರಂಗಮಂಟಪದ ಮುಂದಿನ ಚಿಕ್ಕ ಗೋಪುರವನ್ನು ನಿರ್ಮಿಸಿ ಹಿರಿಯ "ರಾಯ" ಗೋಪುರವನ್ನು ಜೀರ್ಣೋದ್ಧಾರ ಮಾಡಸಿದ. ದೇವರಿಗೆ ಬೆಲೆಬಾಳುವ ರತ್ನಗಳಿಂದ ಅಲಂಕೃತವಾದ ಚಿನ್ನದ ಕಮಲ, ನಾಗಾಭರಣ, ನೈವೇದ್ಯ ಮಾಡಲು ಒಂದು ಚಿನ್ನದ ಹರಿವಾಣ ಚಿನ್ನದ ಎರಡು ಆರತಿಗಳನ್ನು ೨೪ ಬೆಳ್ಳಿಯ ಆರತಿಗಳಲ್ಲೂ ದೇವರ ಸೇವೆಗಾಗಿ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೩೫] ಕೃಷ್ಣದೇವರಾಯನು ಕ್ರಿ.ಶ.೧೫೧೩ರಲ್ಲಿ ವಿರೂಪಾಕ್ಷನಿಗೆ ಅಮೃತಪಡಿ ನೈವೇದ್ಯ ಅಂಗರಂಗವೈಭೋಗ ರಥೋತ್ಸವ, ಮಕರ ಸಂಕ್ರಾಂತಿ ರಥೋತ್ಸವ, ಮಾಸೋತ್ಸವ ಸಂವತ್ಸರೋತ್ಸವ ದೀಪಾರಾಧನೆಗಳಾಗಿ, ಪಂಚಪರ್ವ ಮುಂತಾದ ಕಾರ್ಯಗಳಿಗಾಗಿ ಚಿಂನಿನಾಯಕನಹಳ್ಳಿ ಗ್ರಾಮ ಮತ್ತು ಅದಕ್ಕೆ ಸೇರಿರುವ ಕಾಳಗಟ್ಟ, ಡಣಾಯಕಪುರ, ರಾಮಚಂದ್ರಾಪುರ ಕಂಚುಮಂತಿನಕುಪ್ಪೆ, ಅಯೋದಿ, ಹೊನ್ನಾಪುರ ಮಂಡನೂರು, ದಂಮ್ಮೂರು ಭೈರದೇವನಹಳ್ಳಿ, ಕಲುಕಂಬ, ಗೋನಾಹಾಳ, ಗುಂಡೆಗನೂರು, ಪಾಡಿರಾಲ, ಮುದೆಗೆರೆ, ಈ ಗ್ರಾಮಗಳ ಸುವರ್ಣಾದಾಯವನ್ನು ದಾನ ನೀಡುತ್ತಾನೆ. ಇವಲ್ಲದೆ ವಿರೂಪಾಕ್ಷನಿಗೆ ಒಂದು ನಾಗಾಭರಣ, ನವರತ್ನ ಕಮಲ ಚಿನ್ನದ ಹರಿವಾಣ, ಎರೆಡು ಚಿನ್ನದ ಆರತಿಗಳನ್ನು ೩೪ ಬೆಳ್ಳಿಯ ಆರತಿಗಳನ್ನು ದಾನ ಬಿಡುತ್ತಾನೆ. ಹೀಗೆ ವಿಜಯನಗರದ ಆರಾಧ್ಯ ದೈವ

ವಿರೂಪಾಕ್ಷನ ದೇವಸ್ಥಾನವು ಅಭಿವೃದ್ಧಿ ಹೊಂದುತ್ತಾ ಸಾಗಿತ್ತು. ಕೃಷ್ಣದೇವರಾಯನ ನಂತರದಲ್ಲಿ ವಿರೂಪಾಕ್ಷ ದೇವಸ್ಥಾನಕ್ಕೆ ಗಮನಾರ್ಹ ಕಾಣಿಕೆಗಳನ್ನು ಯಾರೂ ನೀಡಿರುವುದಿಲ್ಲ. ಆದರೆ ವಿರೂಪಾಕ್ಷನ ದೇವಾಲಯದ ಪೂಜಾಕಾರ್ಯಗಳು ಯಥಾ ಸ್ಥಿತಿಯಲ್ಲಿ ಜರುಗುತ್ತಿದ್ದವು.

ಹಂಪೆಯ ವಿರೂಪಾಕ್ಷ ದೇವಸ್ಥಾನವು ವಿಶಾಲವೂ ಭವ್ಯವೂ ಆದ ದೇವಾಲಗಳಲ್ಲೊಂದು ಹಂಪೆಯ ರಥಬೀದಿಗೆ ಕಾಲಿಟ್ಟಾಗಲೇ ಇದರ ಪ್ರಮುಖ ಗೋಪುರವು ನೋಡುಗರನ್ನು ಆಕರ್ಷಿಸುತ್ತದೆ. ಈ ಗೋಪುರವು ದಕ್ಷಿಣ ಭಾರತ ಅತೀ ಎತ್ತರವಾದ ಗೋಪುರಗಳಲ್ಲೊಂದು. ಇದನ್ನು ಕ್ರಿ.ಶ.೧೫೧೩ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಜೀರ್ಣೋದ್ಧಾರವಾಗಿತ್ತು. ಅಂದರೆ ಇದರ ರಚನೆ ಇನ್ನೂ ಪೂರ್ವಕ್ಕೆ ಸರಿಯುತ್ತದೆ. ಲಕ್ಕಣ್ಣನ ದಂಡೇಶನು ಶಿವತತ್ವ ಚಿಂತಾಮಣಿಯಲ್ಲಿ ಪ್ರೌಢದೇವರಾಯನು ರಥಬೀದಿಯನ್ನು ಮಾಡಿಸಿದ್ದನ್ನು ಉಲ್ಲೇಖಿಸಿದ್ದಾನೆ. ಆಗ ಗೋಪುರವು ರಚನೆಗೊಂಡಿದ್ದರೆ ಲಕ್ಕಣ್ಣ ದಂಡೇಶ ಖಂಡಿತವಾಗಿಯೂ ಉಲ್ಲೇಖಿಸುತ್ತಿದ್ದ. ಹೀಗಾಗಿ ಒಂದನೆಯ ದೇವರಾಯನ ಕಾಲಕ್ಕೆ ಈ ಗೋಪುರವು ರಚನೆಗೊಂಡಿರಬೇಕು ಎಂಬುದು ಸತ್ಯಕ್ಕೆ ಹತ್ತಿರವಾಗುತ್ತದೆ.[೩೬]

ಈ ಗೋಪುರವು ಒಟ್ಟು ಒಂಭತ್ತು ತಲಗಳಿಂದ ಕೂಡಿದೆ. ಗೋಪುರದ ಕೆಳಗಿನ ಎರಡು ತಲಗಳು ಮಾತ್ರ ಕಲ್ಲಿನಲ್ಲಿದ್ದು, ಉಳಿದೆಲ್ಲ ಭಾಗಗಳು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟಿದೆ. ವಿಜಯನಗರ ಕಾಲದಲ್ಲಿ ಅಭಿವೃದ್ಧಿ ಹೊಂದಿದ ಗಾರೆ ಶಿಲ್ಪಕಲೆಯ ಗೋಪುರದಲ್ಲಿ ಹೆಚ್ಚಾಗಿ ಮೂಡಿ ಬಂದಿದೆ.

ವಿರೂಪಾಕ್ಷನ ದೇವಸ್ಥಾನವು ಪೂರ್ವಾಭಿಮುಖವಾಗಿ ರಚನೆಗೊಂಡಿದೆ. ದೇವಸ್ಥಾನದ ಈ ಗೋಪುರವು ಸಹ ಪೂರ್ವದಿಕ್ಕಿಗೆ ಮುಖಮಾಡಿಕೊಂಡಿದೆ. ಗೋಪುರದ ಒಂದೊಂದು ತಲಗಳು ಮೇಲಕ್ಕೆ ಹೋದಂತೆ ಚಿಕ್ಕದಾಗುತ್ತಾ ಸಾಗುವುವು. ಕೊನೆಯಲ್ಲಿ ಕಳಸಗಳೊಂದಿಗೆ ಮುಕ್ತಾಯವಾಗುತ್ತದೆ. ಪ್ರತಿಯೊಂದು ತಲದಲ್ಲೂ ಗಾರೆ ಶಿಲ್ಪಗಳನ್ನು ಕೆತ್ತಲಾಗಿದೆ. ಮೇಲ್ಭಾಗದಲ್ಲಿ ವಿಶಾಲವಾದ ಶಾಲಾವಿದ್ದು ಅದರ ಮೇಲೆ ಕಲಶಗಳನ್ನು ನಿರ್ಮಿಸಲಾಗಿದೆ.

ಮಹಾಗೋಪುರವನ್ನು ಪ್ರವೇಶಿಸಿದೊಡನೆ ಹಜಾರವು ದೊರೆಯುತ್ತದೆ. ಇದರ ಬಲಬದಿಯಲ್ಲಿ ಅನೇಕ ಮಂಟಪಗಳು ಕಾಣುತ್ತವೆ. ಇದರಲ್ಲಿ ಫಲಪೂಜಾ ಮಂಟಪವೂ ಸೇರಿದೆ. ಇದು ವಿಜಯನಗರ ಶೈಲಿಯ ವಾಸ್ತುರಚನೆಯನ್ನು ಹೊಂದಿದೆ(ಚಿತ್ರ ೩೩).

ಇದರ ಮುಂದೆ ದೊರೆಯುವುದೆ ಕೃಷ್ಣದೇವರಾಯನು ಕ್ರಿ.ಶ.೧೫೧೦ರಲ್ಲಿ ನಿರ್ಮಿಸಿದ ಚಿಕ್ಕದಾದ ರಾಯಗೋಪುರ. ಇದು ಮಹಾಗೋಪುರಕ್ಕಿಂತ ಚಿಕ್ಕದಾಗಿದೆ. ಇದು ಒಂದು ಚಿಕ್ಕ ಮೂರು ಅಂತಸ್ಥಿನ ಗೋಪುರವಾಗಿದೆ. ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸಮಯಕ್ಕೆ ಕಟ್ಟಿಸಿದ್ದರಿಂದ ಇದಕ್ಕೆ

ರಾಯಗೋಪುರ ಎಂಬ ಹೆಸರು ಬಂದಿದೆ.[೩೭] ಎರಡನೆಯ ರಾಯಗೋಪುರವನ್ನು ದಾಟಿದರೆ ಸಿಗುವುದು ವಿಶಾಲವಾದ ಹಜಾರವನ್ನು ಕಾಣಬಹುದು. ಇದರ ಬಲಬದಿಯಲ್ಲಿ ಕಲ್ಯಾಣ ಮಂಟಪವನ್ನು ಕಾಣಬಹುದು. ಇದರಲ್ಲಿ ಹಲವಾರು ಸ್ತಂಭಗಳನ್ನು ಕಾಣಬಹುದು. ಕಂಬಗಳು ವಿವಿಧ ಮಾದರಿಯಲ್ಲಿ ರಚನೆಗೊಂಡಿವೆ.

ಇದೇ ಪ್ರಾಕಾರದಲ್ಲಿ ಸಿಗುವುದೇ ಪ್ರಸಿದ್ಧವಾದ ವಿರೂಪಾಕ್ಷನ ದೇವಸ್ಥಾನ. ಪ್ರಾಕಾರದಲ್ಲಿ ಮೊಟ್ಟಮೊದಲು ಕಾಣಸಿಗುವುದೇ ವಿಶಾಲವಾದ ತೆರೆದ ಮಹಾರಂಗಮಂಟಪ. ಇದನ್ನು ಕೃಷ್ಣದೇವರಾಯನು ಕ್ರಿ.ಶ.೧೫೧೦ರಲ್ಲಿ ತನ್ನ ಪಟ್ಟಾಭಿಷೇಕದ ನೆನಪಿಗಾಗಿ ನಿರ್ಮಿಸಿದನು. ಐದು ಅಂಕಣಗಳಾಗಿ ವಿಂಗಡಿಸಿ ಈ ಮಂಟಪದಲ್ಲಿ ವಿವಿಧ ಪ್ರಾಕಾರದ ಕಂಬಗಳನ್ನು ಕಾಣುತ್ತೇವೆ. ಮಧ್ಯದ ಆಲಯದಲ್ಲಿ ಹದಿನಾರು ಕಂಬಗಳನ್ನು ಕಾಣಬಹುದು. ಮುಂಗಾಲುಗಳನ್ನು ಮೇಲೆತ್ತಿ, ಆಕ್ರಮಣ ಮಾಡುವಂತೆ ಓಂಗಾಲ ಮೇಲೆ ನಿಂತಿರುವ ಯಾಳಿಗಳನ್ನು ಅವುಗಳ ಮೇಲೆ ಸವಾರರನ್ನು ಕಾಣಬಹುದು. ಇದೇ ರೀತಿಯ ಯಾಳಿ ಸವಾರರ ಕಂಬಗಳನ್ನು ಅಲಸೂರಿನ ಸೋಮೇಶ್ವರ ದೇವಸ್ಥಾನದಲ್ಲಿ ಕೋಲಾರದ ಸೋಮೇಶ್ವರ ದೇವಸ್ಥಾನದ ಮಹಾರಂಗ ಮಂಟಪದಲ್ಲೂ ಸಹ ಕಾಣಬಹುದು. ಯಾಳಿಯ ಕಾಲಿನ ಕೆಳಗೆ ಮಕರದ ಬಾಯಿಯಿಂದ ತೂಗುಬಿದ್ದಿರುವ ಸರಪಳಿಗಳು ಉಬ್ಬುಶಿಲ್ಪಗಳು ಮುಂತಾದ ಅಲಂಕಾರಗಳನ್ನು ಕಾಣಬಹುದು. ಮಧ್ಯದ ಅಂಕಣವು ಉಳಿದಕ್ಕಿಂತ ಎತ್ತರವಾಗಿದ್ದು, ಇಲ್ಲಿ ಸಂಗೀತ, ನೃತ್ಯಗಳು ಜರುಗಲು ಅವಕಾಶವನ್ನು ಕಲ್ಪಿಸಲಾಗುತ್ತಿತ್ತು. ತೆರೆದ ರಂಗ ಮಂಟಪದ ಒಳಛಾವಣಿಯಲ್ಲಿ ವರ್ಣಚಿತ್ರಗಳನ್ನು ಕಾಣಬಹುದು. ದ್ರೌಪದಿಯ ಸ್ವಯಂವರದ ಸಂದರ್ಭದಲ್ಲಿ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸುವ ಚಿತ್ರ ಪಲ್ಲಕ್ಕಿಯಲ್ಲಿ ಕುಳಿತು ಮೆರವಣಿಗೆ ಹೊರಟಿರುವ ಯತಿಯ ಚಿತ್ರ, ದಶಾವತಾರದ ಚಿತ್ರಗಳು, ಕಾಮದಹನದ ಮೂರ್ತಿ, ತ್ರಿಪುರ ಸಂಹಾರದ ಮುಂತಾದ ಸುಂದರವಾದ ವರ್ಣಚಿತ್ರಗಳನ್ನು ಇಲ್ಲಿ ಚಿತ್ರಿಸಲಾಗಿದೆ.

ಇದರ ಮುಂದೆ ಇರುವುದೇ ನವರಂಗ ನವರಂಗಕ್ಕೆ ಮಹಾರಂಗ ಮಂಟಪದಿಂದ ದ್ವಾರವನ್ನು ಅಳವಡಿಸಿದ್ದರೂ ಅದನ್ನು ಹಬ್ಬ ಉತ್ಸವಗಳ ಸಮಯದಲ್ಲಿ ಮಾತ್ರ ತೆರೆಯಲಾಗುತ್ತದೆ. ಈ ನವರಂಗಕ್ಕೆ ಉತ್ತರ ಮತ್ತು ದಕ್ಷಿಣದಲ್ಲೂ ಸಹ ಬಾಗಿಲನ್ನು ಕಲ್ಪಿಸಲಾಗಿದೆ. ಈಗ ದಕ್ಷಿಣದ ದ್ವಾರದಿಂದ ಪ್ರವೇಶಿಸಲು ಅವಕಾಶವನ್ನು ಕಲ್ಪಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಲ್ಲಿನ ಕಂಬಗಳಿವೆ.

ನವರಂಗದ ನಂತರದಲ್ಲಿ ಪ್ರದಕ್ಷಣಾಪಥ, ಅರ್ಧಮಂಟಪ, ಅಂತರಾಳ, ಗರ್ಭಗೃಹಗಳನ್ನು ದೇವಸ್ಥಾನವು ಹೊಂದಿದೆ. ಗರ್ಭಗೃಹ ಮತ್ತು ಅಂತರಾಳದ ಪ್ರವೇಶ ದ್ವಾರಗಳು ಸೂಕ್ಷ್ಮಕೆತ್ತನೆಯಿಂದ ಕೂಡಿವೆ. ಈ ದ್ವಾರಗಳ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ವಿಗ್ರಹವನ್ನು ಕಾಣಬಹುದು. ದ್ವಾರದ ಎರಡೂ ಬದಿಯಲ್ಲಿ ತ್ರಿಶೂಲ ಡಮರು, ಗದೆಯನ್ನು ಹಿಡಿದು ನಿಂತಿರುವ ನಂದಿ, ಭೃಂಗರ ವಿಗ್ರಹಗಳನ್ನು ಕಾಣಬಹುದು. ಇವುಗಳ ಮೇಲೆ ಈಗ ತಾಮ್ರದ ಕವಚವನ್ನು ತೊಡಿಸಲಾಗಿದೆ. ಗರ್ಭಗೃಹವು

ಚಚ್ಚೌಕಾಕಾರದಲ್ಲಿದೆ. ಅದರಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿರುವ ದಕ್ಷಿಣ ಮತ್ತು ಉತ್ತರದ ಪ್ರವೇಶದ್ವಾರಗಳಿಗೆ ಚಿಕ್ಕದಾದ ಮುಖಮಂಟಪವನ್ನು ಜೋಡಿಸಲಾಗಿದೆ. ನವರಂಗಕ್ಕೆ ಹತ್ತಲು ಸೋಪಾನಗಳನ್ನು ಕಾಣಬಹುದು. ಹೀಗೆ ಇಡೀ ದೇವಾಲಯದ ಸಮುಚ್ಚಯವು ಸುಂದರವಾದುದ್ದು. ವಿಜಯನಗರ ವಾಸ್ತುಶೈಲಿಯ ರಚನೆಯನ್ನು ಹೊಂದಿದೆ(ಚಿತ್ರ ೩೪).

ದೇವಸ್ಥಾನದ ಹೊರಗೋಡೆಯನ್ನು ಕಾಲಕಾಲಕ್ಕೆ ಜೀರ್ಣೋದ್ಧಾರಗೊಳಿಸಲಾಗಿದೆ. ದೇವಸ್ಥಾನವು ಎತ್ತರವಾದ ಅಧಿಷ್ಠಾನದ ಮೇಲೆ ನಿಂತಿದೆ. ಭಿತ್ತಿಯಲ್ಲಿ ಅನೇಕ ಶಿಲ್ಪಗಳು ಕಂಡುಬರುತ್ತವೆ. ಇದರಲ್ಲಿ ಮುಖ್ಯವಾಗಿ ಕುಂಭ ಪಂಜರಗಳ ರಚನೆ, ಅರ್ಧಕಂಬಗಳು ಉಬ್ಬುಶಿಲ್ಪಗಳ ಚಿತ್ರಗಳನ್ನು ಕಾಣಬಹುದು. ಅಲ್ಲಲ್ಲಿ ಯಾಳಿ, ವೀರಭದ್ರ ಗಣೇಶನ ಚಿತ್ರಗಳನ್ನು ಕಾಣಬಹುದು.

**ಅಮ್ಮನವರ ಸನ್ನಿದಿ**

ಪಂಪಾಪತಿ ದೇವಸ್ಥಾನದ ಎಡಬದಿಯಲ್ಲಿ ಪಂಪಾಂಬಿಕೆಯ ದೇವಸ್ಥಾನವಿದೆ. ಇದು ವಿರೂಪಾಕ್ಷ ದೇವಾಲಯಕ್ಕಿಂತ ಮೊದಲಿನ ರಚನೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಇದರ ಪಕ್ಕದಲ್ಲೇ ಭೂವನೇಶ್ವರಿಯ ದೇವಸ್ಥಾನವಿದೆ. ಇವೆರಡೂ ಹೊಯ್ಸಳ ವಾಸ್ತುಶೈಲಿಯ ಬಳಪದ ಕಲ್ಲಿನಿಂದ ನಿರ್ಮಿಸಿದ ಕಂಬಗಳನ್ನು ಹೊಂದಿವೆ. ಪಂಪಾಂಬಿಕೆ ದೇವಸ್ಥಾನಕ್ಕೆ ಮತ್ತು ಪಂಪಾಪತಿಯ ದೇವಾಲಯಕ್ಕೆ ವಿಜಯನಗರ ಅರಸರ ಕಾಲಕ್ಕೂ ಮೊದಲಿನ ಇತಿಹಾಸವಿದೆ. ಚಾಳುಕ್ಯ ವಿನಯಾದಿತ್ಯನು ಕ್ರಿ.ಶ.೬೮೯ರಲ್ಲಿ ಪಂಪಾತೀರ್ಥದಲ್ಲಿದ್ದಾಗ ಬ್ರಾಹ್ಮಣರಿಗೆ ಭೂದಾನ ಮಾಡಿದ್ದನೆಂದು ತಾಮ್ರ ಶಾಸನವೊಂದು ಉಲ್ಲೇಖಿಸುತ್ತದೆ.

**ಪರಿವಾರ ದೇವತೆಗಳು**

ಹಂಪೆಯ ವಿರೂಪಾಕ್ಷ ದೇವಸ್ಥಾನವು ವಿಶಾಲವಾದ ಪ್ರಾಕಾರದಲ್ಲಿ ರಚನೆಗೊಂಡಿದ್ದು, ಪೂರ್ವಾಭಿಮುಖವಾಗಿ ರಚನೆಯಾದ ದೇವಸ್ಥಾನವಾಗಿದೆ. ದೇವಸ್ಥಾನದ ಪ್ರಾಕಾರಕ್ಕೆ ಪೂರ್ವದಲ್ಲಿ ಎರಡು ಗೋಪುರವನ್ನು ಕಟ್ಟಲಾಗಿದೆ. ಗರ್ಭಗೃಹದ ಕಡೆಯಿಂದ ಮೊದಲ ಚಿಕ್ಕ ಗೋಪುರವು ರಾಯಗೋಪುರವೆನಿಸಿದರೆ, ಎರಡನೆಯ ಗೋಪುರವು ಮಹಾಗೋಪುರವಾಗಿದ್ದು, ಒಂಬತ್ತು ತಲಗಳನ್ನು ಹೊಂದಿದೆ. ಈ ವಿಶಾಲವಾದ ಆವರಣದಲ್ಲಿ ಅನೇಕ ದೇವಾನುದೇವತೆಗಳ ದೇವಸ್ಥಾನಗಳನ್ನು ಕಾಣಬಹುದು. ಪ್ರಾಕಾರದ ಒಳ ಅಂಗಳದಲ್ಲಿ

೧. ಸೂರ್ಯನಾರಾಯಣ

೨. ಮುಕ್ತಾನರಸಿಂಹ

೩. ತಾರಕೇಶ್ವರ

೪. ಪಾತಾಳೇಶ್ವರ

೫. ಸರಸ್ವತಿ

೬. ನವದುರ್ಗ

ಸಣ್ಣ ದೇವಸ್ಥಾನಗಳನ್ನು ಕಾಣಬಹುದು. ದೇವಸ್ಥಾನದ ಉತ್ತರದಿಕ್ಕಿನಲ್ಲಿ ಕನಕಗಿರಿಯ ಗೋಪುರವನ್ನು ಕಾಣಬಹುದು. ಈ ಗೋಪುರವು ಕನಕೆಯ ಕಡೆಯಲ್ಲಿ ಮುಖ ಮಾಡಿರುವುದರಿಂದಲೇ ಈ ಗೋಪುರಕ್ಕೆ ಆ ಹೆಸರು ಬಂದಿರಬಹುದೆಂದು ಊಹಿಸಲಾಗಿದೆ.

ದೇವಸ್ಥಾನದ ಕನಕಗಿರಿ ಗೋಪುರದಿಂದ ಉತ್ತರಕ್ಕೆ ಬಂದರೆ ಅಲ್ಲಿ ವಿಶಾಲವಾದ ಮನ್ಮುಖ ಪುಷ್ಕರಣಿ ದೊರೆಯುತ್ತದೆ. ಇಲ್ಲಿ ಕೂಡ ವಿಜಯನಗರ ಪೂರ್ವಕಾಲದ ಅನೇಕ ದೇವಸ್ಥಾನಗಳ ರಚನೆಗಳನ್ನು ಕಾಣಬಹುದು. ಇವುಗಳಲ್ಲಿ ಮುಖ್ಯವಾಗಿ ನಾಗನಾಥ ಮತ್ತು ನಾಗನಂದೀಶ್ವರ ದೇವಸ್ಥಾನಗಳು ರಚನೆಗಳಾಗಿವೆ. ಪುಷ್ಕರಣಿಯು ವಿಶಾಲವಾಗಿದ್ದು, ಸದಾ ನೀರಿನಿಂದ ತುಂಬಿರುತ್ತದೆ. ಪುಷ್ಕರಣಿಯ ದೇವಸ್ಥಾಸನದಲ್ಲಿನ ಪೂಜಾಕಾರ್ಯಗಳಿಗೆ ಬಳಸುತ್ತಿರಬೇಕು. ಇದನ್ನು ಹತ್ತಿ ಇಳಿಯಲು ಮೆಟ್ಟಿಲುಗಳನ್ನು ರಚಿಸಲಾಗಿದೆ. ಹೀಗೆ ಇಡೀ ದೇವಸ್ಥಾನದ ಸಮುಚ್ಛಯವು ಅತ್ಯಂತ ಸುಂದರವಾಗಿ ನಿರ್ಮಾಣಗೊಂಡಿದೆ.

ಹದಿನಾಲ್ಕನೇ ಶತಮಾನದ ಆರಂಭದಲ್ಲಿ ಕಂಪಿಲ ರಾಜ್ಯ ಅವಸಾನದ ಅಂಚನ್ನು ತಲುಪಿತ್ತು. ಇದೇ ಸಮಯದಲ್ಲಿ ದಕ್ಷಿಣದಲ್ಲಿ ಪ್ರಬಲವಾಗಿದ್ದ ಹೊಯ್ಸಳ ಸಾಮ್ರಾಜ್ಯವು ತನ್ನ ಮಹತ್ವವನ್ನು ಕಳೆದುಕೊಳ್ಳುವ ಹಂತದಲ್ಲಿತ್ತು. ಇಂತಹ ಸಂದಿದ್ಧ ಸನ್ನಿವೇಶದಲ್ಲಿ ಭರತಖಂಡದ ಉತ್ತರದಲ್ಲಿ ವ್ಯವಸ್ಥಿತವಾದ ಮತ್ತು ಕೇಂದ್ರಿಕೃತವಾದ ಒಂದು ಪ್ರಬಲ ಸಾಮ್ರಾಜ್ಯವು ಅಸ್ತಿತ್ವದಲ್ಲಿತ್ತು. ಉತ್ತರದ ಸಾಮ್ರಾಜ್ಯವು ಕ್ರಮೇಣವಾಗಿ ದಕ್ಷಿಣದ ಕಡೆಯಲ್ಲಿ ತನ್ನ ರಾಜ್ಯವನ್ನು ವಿಸ್ತರಿಸುವಂಥ ಸಮಯದಲ್ಲಿ ದಕ್ಷಿಣದಲ್ಲಿ ಒಂದು ಪ್ರಬಲ ರಾಜ್ಯದ ಆವಶ್ಯಕತೆ ಇದ್ದಿತು. ಇಂತಹ ಸನ್ನಿವೇಶದಲ್ಲಿ ವಿಜಯನಗರ ಸಾಮ್ರಾಜ್ಯವು ದಕ್ಷಿಣದಲ್ಲಿ ತಲೆ ಎತ್ತಿತ್ತು. ಉತ್ತರದ ಆ ಶಕ್ತಿಗೆ ಪ್ರಬಲವಾದ ಪ್ರತಿರೋಧವನ್ನು ಒಡ್ಡಿತು. ಹೀಗೆ ಕ್ರಿ.ಶ.೧೩೩೬ರ ಸುಮಾರಿಗೆ ವಿಜಯನಗರ ಸಾಮ್ರಾಜ್ಯವು ತನ್ನ ಅಸ್ತಿತ್ವವನ್ನು ಪಡೆಯಿತು. ಇಂತಹ ಸನ್ನಿವೇಶದಲ್ಲಿ ಇಲ್ಲಿನ ರಾಜರುಗಳು ಕರ್ನಾಟಕದ ದೇವಾಲಯಗಳ ವಾಸ್ತುಶಿಲ್ಪಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದರು. ಈ ದೇವಾಲಯಗಳಲ್ಲಿ ಶೈವದೇವಾಲಯಗಳನ್ನು ಮುಖ್ಯ ಕೇಂದ್ರವಾಗಿ ಇಟ್ಟುಕೊಂಡು ಈ ಅಧ್ಯಾಯವನ್ನು ಮುಂದುವರಿಸಲಾಗಿದೆ. ಕರ್ನಾಟಕದಲ್ಲಿ ಒಟ್ಟು ಎರಡು ನೂರ ಹತ್ತೊಂಬತ್ತು ಶೈವ ದೇವಾಲಯಗಳನ್ನು ಶಿವರುದ್ರಸ್ವಾಮಿಯವರು ತಮ್ಮ ಗ್ರಂಥವಾದ "ವಿಜಯನಗರ ಟೆಂಪಲ್ಸ್ ಇನ್ ಕರ್ನಾಟಕ" ಎಂಬ ಗ್ರಂಥದಲ್ಲಿ ಸೂಚಿಸಿದ್ದಾರೆ. ಇಂತಹ ಒಟ್ಟು ಶೈವ ದೇವಾಲಯಗಳನ್ನು ಒಂದೇ ಪ್ರಬಂಧದಲ್ಲಿ ಹಿಡಿದು ಇಡುವುದು ಅಸಾಧ್ಯ. ಆದ್ದರಿಂದ ಕರ್ನಾಟಕದಲ್ಲಿ ಶಾಸನಗಳನ್ನು ಹೊಂದಿರುವ ಶೈವ ದೇವಾಲಯಗಳನ್ನು ವಾಸ್ತುಶೈಲಿಯಿಂದ ಮತ್ತು ಸಾಂಸ್ಕೃತಿಕವಾಗಿ ಮಹತ್ವವೆನಿಸುವ ಪ್ರಮುಖ ಶೈವದೇವಾಲಯಗಳನ್ನು ಇಟ್ಟುಕೊಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಶೈವ ದೇವಾಲಯಗಳಲ್ಲಿ ಕ್ಷೇತ್ರಕಾರ್ಯ ನಡೆಸಿದಾಗ ತಿಮ್ಮಲಾಪುರದ ಶಿವದೇವಾಲಯದ ವರದಿಯನ್ನು ಇಲ್ಲಿ ನೀಡಲಾಗಿದೆ.

## ೨೨. ಹೊಸಪೇಟೆಯ ಜಂಬುನಾಥ ದೇವಸ್ಥಾನ

ಹೊಸಪೇಟೆಯ ಆಗ್ನೆಯಕ್ಕೆ ಐದು ಕಿಲೋಮೀಟರ್ ದೂರದಲ್ಲಿ ಜಂಬುನಾಥನ ಬೆಟ್ಟವಿದೆ. ಬೆಟ್ಟದ ಪೂರ್ವದಲ್ಲಿ ಜಂಬುನಾಥನ ದೇವಸ್ಥಾನವು ನಿರ್ಮಾಣಗೊಂಡಿದೆ. ಕಲ್ಲಹಳ್ಳಿಯ ಶಾಸನವು ತಿಳಿಸುವಂತೆ ಕ್ರಿ.ಶ.೧೫೪೦ರಲ್ಲಿ ಅಚ್ಯುತದೇವನು ತಮ್ಮ ತಂದೆತಾಯಿಗಳಿಗೆ ಪುಣ್ಯವಾಗಬೇಕೆಂದು ಜಂಬುನಾಥದೇವರ ಅಮೃತಪಡಿ ಮುಂತಾದವುಗಳಿಗೆ ದಾನ ನೀಡಿದ್ದಾನೆ.[೩೮] ಹೀಗಾಗಿ ಅಚ್ಯುತ ದೇವನ ಹೊತ್ತಿಗಾಗಲೇ ಜಂಬುನಾಥನ ದೇವಸ್ಥಾನವು ನಿರ್ಮಾಣವಾಗಿರಬೇಕು. ಜಂಬುನಾಥನನ್ನು ಹೆಸರಿಸುವ ಇನ್ನೊಂದು ಶಾಸನ ಕ್ರಿ.ಶ.೧೫೪೭ರ ತಾಮ್ರಶಾಸನ. ಇದರ ಪ್ರಾಕಾರ ವೀರಶೈವ ಕವಿಯಾದ ಎಮ್ಮೆ-ಬಸವನು ಜಂಬುನಾಥನ ಭಕ್ತಾನಾಗಿದ್ದುದನ್ನು ಹಾಗೂ ಸಲಕರಾಜನ ಮಗ ತಿರುಮಲರಾಯನು ಕೋಮಾರಕೆರೆ ಗ್ರಾಮವನ್ನು ದತ್ತಿಬಿಟ್ಟ ವಿವರವಿದೆ. ದೇವಾಲಯಕ್ಕೆ ಹೋಗಬೇಕಾದರೆ ಸುಮಾರು ಒಂದು ಕಿಲೋಮೀಟರ್ ನಷ್ಟು ಬೆಟ್ಟವನ್ನು ಹತ್ತಿಹೋಗಬೇಕು. ಬೆಟ್ಟವನ್ನು ಹತ್ತಿ ಹೋದರೆ ಪೂರ್ವಕ್ಕೆ ಮುಖಮಾಡಿರುವ ದೇವಾಲಯವು ಕಾಣಸಿಗುತ್ತದೆ(ಚಿತ್ರ ೩೪, ೩೫).

ದೇವಾಲಯವು ಎತ್ತರವಾದ ಅಧಿಷ್ಠಾನದ ಮೇಲೆ ರಚನೆಗೊಂಡಿದೆ. ಇದು ಉಪಾನ, ಜಗತಿ, ಕಂಠ, ಕುಮುದ, ಪದ್ಮಭಾಗಗಳನ್ನೊಳಗೊಂಡಿದೆ. ಅಧಿಷ್ಠಾನದ ಮೇಲೆ ಭಿತ್ತಿಯನ್ನು ಕಾಣಬಹುದು. ಭಿತ್ತಿಯಲ್ಲಿ ಗೋಡೆಕಂಬಗಳ ಮಧ್ಯದಲ್ಲಿ ದೇವಕೋಷ್ಠಕಗಳನ್ನು ರಚಿಸಲಾಗಿದೆ. ಇದೇ ರೀತಿಯಲ್ಲಿ ಅಲ್ಲಲ್ಲಿ ಕುಂಬ ಪಂಜರಗಳನ್ನು ಸಹ ನಿರ್ಮಿಸಲಾಗಿದೆ. ಸೂಕ್ಷ್ಮವಾದ ಕೆತ್ತನೆಯಿಂದ ಕೂಡಿದ ಕುಂಬಪಂಜರಗಳು ಕಪೋತದವರೆಗೂ ಮುಂಚಾಚಿವೆ. ಪ್ರಾಕಾರಭಾಗದ ಕಪೋತ ಭಾಗದಲ್ಲಿ ಕೋಷ್ಠಗಳು ಮತ್ತು ಕೀರ್ತಿಮುಖ ರಚನೆಗೊಂಡಿವೆ. ಇದರಿಂದ ದೇವಾಲಯದ ಸೌಂದರ್ಯವು ಹೆಚ್ಚಿದೆ.

ಗರ್ಭಗೃಹದ ಮೇಲೆ ಶಿಖರವನ್ನು ನಿರ್ಮಿಸಲಾಗಿದೆ. ಇದನ್ನು ಇಟ್ಟಿಗೆ ಗಾರೆಗಳಿಂದ ರಚಿಸಲಾಗಿದೆ. ಮಹಾರಂಗಮಂಟಪದ ಕೈಪಿಂಡೆಯ ಗೂಡುಗಳಲ್ಲಿ ವಿವಿಧ ಭಂಗಿಯಲ್ಲಿರುವ ಗಾರೆಯ ಶಿಲ್ಪಗಳನ್ನು ಬಿಡಿಸಲಾಗಿದೆ. ದೇವಸ್ಥಾನದ ಸುತ್ತಲೂ ಎತ್ತರವಾದ ಪ್ರಾಕಾರದ ಗೋಡೆಯನ್ನು ರಚಿಸಲಾಗಿದೆ. ಇದಕ್ಕೆ ಹೊಂದಿಕೊಂಡಂತೆ ಸಾಲುಮಂಟಪವನ್ನು ರಚಿಸಲಾಗಿದೆ. ಪೂರ್ವ ಮತ್ತು ಉತ್ತರ ದಿಕ್ಕಿನಲ್ಲಿ ಎತ್ತರವಾದ ಪ್ರಾಕಾರ ಗೋಪುರಗಳ ರಚನೆಯನ್ನು ಕಾಣಬಹುದು. ಪ್ರಾಕಾರದ ಗೋಪುರಗಳು ಕೋಷ್ಠಕಗಳು ಅರ್ಧಕಂಬಗಳು ಮತ್ತು ವಿವಿಧ ರೀತಿಯ ರಚನೆಯನ್ನು ಹೊಂದಿರುವ ಗಾರೆಯ ಮೂರ್ತಿಗಳಿಂದ ಅಲಂಕರಿಸಲಾಗಿದೆ.

ಪ್ರಾಕಾರದ ಒಳಗಡೆಯಲ್ಲಿ ಕ್ರಿ.ಶ.೧೫೪೯ರಲ್ಲಿ ಪ್ರತಿಷ್ಠಾಪನೆಗೊಂಡ ಹನುಮಂತ ದೇವರ ದೇವಸ್ಥಾನವಿದೆ. ಈ ದೇವಾಲಯವು ಸಂಪೂರ್ಣವಾಗಿ, ವಿಜಯನಗರ ಶೈಲಿಯಲ್ಲಿ ರಚನೆಗೊಂಡಿದೆ. ಇದೇ ಆವರಣದ




೧). ಗರ್ಭ ಗೃಹ ೨).ಅಂತರಾಳ ೩).ಅರ್ಧ ಮಂಟಪ ೪). ರಂಗ ಮಂಟಪ ೫).ಮಹಾರಂಗ ಮಂಟಪ

೨೨). ಹೊಸಪೇಟೆ ಜಂಬೂನಾಥ ದೇವಾಲಯದ ತಲನಕ್ಷೆ.

ಒಳಗಡೆಯಲ್ಲಿ ಒಂದು ಪುರಾತನ ಬಾವಿಯನ್ನು ನೋಡಬಹುದು. ಇದರ ನೀರು ಯಾವಾಗಲೂ ತಂಪಾಗಿರುತ್ತವೆ. ಏಕೆಂದರೆ ದೇವಾಲಯ ಪಕ್ಕದಲ್ಲಿ ಪುರಾತನವಾದ ಒಂದು ವೃಕ್ಷವಿದೆ. ಇಲ್ಲಿ ಈ ಜನರು 'ಹೆಸರು ಇಲ್ಲದ ಮರ. ಬಿಸಿಲು ಇಲ್ಲದ ಬಾವಿ'' ಜಂಬುನಾಥನ ದೇವಸ್ಥಾನದ ವಿಶೇಷ ಎಂದು ಹೇಳುತ್ತಾರೆ.

ದೇವಾಲಯವನ್ನು ಪ್ರವೇಶಿಸಿದೊಡನೆ ಸಿಗುವುದೇ ಸಭಾಮಂಟಪ. ಇದು ಪೂರ್ವ, ದಕ್ಷಿಣ, ಉತ್ತರ ದಿಕ್ಕುಗಳಲ್ಲಿ ಪ್ರವೇಶದ್ವಾರವನ್ನು ಹೊಂದಿದೆ. ದಕ್ಷಿಣ ಮತ್ತು ಉತ್ತರ ದಿಕ್ಕಿನಲ್ಲಿರುವ ಪ್ರವೇಶದ್ವಾರಗಳನ್ನು ಹೂಬಳ್ಳಿಗಳು ಮತ್ತು ವಜ್ರಾಕಾರದ ಕೆತ್ತನೆಗಳಿಂದ ಅಲಂಕರಿಸಲಾಗಿದೆ. ಇವುಗಳಿಗೆ ಹೊಂದಿಕೊಂಡು ಎರಡು ಕಂಬಗಳ ಸಹಾಯದಿಂದ ರಚನೆಗೊಂಡು ಮುಂಚಾಚಿದ ಮುಖಮಂಟಪಗಳಿವೆ. ಈ ಮುಖಮಂಟಪಗಳಲ್ಲಿರುವ ಸೋಪಾನಗಳ ಪಾರ್ಶ್ವದಲ್ಲಿ ಜಗತಿಯನ್ನು ನಿರ್ಮಿಸಲಾಗಿದೆ. ಸಭಾ ಮಂಟಪದ ಮಧ್ಯದಲ್ಲಿ ಚೌಕಾಕಾರದ ನಾಲ್ಕು ಕಂಬಗಳನ್ನು ನಿಲ್ಲಿಸಲಾಗಿದೆ. ಈ ಕಂಬಗಳು ಶೈವ, ವೈಷ್ಣವ, ಗಂಧರ್ವರ, ನೃತ್ಯಗಾರರ, ಸಂಗೀತಗಾರರ ಚಿತ್ರಶಿಲ್ಪಗಳನ್ನೊಳಗೊಂಡಿವೆ. ನಾಲ್ಕು ಕಂಬಗಳ ಮಧ್ಯದಲ್ಲಿರುವ ಭುವನೇಶ್ವರಿಯು ಸರಳವಾಗಿ ಅಲಂಕರಿಸಲಾಗಿದೆ. ಇದರಲ್ಲಿ ಪದ್ಮವನ್ನು ರಚಿಸಲಾಗಿದೆ. ಸಭಾಮಂಟಪದ ಪೂರ್ವದ ಭಿತ್ತಿಯಲ್ಲಿ ದೇವಕೋಷ್ಠವನ್ನು ನಿರ್ಮಿಸಲಾಗಿದೆ. ಇದರಲ್ಲಿ ಶಾಸನಗಳನ್ನೊಳಗೊಂಡ ಮೂರು ನಂದಿಶಿಲ್ಪಗಳನ್ನು ಕಾಣಬಹುದು. ವಿಶಾಲವಾದ ಮಹಾಮಂಟಪದಲ್ಲಿ ಚೌಕಾಕಾರದ ಬೃಹತ್ ಕಂಬಗಳನ್ನು ನಿಲ್ಲಿಸಲಾಗಿದೆ. ಅವುಗಳ ಚೌಕದಲ್ಲಿ ಶೈವ ವೈಷ್ಣವ ಪಂಥಕ್ಕೆ ಸೇರಿದ ಶಿಲ್ಪಗಳಿವೆ. ಅಲ್ಲದೆ ವಿವಿಧ ಭಂಗಿಗಳಲ್ಲಿರುವ ಸ್ತ್ರೀ ಪುರುಷರು ಪ್ರಾಣಿ, ಪಕ್ಷಿಗಳ ಉಬ್ಬು ಕೆತ್ತನೆಗಳಿವೆ. ಮಹಾಮಂಟಪದ ಪ್ರವೇಶದ್ವಾರಗಳಲ್ಲಿ ಸುರುಳಿ ಯಾಳಿಗಳಿಂದ ಬಂಧಿತವಾದ ಸೋಪಾನಗಳನ್ನು ರಚಿಸಲಾಗಿದೆ.

ಸಭಾಮಂಟಪದ ಮುಂದಿರುವುದೇ ಅಂತರಾಳ. ಅಂತರಾಳವು ಆಯಾತಾಕಾರದ ರಚನೆ ಹೊಂದಿದೆ. ಸಭಾಮಂಟಪದಿಂದ ಅಂತರಾಳಕ್ಕೆ ಪ್ರವೇಶಿಸುವ ಪ್ರವೇಶದ್ವಾರಕ್ಕೆ ಪದ್ಮಗಳ ಹೂವಿನ ಎಸಳುಗಳನ್ನು ಕಾಣಬಹುದು. ದ್ವಾರದ ಎಡಬಲಗಳಲ್ಲಿ ಶೈವದ್ವಾರ ಪಾಲಕರಾದ ನಂದಿ, ಭೃಂಗಿಯರ ವಿಗ್ರಹಗಳನ್ನು ಕಾಣಬಹುದು. ಅರ್ಧಮಂಟಪದ ಪಾರ್ಶ್ವದಲ್ಲಿ ಪ್ರದಕ್ಷಿಣಾಪಥದ ದ್ವಾರಪಾಲಕರ ವಿಗ್ರಹಗಳಿವೆ. ಒಟ್ಟಾರೆ ಇಡೀ ದೇವಾಲಯವು ಗರ್ಭಗೃಹ, ಅಂತರಾಳ, ಅರ್ಧಮಂಟಪ ಪ್ರದಕ್ಷಿಣಾಪಥ, ಸಭಾಮಂಟಪ ಮತ್ತು ಮಹಾರಂಗಮಂಟಪಗಳನ್ನೊಳಗೊಂಡಿದೆ.

**ಅಡಿಟಿಪ್ಪಣಿಗಳು**

೧. EC X, Kl.73

೨. ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬, ಪು.೨೩

೩. ಸೂರ್ಯನಾಥ ಯು.ಕಾಮತ್(ಸಂ), **ಕರ್ನಾಟಕ ಗ್ಯಾಸೆಟಿಯರ್,** ಕರ್ನಾಟಕ ಸರ್ಕಾರ, ಬೆಂಗಳೂರು, ಪು.೫೭೬

೪. EC VII, Ng.58

೫. ದೇವರಕೊಂಡಾ ರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು.೩

೬. ಜೀರ್‍ಗಿಕಟ್ಟೆ ಬಸಪ್ಪ, **ಕರ್ನಾಟಕ ಯಾತ್ರೆ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು.೪೭೮

೭. ಕವಿಶಾಸಂ.೧, ಹಗರಿಬೊಮ್ಮನಹಳ್ಳಿ, ಸಂಖ್ಯೆ ೧೫, ಕ್ರಿ.ಶ.೧೦೫೫

೮. ಕವಿಶಾಸಂ.೧, ಹಗರಿಬೊಮ್ಮನಹಳ್ಳಿ, ಸಂಖ್ಯೆ ೧೦, ಕ್ರಿ.ಶ.೧೫೩೧

೯. ಕವಿಶಾಸಂ.೧, ಹಗರಿಬೊಮ್ಮನಹಳ್ಳಿ, ಸಂಖ್ಯೆ ೧೧, ಉಲ್ಲೇಖವಿಲ್ಲ

೧೦. EC X, Mb.237

೧೧. EC XVII, MR.147

೧೨. ಜೀರ್‍ಗಿಕಟ್ಟೆ ಬಸಪ್ಪ, ಪೂರ್ವೋಕ್ತ, ಪು.೪೬

೧೩. ವೆಂಕಟರತ್ನಂ ಎ.ವಿ., **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,** ಪು.೧೧

೧೪. ಅದೇ, ಪು.೧೧

೧೫. ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳು, **ಶ್ರೀ ಶಂಕರ ಭಗವತ್ಪಾದ ವೃತ್ತಾಂತ ಸಾರ ಸರ್ವಸ್ವ** ಆಧ್ಯಾತ್ಮ ಪ್ರಕಾಶನ ಕಾರ್ಯಾಲಯ, ಹೊಳೆನರಸಿಪುರ, ೧೯೯೫, ಪು.೪೯೦

೧೬. **ಕರ್ನಾಟಕ ಗೆಜೆಟಿಯರ್,** ಪು.೫೭೫

೧೭. ಕವಿಶಾಸಂ.೧, ಹೊಸಪೇಟೆ, ಕ್ರಿ.ಶ.೧೫೩೯

೧೮. ಶಿವರುದ್ರಸ್ವಾಮಿ ಎನ್., **ಬಯಕಾರ ರಾಮಪ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪು.೧೭

೧೯. Shivaradru swamy N., **Vijayanagar Temples in Karnataka,** Pp.223

೨೦. ಷೇಕ್ ಅಲಿ ಬಿ.(ಪ್ರ.ಸಂ), **ಕರ್ನಾಟಕ ಚರಿತ್ರೆ ಸಂಪುಟ ೩,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೬೫

೨೧. ಅದೇ, ಪು.೪೩೧

೨೨. EC VII, Ng.8

೨೩. ಕವಿಶಾಸಂ.೩, ಸಂಖ್ಯೆ ೩೯೮, ಕ್ರಿ.ಶ.೧೪೫೫

೨೪. **ಕರ್ನಾಟಕ ಚರಿತ್ರೆ ಸಂ.೩,** ಪೂರ್ವೋಕ್ತ, ಪು.೧೦೮

೨೫. ಅದೇ, ಪು.೧೧೪

೨೬. EC III, (1974), My.199, ಕ್ರಿ.ಶ.೧೪೩೪

೨೭. **ಕರ್ನಾಟಕ ರಾಜ್ಯ ಗ್ಯಾಸೆಟೀಯರ್,** ಪೂರ್ವೋಕ್ತ, ಪು.೬೦೪

೨೮. EC VI, Ch.224, ಕ್ರಿ.ಶ.೧೫೨೩

೨೯. SII IV, No.266, ಕ್ರಿ.ಶ.೧೫೪೫

೩೦. ಕವಿಶಾಸಂ ೩, ನಂ.೮೪, ಕ್ರಿ.ಶ.೧೫೪೫

೩೧. ಕವಿಶಾಸಂ.೩, ಪು.xxxii

೩೨. ವಸುಂಧರಾ ಫಿಲಿಯೋಜ, **ಅಳಿದುಳಿದ ಹಂಪೆ,** ಪ್ರೇಮಸಾಯಿ ಪ್ರಕಾಶನ, ಬೆಂಗಳೂರು, ಪು.೨೨

೩೩. ಕವಿಶಾಸಂ ೩, ಸಂಖ್ಯೆ ೫೫, ಕ್ರಿ.ಶ. ೧೧೯೯

೩೪. ಕವಿಶಾಸಂ.೩, ಸಂಖ್ಯೆ ೫೪, ಕ್ರಿ.ಶ.೧೨೩೬

೩೫. ಕವಿಶಾಸಂ.೩, ಸಂಖ್ಯೆ ೩೪, ಕ್ರಿ.ಶ.೧೫೧೦

೩೬. ಕವಿಶಾಸಂ ೩, ಸಂಖ್ಯೆ xxxv

೩೭. ವಸುಂಧರಾ ಫಿಲಿಯೋಜ, ಪೂರ್ವೋಕ್ತ, ಪು.೨೪

೩೮. ಕವಿಶಾಸಂ.೧, ಹೊಸಪೇಟೆ ಸಂಖ್ಯೆ ೧೭, ಕ್ರಿ.ಶ.೧೫೪೦

# ದೇವಾಲಯಗಳ ಸಾಂಸ್ಕೃತಿಕ ಚಿತ್ರಣ

## ದೇವಸ್ಥಾನ ವಿದ್ಯಾಕೇಂದ್ರಗಳಾಗಿ

ವಿದ್ಯೆ ಮನುಷ್ಯನ ಜೀವನದ ಅಂಗ, ವಿದ್ಯೆಯನ್ನು ಕಲಿಯುವ ಮುಖೇನ ವ್ಯಕ್ತಿ ಸಮಾಜದಲ್ಲಿ ಉನ್ನತ ಸ್ಥಾನವನ್ನು ಗಳಿಸಬಲ್ಲ ಎಂಬುದು ಕನ್ನಡಿಗರ ಅಚಲವಾದ ನಂಬಿಕೆ. ಕರ್ನಾಟಕದ ವಿದ್ಯಾಭ್ಯಾಸ ಕ್ರಮವು ಭಾರತೀಯ ವಿದ್ಯಾಭ್ಯಾಸ ಕ್ರಮಕ್ಕೆ ಪೂರಕವಾಗಿ ಬೆಳೆದುಬಂದದ್ದು. ಪ್ರಾಚೀನ ಭಾರತೀಯ ವಿದ್ಯಾಭ್ಯಾಸವು ಬಹುಪಾಲು ಧಾರ್ಮಿಕ ಅಧ್ಯಯನಕ್ಕೆ ಪ್ರಾಶಸ್ತ್ಯ ನೀಡುತ್ತದೆ. ಭಾರತೀಯರಲ್ಲಿ ಬೇರೂರಿರುವ ಮೋಕ್ಷದ ಕಲ್ಪನೆಯೇ ಇದಕ್ಕೆ ಕಾರಣವಿರಬೇಕು. ವಿದ್ಯಾಭ್ಯಾಸವೆನ್ನುವುದು ಈ ಮೋಕ್ಷಕ್ಕೆ ಒಂದು ಹಾದಿಯಿದ್ದಂತೆ ಎಂದು ಭಾರತೀಯರು ನಂಬಿದ್ದರು,[೧] ಇದರಿಂದಾಗಿ ಇಲ್ಲಿ ಆಧ್ಯಾತ್ಮಕ್ಕಾಗಿ ಹೆಚ್ಚಾಗಿ ವಿದ್ಯೆಯನ್ನು ಪೋಷಿಸಿದರು. ವಿದ್ಯೆಯೇ ನಿಜವಾದ ಶ್ರೀಮಂತಿಕೆ, ಇದನ್ನು ಯಾರು ಕಸಿದುಕೊಳ್ಳಲಾರರು, ಅದು ಅನರ್ಘ್ಯವಾದುದು ಎಂಬುವುದು ನಮ್ಮವರ ನಂಬಿಕೆ.

ವೈದಿಕದಲ್ಲಿ ಮೌಖಿಕ ಶಿಕ್ಷಣ ಪದ್ಧತಿಯು ಜಾರಿಯಿದ್ದಂತಿತ್ತು. ಇದನ್ನು ವಿದ್ಯಾಭ್ಯಾಸ ಪದ್ಧತಿಯ ಮೊದಲ ಘಟ್ಟ ಎನ್ನಬಹುದು.[೨] ಇಲ್ಲಿ ಗುರುವಿನ ಮನೆಯೇ ಪಾಠಶಾಲೆಯಾಗಿರುತ್ತಿತ್ತು. ಇದನ್ನು ಗುರುಕುಲ ಶಿಕ್ಷಣ ಎಂದು ಕರೆಯಲಾಗುತ್ತಿತ್ತು. ಕ್ರಿ.ಪೂ. ಮೂರನೇಯ ಶತಮಾನದ ಅಶೋಕನ ಕಾಲದಲ್ಲಿ ಬೌದ್ಧ ಧರ್ಮವು ದೇವಾಲಯಗಳಿಗೆ ನಾಂದಿಯಾದಂತೆ ಸ್ತೂಪಗಳು ರಚನೆ ಹೊಂದಿದಂತೆಯೇ ಬೌದ್ಧ ವಿಹಾರಗಳ ರಚನೆ ಹಿಂದೂ ವಿಶ್ವವಿದ್ಯಾಲಯಗಳ ಮೇಲೆ ಪ್ರಭಾವ ಬೀರಿರಬೇಕು. ಕ್ರಿ.ಶ.ಐದನೇಯ ಶತಮಾನದ ನಲಂದಾ ವಿಶ್ವವಿದ್ಯಾಲಯದ ಬೆಳವಣಿಗೆಯಂತೆ ಹಿಂದೂ ವಿಶ್ವವಿದ್ಯಾಲಯಗಳ ಬೆಳವಣಿಗೆ ಕಂಡುಬಂದಿತು.

ಕ್ರಿ.ಶ.ಒಂಬತ್ತನೇಯ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಮತ್ತು ಭಾರತದಲ್ಲಿ ವ್ಯವಸ್ಥಿತವಾದ ವಿದ್ಯಾಕೇಂದ್ರಗಳು ರೂಪಗೊಂಡಿದ್ದನ್ನು ಶಾಸನಗಳು ತಿಳಿಸುತ್ತವೆ. "ಕರ್ನಾಟಕದಲ್ಲಿ ವ್ಯವಸ್ಥಿತವಾಗಿ ರೂಪಗೊಂಡ ಮೊದಲ ವಿದ್ಯಾಸಂಸ್ಥೆಯೆಂದರೆ ದೇವಸ್ಥಾನ."[೩] ಕರ್ನಾಟಕದಲ್ಲಿ ಪ್ರಥಮವಾಗಿ ದೇವಾಲಯಗಳನ್ನು ವಿದ್ಯಾಕೇಂದ್ರಗಳನ್ನಾಗಿ ಬಳಸಿದವರು ಪಾಶುಪತರು. ಇವರ ಉಲ್ಲೇಖ ಕನ್ನಡದ ಕ್ರಿ.ಶ.೪೫೦ ಪ್ರಥಮ ಶಾಸನವಾದ ಹಲ್ಮಿಡಿ ಶಾಸನದಲ್ಲಿ ಬರುತ್ತದೆ. ಹಲ್ಮಿಡಿ ಶಾಸನದಲ್ಲಿ ಮೂರು ಸಲ ಪಾಶುಪತ ಎಂಬ ಹೆಸರು ಉಲ್ಲೇಖಗೊಂಡಿದೆ.[೪] ಆದರೆ ಕ್ರಿ.ಶ.೯೫೭ರ ಬಾಗಳಿಯ ಶಾಸನದಲ್ಲಿ

ಅಗ್ರಹಾರ ಬಾಳ್ಗಳಿ ಊರೊಡೆಯ ಪಶುಪತಿ ಭಟ್ಟರಿಗೆ ತೆರಿಗೆ ದಾನ ಮಾಡಿದ ವಿವರ ಕಂಡುಬರುತ್ತದೆ.[೫] ಬಾಗಳಿಯು ಪ್ರಸಿದ್ಧ ದೇವಸ್ಥಾನವನ್ನು ಹೊಂದುವುದರ ಜೊತೆಯಲ್ಲಿ ಅಗ್ರಹಾರವಾಗಿತ್ತು ಮತ್ತು ಇದು ಪಾಶುಪತರಿಗೆ ಸೇರಿದ್ದಾಗಿತ್ತು ಎಂಬುದರ ಸ್ಪಷ್ಟ ನಿದರ್ಶನಗಳು ದೊರೆಯುತ್ತವೆ. ಹೀಗಾಗಿ ಒಂಬತ್ತು ಹತ್ತನೆಯ ಶತಮಾನದ ಅವಧಿಯಲ್ಲಿ ಪಾಶುಪತರ ದೇವಾಲಯಗಳು ವಿದ್ಯಾಕೇಂದ್ರಗಳಾಗಿ ರೂಪುಗೊಂಡಿರಬೇಕು. ಅದು ಬಾಗಳಿಯ ಶಾಸನದಲ್ಲಿ ಉಲ್ಲೇಖಗೊಂಡಿರುವುದನ್ನು ನೋಡಬಹುದು. ಪಾಶುಪತ ದೇವಸ್ಥಾನಗಳ ಆಚಾರ್ಯರು, ದೇಗುಲ, ಮಠ, ಶಾಲೆಗಳ ನಿರ್ಮಾಪಕರು. ಕಾಳಾಮುಖಾದಿ ಶೈವರು ಪ್ರಾರಂಭಿಸಿದ್ದ ಶಿಕ್ಷಣ ನೀಡುವ ಪವಿತ್ರ ಸೇವೆಯನ್ನು ಪಾಶುಪತರೂ ಕೈಗೊಂಡರು.[೬] ಹಳ್ಳಿ ಹಳ್ಳಿಗಳಲ್ಲಿ ಕಂಡುಬರುವ ಬಹುದೊಡ್ಡ ದೇವಸ್ಥಾನಗಳ ನಿರ್ಮಾಪಕರು ಪಾಶಪತರು. ಪಾಶುಪತರ ದೇವಸ್ಥಾನಗಳಲ್ಲಿ ''ಸ್ಥಾನಪತಿ'' ಎಂಬ ಸನ್ಯಾಸಿ ದೇವಸ್ಥಾನದಲ್ಲಿ ಅಥವಾ ಮಠದಲ್ಲಿ ವಾಸಿಸುತ್ತಿದ್ದನು. ತಪಸ್ವಿಯಾಗಿ ವಿದ್ಯಾದಾನ ಮಾಡುತ್ತಿದ್ದ ಶೈವ ಸನ್ಯಾಸಿಯನ್ನು ಸ್ಥಾನಿಕ ಎಂದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಆದ್ದರಿಂದಲೇ ಆ ಕಾಲದಲ್ಲಿ ದೇವಸ್ಥಾನವೇ ಮಠವಾಗಿ ಮಠವೇ ಶಾಲೆಯಾಗಿತ್ತು. ಮಠ ಎಂಬುದಕ್ಕೆ ಯತಿಗಳ ವಾಸಸ್ಥಾನ ಎಂಬ ಅರ್ಥ ಇದೆ. ಭಕ್ತರು ದೇವಸ್ಥಾನದ ಪೂಜೆಗಳಿಗೆ ದತ್ತಿ ಬಿಡುವುದರ ಜೊತೆಯಲ್ಲೆ ವಿದ್ಯಾಭ್ಯಾಸಕ್ಕೆ ದಾನದತ್ತಿಗಳನ್ನು ಕೊಡಲು ಆರಂಭಿಸಿದರು. ಇದರಿಂದ ಹತ್ತನೇಯ ಶತಮಾನದಷ್ಟೊತ್ತಿಗೆ ದೇವಸ್ಥಾನವು ವಿದ್ಯಾಕೇಂದ್ರವಾಗಿ ರೂಪಗೊಂಡಿರಬೇಕು ದೇವಸ್ಥಾನದಲ್ಲಿ ವಾಸಿಸುವ ಶೈವಯತಿಗಳು ಉದ್ದಾಮ ಪಂಡಿತರಾಗಿದ್ದುದ್ದರಿಂದ ವೈಯಕ್ತಿಕವಾದ ತಪಃಕರ್ಮಿಗಳ ಜೊತೆಯಲ್ಲಿ ವಿದ್ಯಾದಾನವನ್ನು ಕೈಗೊಂಡರು.

ಹನ್ನೆರಡನೆಯ ಶತಮಾನದಲ್ಲುಂಟಾದ ಸಮಾಜೋ ಧಾರ್ಮಿಕ ಕ್ರಾಂತಿಯು ವಿದ್ಯಾಭ್ಯಾಸದ ಮೇಲೆ ಸ್ವಲ್ಪ ಪರಿಣಾಮ ಬೀರಿತು. ಜಾತಿಗಳನ್ನು ಹುಟ್ಟಿನ ಆಧಾರದಿಂದ ನಿರ್ಧರಿಸುವ ಕ್ರಮವನ್ನು ಖಂಡಿಸಿದ ವಚನಚಳುವಳಿ, ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಜಾತಿಯನ್ನು ನಿರ್ಮಿಸ ಹೊರಟಿತು. ಅದುವರೆಗೂ ಒಂದು ವರ್ಗಕ್ಕೆ ಮಾತ್ರ ಸೀಮಿತವಾಗಿದ್ದ ವೇದಾದ್ಯಯನವನ್ನು ಎಲ್ಲರಿಗೂ ಕಲ್ಪಿಸಿಕೊಟ್ಟಿತು. ಸಂಸ್ಕೃತದಲ್ಲಿ ಅಡಗಿಸಿದ್ದ ಧರ್ಮದ ತಿರುಳನ್ನು ಕನ್ನಡದಲ್ಲಿ ಬಿಚ್ಚಿಟ್ಟರು. ವಿದ್ಯಾಭ್ಯಾಸವನ್ನು ಸಾರ್ವತ್ರಿಕಗೊಳಿಸುವ ಶರಣರ ಪ್ರಯತ್ನವನ್ನು, ಶೈವ, ವೀರಶೈವ ಮಠಗಳು ಇಂದಿನವರೆಗೂ ಮುಂದುವರಿಸಿಕೊಂಡು ಬಂದಿವೆ.

ವಿಜಯನಗರ ಕಾಲದಲ್ಲಿ ವಿದ್ಯಾಭ್ಯಾಸಕ್ಕೆ ವಿಶೇಷ ಸ್ಥಾನವನ್ನು ಕೊಡಲಾಗಿತ್ತು. ಶೈವ, ವೀರಶೈವ ಮಠಗಳು, ಪಾಶುಪತ ದೇವಸ್ಥಾನಗಳು ಮತ್ತು ಜೈನರ ಅಗ್ರಹಾರಗಳು, ಬಸದಿಗಳು ಅಂದಿನ ಕಾಲದ ಪ್ರಮುಖ ವಿದ್ಯಾಕೇಂದ್ರಗಳಾಗಿದ್ದವು. ಈ ಕಾಲಕ್ಕಾಗಲೇ ವಿದ್ಯಾಭ್ಯಾಸ ಕ್ರಮ ಮತ್ತು ಪಠ್ಯ ವಿಷಯಗಳಲ್ಲಿ ಅನೇಕ ಬಗೆಯ ಬೆಳವಣಿಗೆ ಹೊಂದಿದ್ದವು. ಶಾಸ್ತ್ರಗಳ ಬಗೆಗಿನ ವ್ಯಾಸಂಗವನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡುವ ವಾತಾವರಣ ನಿರ್ಮಾಣವಾಗಿತ್ತು. ವಿಜಯನಗರ ಕಾಲದಲ್ಲಿ ವೀರಶೈವ ಮತ್ತು ಪಾಶುಪತ

ದೇವಸ್ಥಾನಗಳು ಮತ್ತು ಮಠಗಳು ವಿದ್ಯಾಕೇಂದ್ರಗಳಾಗಿ ಮುಂದುವರೆದವು. ವಿಜಯನಗರದ ಸಂಗಮ ವಂಶದ ಅರಸರಿಗೆ ಕಾಳಾಮುಖಪರಂಪರೆಯ ಗುರುಗಳು ರಾಜಗುರುಗಳಾಗಿದ್ದನ್ನು ಶಾಸನಗಳು ತಿಳಿಸುತ್ತವೆ. ಈ ಗುರುಗಳು ಪಂಡಿತರಾಗಿದ್ದು ವಿಜಯನಗರದಲ್ಲಿ ಮಠಗಳನ್ನು ಹೊಂದಿರುವ ಸಾಧ್ಯತೆ ಇದೆ. ಈ ಕಾಳಾಮುಖರೂ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡುವ ಚಟುವಟಿಕೆ ಉಳ್ಳವರಾಗಿದ್ದರು. ದೇವಾಲಯಗಳಿಗೆ ಸಂಬಂಧಿಸಿದಂತೆ ಇದ್ದ ಮಠಗಳಿಗೆ ಪ್ರೌಢವಿದ್ಯಾಭ್ಯಾಸವನ್ನು ನಿರ್ವಹಿಸಲು ಅನುಕೂಲವಾಗುವಂತೆ ರಾಜಾಶ್ರಯ ಅಥವಾ ಅಧಿಕಾರಿಗಳ ಆಶ್ರಯ ಇರುತ್ತಿತ್ತು. ಅಗ್ರಹಾರಗಳು ಮಠಗಳು ಹಳ್ಳಿಹಳ್ಳಿಗಳಲ್ಲಿ ಪ್ರೌಢವಿದ್ಯೆಯ ಅಧ್ಯಯನಕ್ಕೆ ಅನುಕೂಲವನ್ನು ಕಲ್ಪಿಸಿಕೊಡುತ್ತಿದ್ದವು. ಹಿಂದಿನಂತೆಯೇ ವಿಜಯನಗರ ಕಾಲದಲ್ಲಿ ಈ ಪರಂಪರೆ ಉಳಿದು ಬೆಳೆದು ಬಂದಿತು.[೭] ದೇವಾಲಯ ಮತ್ತು ಮಠಗಳ ಪರಂಪರೆ ವಿಜಯನಗರ ಸ್ಥಾಪನೆಯ ವೇಳೆಗೆ ಸಾಕಷ್ಟು ಬೆಳೆದು ಬಂದಿತ್ತು. ರಾಜರು, ಪ್ರಜೆಗಳು, ಶ್ರೇಣಿಗಳು ಅಧಿಕಾರಿಗಳಿಂದ ದತ್ತಿದಾನಗಳನ್ನು ಅವು ಸ್ವೀಕರಿಸುತ್ತಿದ್ದವು. ಅಂದಿನ ದೇವಾಲಯಗಳು, ಮಠಗಳು ಕೇವಲ ಧಾರ್ಮಿಕ ಸಂಸ್ಥೆಗಳಾಗಿಯೇ ಉಳಿದಿರಲಿಲ್ಲ, ಬದಲಾಗಿ ಶೈಕ್ಷಣಿಕ ಆರ್ಥಿಕ ಹಾಗೂ ಸಾಮಾಜಿಕ ಘಟಕಗಳಾಗಿಯೂ ರೂಪತಳೆದಿದ್ದವು.

ದೇವಸ್ಥಾನಕ್ಕೆ ಹೊಂದಿಕೊಂಡಂತೆ, ಅವುಗಳಿಗೆ ಅಂಗವಾಗಿ ಮಠವಿದ್ದಿತು. ಮಠಕ್ಕೆ ಪ್ರತ್ಯೇಕ ಅಸ್ತಿತ್ವವಿಲ್ಲ. ಆದ್ದರಿಂದ ದೇವಸ್ಥಾನ ಮತ್ತು ಮಠ ಅಭಿನ್ನ[೮] ಮಠವು ದೇವಸ್ಥಾನಕ್ಕೆ ಹೊಂದಿಕೊಂಡಂತೆ ಮಠದ ಕಟ್ಟಡವನ್ನು ಕಟ್ಟಲಾಗುತಿತ್ತು. ಮಠಗಳು ಸನ್ಯಾಸಿಗಳ ವಾಸಸ್ಥಾನ ಎಂಬುದನ್ನು ಹಿಂದೆಯೇ ನೋಡಿದ್ದೇವೆ. ದೇವಸ್ಥಾನದ ಆದಾಯ, ಮಠದ ಆದಾಯ ಒಂದೇ ಅವೆರೆಡು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತಿದ್ದವು. ವಿಜಯನಗರ ಕಾಲದಲ್ಲೂ ದೇವಸ್ಥಾನಗಳು ಮಠಗಳಲ್ಲಿನ ವಿದ್ಯಾರ್ಥಿಗಳಿಗೆ ವಸತಿ ಮತ್ತು ಊಟದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದವು. ಹಂಪಿಯ ಹರಿಹರ ದೇವನ ಕಾಲದಿಂದಲೂ ಶೈವ, ವೀರಶೈವ, ಧಾರ್ಮಿಕ ಮಠಗಳ, ದೇವಸ್ಥಾನಗಳ, ಗುರುಗಳ, ಜಿಜ್ಞಾಸುಗಳ ದಾರ್ಶನಿಕರ ಚಟುವಟಿಕೆಗಳ ಕೇಂದ್ರವಾಗಿತ್ತು.[೯] ಈ ತರದ ಚಟುವಟಿಕೆಗಳು ವಿಜಯನಗರ ಸಾಮ್ರಾಜ್ಯವು ಕೊನೆಗೊಳ್ಳುವರೆಗೂ ಮುಂದುವರೆದಿತ್ತು. ಹಂಪಿಯಲ್ಲಿನ ಶಾಸನವೊಂದು ವೀರಶೈವ ಶಂಕರದಾಸಿಮಯ್ಯನ ಆರಾಧ್ಯ ದೈವವಾಗಿದ್ದ ''ಜಡೆಯ ಶಂಕರ ಲಿಂಗನ ಹೆಸರನ್ನು ತಿಳಿಸುತ್ತದೆ.[೧೦] ಅದು ಕೋಟೆಯ ದಿಡ್ಡಿ ಬಾಗಿಲನ್ನು ಹೆಸರಿಸುವಾಗ ಬಳಕೆಯಾಗಿದ್ದು, ಇದರ ಆಧಾರದಿಂದ ದಿಡ್ಡಿಗೆ ಸಮೀಪದಲ್ಲಿ ಒಂದು ಮಠವಿರಬಹುದು ಮತ್ತು ಅದರ ಪಕ್ಕದಲ್ಲೆಲ್ಲೊ ಜಡೆಶಂಕರ ದೇವರ ದೇವಸ್ಥಾನವೂ ಇರಬಹುದು. ಈಗ ಅಕ್ಕ-ತಂಗಿಯರ ಕಲ್ಲುಗಳ ಹಿಂದೆ ಈ ಮಠವಿರಬೇಕು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೧೧]

ವಿರೂಪಾಕ್ಷ ದೇವಸ್ಥಾನದ ಹಿಂದೆ ಪಶ್ಚಿಮ ಪ್ರಾಕಾರದ ಹೊರಗೆ ವಿರೂಪಾಕ್ಷ ಪಂಡಿತರ ಮಠ ಇತ್ತು. ಕ್ರಿ.ಶ.೧೩೯೬ರ ಶಾಸನವೊಂದು ಈ ವಿಷಯವನ್ನು ತಿಳಿಸುತ್ತದೆ. ಶಾಸನದಲ್ಲಿ ವಿರೂಪಾಕ್ಷ ಪಂಡಿತನು

ಹದಿಮೂರು ಗ್ರಂಥಗಳನ್ನು ರಚಿಸಿದನೆಂದು ತಿಳಿಸಲಾಗಿದೆ. ಈ ಮಠವು ವಿಜಯನಗರ ಕಾಲದಲ್ಲಿ ಒಂದು ಬಹುಮುಖ್ಯವಾದ ವಿದ್ಯಾಸಂಸ್ಥೆ ಹೊಂದಿರುವ ಮಠವಾಗಿದ್ದಿರಬೇಕು.[೧೨] ಹಂಪೆಯ ರಥಬೀದಿಯಲ್ಲಿ ಹಾವಿನಾಳು ಮಠವು ಎರಡನೇಯದೇವರಾಯನ ಆಳ್ವಿಕೆಯ ಕಾಲದಲ್ಲಿ ಹಂಪೆಯಲ್ಲಿ ಬಹುಪ್ರಭಾವಿ ಮಠಗಳಲ್ಲೊಂದಾಗಿತ್ತು. ಈ ಮಠದ ಮುಖ್ಯ ಅಧಿಪತಿ ಶರಣಪಂಪಯ್ಯ ಎಂಬ ಮುಖ್ಯ ಸ್ಥಾನವನ್ನು ಲಕ್ಕಣದಂಡೇಶನು ತನ್ನ ಕೃತಿ ಶಿವತತ್ವ ಚಿಂತಾಮಣಿಯಲ್ಲಿ ವಿವರಿಸಿದ್ದಾನೆ.[೧೩]

ಅಗ್ರಹಾರಗಳು ವಿಜಯನಗರ ಕಾಲದಲ್ಲಿ ಅಸ್ತಿತ್ವವನ್ನು ಹೊಂದಿದ್ದವು. ಅಗ್ರಹಾರಗಳು ಉನ್ನತ ವ್ಯಾಸಂಗದ ಕೇಂದ್ರಗಳು. ಅಗ್ರಹಾರವೆಂದರೆ ರಾಜನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಪ್ರದೇಶವಾಗಿದೆ. ಬ್ರಾಹ್ಮಣರೇ ಅಗ್ರಹಾರದ ಪ್ರಭುಗಳು, ಇವರನ್ನು ಮಹಾಜನಗಳು ಎಂದು ಕರೆಯಲಾಗುತ್ತಿತ್ತು. ಅಗ್ರಹಾರದಲ್ಲಿ ಬ್ರಾಹ್ಮಣರಲ್ಲದೆ ಇತರೇ ಜಾತಿಯ ಜನರೂ ವಾಸವಾಗಿದ್ದರು. ಆದರೆ ಊರಿನ ಒಡೆತನವೆಲ್ಲ ಬ್ರಾಹ್ಮಣರಿಗೇ ಸೇರಿದ್ದು. ಮಹಾಜನಗಳು ಇತರೆ ಜನರ ವಿಷಯದಲ್ಲಿ ಔದಾರ್ಯದಿಂದಲೇ ನಡೆದುಕೊಂಡಿದ್ದಾರೆ. ಮಧ್ಯಯುಗೀನ ಕಾಲದಲ್ಲಿ ಅಗ್ರಹಾರದಲ್ಲಿ ಕಟ್ಟಿಸಿದ ದೇವಸ್ಥಾನಕ್ಕೆ ಮಠಗಳಿಗೆ ಮಹಾಜನರು ದತ್ತಿಯನ್ನು ಬಿಟ್ಟಿದ್ದಾರೆ. ಅಗ್ರಹಾರಗಳು ವೈದಿಕ ಸಂಪ್ರದಾಯದ ವಿದ್ಯಾಕೇಂದ್ರಗಳಾಗಿದ್ದವು. ಹಾಗಾಗಿ ದೇವಸ್ಥಾನಗಳು ಅಗ್ರಹಾರದ ಅವಿಭಾಜ್ಯ ಅಂಗಗಳಾಗಿದ್ದವು. ವಿದ್ಯಾವಂತ ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿದ್ದ ವಿದ್ಯಾಭ್ಯಾಸದ ಕೇಂದ್ರವಾಗಿ ಅಗ್ರಹಾರ ರೂಪುಗೊಂಡಿತ್ತು.[೧೪] ವಿರುಪಣ್ಣ ಒಡೆಯರ ಮಂತ್ರಿ ಕಾಮರಸ ಎಂಬುವನು ತಾನು ಪಡೆದ ಜಮೀನಿನಲ್ಲಿ ಒಂದು ಅಗ್ರಹಾರವನ್ನು ಕಟ್ಟಿಸಿ ಅದನ್ನು ಹರಿಹರಪುರ ಎಂದು ಕರೆದನು.[೧೫] ಮೊದಲನೆಯ ಹರಿಹರನ ಸಹೋದರ ಮಾರಪ್ಪನು ಸೊರಬ ತಾಲ್ಲೂಕಿನ ಹೆಜ್ಜೆ ಗ್ರಾಮವನ್ನು ಅಗ್ರಹಾರವಾಗಿ ಪರಿವರ್ತಿಸಿದನು. ಕ್ರಿ.ಶ.೧೩೪೬ರಲ್ಲಿ ಆ ಗ್ರಾಮಕ್ಕೆ "ಸಂಗಮಪುರವೆಂದು" ನಾಮಕರಣ ಮಾಡಿದ.[೧೬] ಮತ್ತೊಂದು ನಿದರ್ಶನದಂತೆ ದಾನ ಕೊಟ್ಟ ಭೂಮಿಯನ್ನು ನಾಲ್ಕುಭಾಗ ಮಾಡಿ ಒಂದು ಭಾಗ ದೇವಸ್ಥಾನಕ್ಕೂ, ಇನ್ನೊಂದು ಭಾಗವನ್ನು ಒಂದು ಅಗ್ರಹಾರವಾಗಿ ರಚಿಸಲಾಯಿತು.

ಶಾಸನಗಳ ಸಹಾಯದಿಂದ ಅಭ್ಯಾಸಿಸುವುದಾದರೆ, ದೇವಸ್ಥಾನಕ್ಕೂ ಅಗ್ರಹಾರಕ್ಕೂ ನಿಕಟವಾದ ಸಂಬಂಧವಿತ್ತು. ಅಗ್ರಹಾರಗಳು ತಮ್ಮದೇ ಆದ ಒಂದು ಪ್ರಮುಖ ದೇವಾಲಯವನ್ನು ಹೊಂದಿರುತ್ತಿದ್ದರು. ಪ್ರಮುಖ ದೇವಾಲಯವಲ್ಲದೆ, ಇನ್ನೂ ಅನೇಕ ದೇವಾಲಯಗಳು ಅಗ್ರಹಾರದಲ್ಲಿ ನಿರ್ಮಾಣವಾಗಿರುತ್ತಿದ್ದವು. ಪ್ರಮುಖವಾದ ದೇವಾಲಯಗಳಲ್ಲಿ ಅಗ್ರಹಾರದ ಮಹಾಜನರ ಸಭೆ ಸೇರುತ್ತಿತ್ತು. ಕ್ರಿ.ಶ.೧೪೬೬ರಲ್ಲಿ ಗೋರೂರು ಗ್ರಾಮದ ಮಹಾಜನಗಳು ಅವರ ದೇವಸ್ಥಾನದಲ್ಲಿ ಸಭೆ ಸೇರುತ್ತಿದ್ದರು.

## ಅಗ್ರಹಾರ

ಅಗ್ರಹಾರದ ಮಹಾಜನ ಸಭೆಯು ದೇವಾಲಯಕ್ಕೆ ಪೂರಕವಾಗಿ ಕೆಲಸ ಮಾಡುತ್ತಿದ್ದವು. ದೇವಸ್ಥಾನಕ್ಕೆ ಮತ್ತು ಮಠಕ್ಕೆ ದತ್ತಿ ನೀಡುವುದು ಮಹಾಜನಗಳ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿತ್ತು. ಇವು ದೇವಸ್ಥಾನಕ್ಕೆ ಹೊಂದಿಕೊಂಡಿರುವ ಛತ್ರಕ್ಕೆ ದಾನವನ್ನು ನೀಡಬೇಕಾಗಿತ್ತು. ಸೂಳೇಕೆರೆಯ ಹತ್ತಿರದಲ್ಲಿರುವ ದೇವರಾಯನ ಶಿಲಾಶಾಸನವು ಕೋಟೇಶ್ವರ ದೇವರ ನೈವೇದ್ಯ ಮತ್ತು ಇತರೆ ಸೇವೆಗೆ ಕಲ್ಲಪ್ಪ ಮತ್ತು ಕೇತಪ್ಪ ಮಹಾಜನಗಳನ್ನು ಒಡಂಬಡಿಸಿ ಒಂದು ತರಿಜಮೀನನ್ನು ದಾನ ಮಾಡಲಾಯಿತೆಂದು ಶಾಸನ ತಿಳಿಸುತ್ತದೆ.[೧೭] ಕ್ರಿ.ಶ.೧೫೨೩ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ಹೊಸಪೇಟೆ ತಾಲೂಕು ಕುರೆಕುಪ್ಪೆ ಗ್ರಾಮದ ಅಗ್ರಹಾರದ ಮಹಾಜನರು ವಿರೂಪಾಕ್ಷ ದೇವರ ಪೂಜೆಗೆ ಒಂದು ತೋಟವನ್ನು ದಾನಮಾಡಿದ್ದನ್ನು ಶಾಸನವು ತಿಳಿಸುತ್ತದೆ.[೧೮]

ಕ್ರಿ.ಶ.೧೫೪೯ರಲ್ಲಿ ಮಂಡ್ಯ ಜಿಲ್ಲೆನಾಗಮಂಗಲದ ವೀರಭದ್ರನಿಗೆ ಮಹಾಜನರು ದಾನವನ್ನು ನೀಡಿದರು. ದೇವಾಲಯದ ಪೂಜೆ ಪುನಸ್ಕಾರಗಳು ಸಾಂಗೋಪಾಂಗವಾಗಿ ನಡೆಯಲು ಮತ್ತು ದೇವಾಲಯದ ನಿರ್ಮಾಣಕ್ಕೆ ಮಹಾಜನಗಳು ಅಗ್ರಹಾರಗಳಿಗಲ್ಲದೆ, ಬ್ರಹ್ಮಪುರಿಗಳಿಗೂ ಸಹಾ ದಾನ ನೀಡಿದರು. ಬ್ರಹ್ಮಪುರಿಗಳು ಹೆಚ್ಚಾಗಿ ಪಟ್ಟಣಗಳಲ್ಲಿ ಅಸ್ತಿತ್ವವನ್ನು ಹೊಂದಿದ್ದವು. ಇವು ಪಟ್ಟಣದ ಒಂದು ಪ್ರದೇಶದಲ್ಲಿ ಮಾತ್ರ ಕಾರ್ಯ ನಿರ್ವಹಿಸುತ್ತಿದ್ದವು. ಅಗ್ರಹಾರಗಳಂತೆ ಇಡೀ ಗ್ರಾಮವೇ ಬ್ರಾಹ್ಮಣರ ದಾನಕ್ಕೆ ಹೋಗುತ್ತಿರಲಿಲ್ಲ. ಇವು ಪಟ್ಟಣದ ಒಂದು ಪ್ರದೇಶವನ್ನು ಮತ್ತು ಅದರ ಪಕ್ಕದ ಗ್ರಾಮವನ್ನು ದತ್ತಿಯಾಗಿ ಬ್ರಹ್ಮಪುರಿಯ ಬ್ರಾಹ್ಮಣರು ಪಡೆದುಕೊಳ್ಳುತ್ತಿದ್ದರು. ಮಧ್ಯಯುಗೀನ ಕರ್ನಾಟಕದಲ್ಲಿ ಪಟ್ಟಣಗಳ ಸಂಖ್ಯೆಯು ಕಡಿಮೆಯಾದುದರಿಂದ ಬ್ರಹ್ಮಪುರಿಗಳ ಸಂಖ್ಯೆಯು ಕಡಿಮೆಯೇ ಆಗಿತ್ತು. ಬ್ರಹ್ಮಪುರಿಗಳು ಸಹ ವೈದಿಕ ಧರ್ಮದ ವಿದ್ಯಾಕೇಂದ್ರಗಳಾಗಿದ್ದರಿಂದ ದೇವಸ್ಥಾನಗಳಿಗೆ ಪೂರಕವಾಗಿ ಈ ಬ್ರಹ್ಮಪುರಿಗಳು ಕೆಲಸ ಮಾಡುತ್ತಿದ್ದವು. ಬ್ರಹ್ಮಪುರಿಗಳೇ ದೇವಸ್ಥಾನದ ಹಿಡಿತದಲ್ಲಿ ಇದ್ದುದು ಶಾಸನಗಳಲ್ಲಿ ಕಂಡುಬರುವುದಿಲ್ಲ.

ವೀರಶೈವ, ಶೈವ, ಜೈನ ಮಠಗಳು ವಿಜಯನಗರ ಕಾಲದಲ್ಲಿ ವಿದ್ಯಾಕೇಂದ್ರಗಳಾಗಿ ಮುಂದುವರೆದವು. ವಿದ್ಯಾಪ್ರಸಾರಕ್ಕೆ ರಾಜಾಂಗದ ಒಂದು ಪ್ರತ್ಯೇಕ ವಿಭಾಗವನ್ನು ತೆರೆಯಲಾಗಿತ್ತು. ರಾಜರು, ಸಾಮಂತರು ಮಂಡಲಪತಿಗಳು ರಾಜ್ಯಾಧಿಕಾರಿಗಳು ಮೊದಲಾದವರು ವಿದ್ಯೆಗೆ ಸಾಕಷ್ಟು ಪ್ರೋತ್ಸಾಹವೀಯುತ್ತಿದ್ದರು. ವಿದ್ಯೆಯನ್ನು ನೀಡುವ ಸಂಸ್ಥೆಗಳಿಗೆ ಮತ್ತು ಅದನ್ನು ನೋಡುವ ಪಂಡಿತರಿಗೆ ಪ್ರೋತ್ಸಾಹಿಸುವುದು ಅರಸರ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿತ್ತು. ಅರಸರು ಮತ್ತು ಅಧಿಕಾರಿಗಳು ಅಗ್ರಹಾರ ದೇವಸ್ಥಾನಗಳಿಗೆ ವಿಪುಲವಾದ ಸಂಪತ್ತನ್ನು ದಾನ ನೀಡುತ್ತಿದ್ದರು. ರಾಜರಲ್ಲದೆ ಹಲವಾರು ಶ್ರೀಮಂತರು ಸ್ವಯಂ

ಪ್ರೇರಣೆಯಿಂದ ಅನೇಕ ವಿದ್ಯಾನಿಲಯಗಳನ್ನು ಸ್ಥಾಪಿಸಿ ಅವುಗಳಿಗೆ ಸ್ಥಿರವಾದ ಜೀವನವನ್ನು ಕಲ್ಪಿಸಿಕೊಡುತ್ತಿದ್ದರು. ಉಪಾಧ್ಯಾಯರು ಸುಖ ಜೀವನವನ್ನು ಸಾಗಿಸುವ ಅನುಕೂಲವಿದ್ದುದರಿಂದ ವಿದ್ಯಾದಾನ, ವ್ಯಾಸಂಗದಲ್ಲಿಯೇ ತಮ್ಮ ಜೀವನವನ್ನು ಸವೆಸುತ್ತಿದ್ದರು. ವಿದ್ಯಾರ್ಥಿಗಳು ವಿದ್ಯೆಗಾಗಿ ಯಾವುದೇ ತೆರೆನಾದ ಶುಲ್ಕವನ್ನು ಕೊಡಬೇಕಾಗಿರಲಿಲ್ಲ. ಮಾತ್ರವಲ್ಲ ಅನ್ನ, ವಸ್ತ್ರ ಮುಂತಾದ ಸೌಕರ್ಯಗಳು ಅವರಿಗೆ ಶಿಕ್ಷಣ ನೀಡುವ ಸಂಸ್ಥೆ ದಾನಿಗಳಿಂದ ಪಡೆದು ಒದಗಿಸುತ್ತಿದ್ದವು. ಹೀಗಾಗಿ ಮಧ್ಯಯುಗೀನ ಕಾಲದಲ್ಲಿ ಶಿಕ್ಷಣ ಭಾರವೆನಿಸುತ್ತಿರಲಿಲ್ಲ. ಇದರಿಂದಾಗಿ ಎಲ್ಲೆಲ್ಲಿಯೂ ವಿದ್ಯೆಯ ವಾತಾವರಣವು ವಿದ್ಯೆಯ ಗೌರವದ ವಾತಾರವಣವೂ ನಿರ್ಮಾಣವಾಗಿ ವಿದ್ಯಾಪ್ರಸಾರಕ್ಕೆ ಹೆಚ್ಚು ಅನುಕೂಲಕರ ವಾತಾವರಣ ನಿರ್ಮಾಣವಾಗಿತ್ತು. ರಾಜನ ಆಸ್ಥಾನ, ದೇವಾಲಯ, ಮಠ, ಮುಂತಾದೆಡೆಯಲ್ಲಿ ಪಂಡಿತರ ಸಮ್ಮೇಳನಗಳು ವಿದ್ವದ್ಗೋಷ್ಠಿಗಳೂ ನೆರೆದು ಕಾವ್ಯವಾಚನಗಳೂ, ಶಾಸ್ತ್ರ ಚರ್ಚೆಗಳು ನಡೆಯುತ್ತಿದ್ದವು. ದೇವಾಲಯಗಳು ಮತ್ತು ಅಗ್ರಹಾರಗಳು ಹೆಚ್ಚಾಗಿ ಉನ್ನತ ವರ್ಗದ ವಿದ್ಯಾರ್ಥಿಗಳಿಗಾಗಿಯೇ ಶಿಕ್ಷಣ ಕೇಂದ್ರಗಳಾಗಿದ್ದವು ಎಂಬುದು ಗಮನಿಸಬೇಕಾದ ಅಂಶವಾಗಿದೆ.

## ದೇವಸ್ಥಾನ ನ್ಯಾಯ ತೀರ್ಮಾನದ ಕೇಂದ್ರ

ದೇವಸ್ಥಾನವು ಪ್ರಾಚೀನ ಕರ್ನಾಟಕದಲ್ಲಿ ನ್ಯಾಯ ತೀರ್ಮಾನದ ಹೊಣೆಯನ್ನು ಹೊತ್ತುಕೊಂಡಿತ್ತು. ವಿಜಯನಗರ ಕಾಲದಲ್ಲಿ ಈ ಪದ್ಧತಿ ಮುಂದುವರೆದಿತ್ತು. ವಿಜಯನಗರ ಕಾಲದಲ್ಲಿ ಗ್ರಾಮ ಸಭೆಗಳು ಅಸ್ತಿತ್ವದಲ್ಲಿದ್ದವು.[೨೦] ಈ ಗ್ರಾಮದಲ್ಲಿ ಸಂಘಟನೆಗೊಂಡ ಗ್ರಾಮ ಸಭೆಗಳು ಹಲವಾರು ಸಾಮುದಾಯಿಕ ಅಭಿವೃದ್ಧಿಯ ಕಾರ್ಯಗಳನ್ನು ಗ್ರಾಮದಲ್ಲಿ ಕೈಗೊಳ್ಳುತ್ತಿದ್ದವು. ಅಂತಹ ಕಾರ್ಯದಲ್ಲಿ ಗ್ರಾಮಸಭೆಗಳ ನ್ಯಾಯ ವಿತರಣೆಯ ಕೆಲಸವು ಕೂಡ ಒಂದಾಗಿದೆ. ಕ್ರಿ.ಶ.೧೪೫೫ರಲ್ಲಿ ಬಸರೂರಿನ ಪಡುವಣಕೇರಿ ಮತ್ತು ಮೂಡನ ಕೇರಿಯ ಶೆಟ್ಟಿಗಳ ನಡುವೆ ಅವರ ಗಡಿಗಳ ವಿವಾದ ಬಗೆ ಹರಿಸಿಕೊಂಡು ಆಯಾಕೇರಿಯ ಶೆಟ್ಟಿಗಳ ಹಬ್ಬಗಳಲ್ಲಿ ದೇವಸ್ಥಾನಕ್ಕೆ ಕುರಿ ಮತ್ತು ಅಡಿಕೆ ಮರಗಳನ್ನು ತೆಗೆದುಕೊಂಡು ಹೋಗಬೇಕಾಗಿತ್ತು. ಇವರೆಲ್ಲರೂ ಮಹಾಲಿಂಗೇಶ್ವರ ದೇವಾಲಯದ ಆವರಣದಲ್ಲಿ ಸಭೆ ಸೇರಿ, ತಮ್ಮ ನ್ಯಾಯವನ್ನು ಬಗೆಹರಿಸಿಕೊಂಡರು.[೨೧] ಇಲ್ಲಿ ಒಂದು ಗಮನಿಸತಕ್ಕ ಅಂಶವೆಂದರೆ, ವಿಜಯನಗರ ಕಾಲದಲ್ಲಿ ಗ್ರಾಮ ಸಭೆ ಸೇರುತ್ತಿದ್ದುದು ಸಾಮಾನ್ಯವಾಗಿ ದೇವಸ್ಥಾನದ ಸಭಾಂಗಣದಲ್ಲಿ ಎಂಬುದನ್ನು ಗಮನಿಸಬೇಕು.[೨೨] ಹಾಗಾಗಿ ದೇವಸ್ಥಾನವು ಜನಸಾಮಾನ್ಯರ ಗ್ರಾಮದ ನ್ಯಾಯಾಲಯವಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು.

ಗ್ರಾಮ ಸಭೆಗಳು ಮತ್ತು ದೇವಸ್ಥಾನಗಳು ನ್ಯಾಯಲಯದ ಸಮಸ್ತ ನ್ಯಾಯ ವಿತರಣೆಯ ಮತ್ತು ದಂಡಾಧಿಕಾರಿಯ ಅಧಿಕಾರವನ್ನು ಹೊಂದಿದ್ದವು. ದೇವಸ್ಥಾನಗಳಲ್ಲಿ ಸಭೆ ಸೇರುತ್ತಿದ್ದ ನ್ಯಾಯಾಲಯಗಳು. ವಿಧಿಬದ್ಧವಾದ ನ್ಯಾಯಾಲಯಗಳಲ್ಲದೆ, ದೇವಸ್ಥಾನದ ಧರ್ಮದರ್ಶಿಗಳು, ಶ್ರೇಣಿಗಳು ಮತ್ತು ಕೋಮುಗಳ ನಡುವೆ ಸಂಭವಿಸುವ ಜಗಳಗಳ ನ್ಯಾಯವಿತರಣೆ ಮಾಡುತ್ತಿದ್ದವು.

ವಿಜಯನಗರ ಕಾಲದಲ್ಲಿ 'ನಾಡು' ಒಂದು ಪ್ರಾದೇಶಿಕ ಸಂಸ್ಥೆಯಾಗಿತ್ತು. ಇದರಲ್ಲಿ ಹಲವು ಗ್ರಾಮಗಳು ಸೇರಿದ್ದವು. ಹೀಗೆ ನಾಡು ಗ್ರಾಮಕ್ಕಿಂತಲೂ ದೊಡ್ಡದಾದ ರಾಜಕೀಯ ವಿಭಾಗವಾಗಿದ್ದಿತು. ಇದಲ್ಲದೆ ಮಧ್ಯಯುಗದ ಕರ್ನಾಟಕದಲ್ಲಿ 'ಮಹಾನಾಡು' ಎಂಬ ಅತ್ಯಂತ ದೊಡ್ಡ ಸ್ಥಳೀಯ ಸಭೆ ಅಸ್ತಿತ್ವದಲ್ಲಿತ್ತು.[೨೩] ಮಹಾನಾಡು ದಕ್ಷಿಣ ಭಾರತದ ಪ್ರಾಚೀನ ಜನ ಸಮುದಾಯದ ಸಾಮಾಜಿಕ, ರಾಜಕೀಯ, ಆರ್ಥಿಕ ಜೀವನದಲ್ಲಿ ಮಹತ್ವದ ಪಾತ್ರವಹಿಸಿದ್ದಿತು. ಶಾಸನಗಳು ಮಹಾನಾಡಿನ ಅಸ್ತಿತ್ವವನ್ನು ದೃಢಪಡಿಸುತ್ತವೆ.[೨೪] ಆದರೆ ಮಹಾನಾಡು ರಾಜ್ಯದ ಆಡಳಿತದ ಜವಾಬ್ದಾರಿ ಹೊಂದಿರಲಿಲ್ಲ ಅದಕ್ಕೆ ಸ್ವಂತ ಸಿಬ್ಬಂದಿ ಇರಲಿಲ್ಲ. ಇದರ ಕರ್ತವ್ಯಗಳು ನಿರ್ದಿಷ್ಟವಾಗಿರಲಿಲ್ಲ.[೨೫] ಆದರೆ ನಾಡು ಎಂಬ ಪ್ರಾದೇಶಿಕ ಸಭೆ ಅಸ್ತಿತ್ವವನ್ನು ಪಡೆದುಕೊಂಡದ್ದನ್ನು ಮೊದಲೇ ನೋಡಿದ್ದೇವೆ. ಇದರ ಕರ್ತವ್ಯಗಳನ್ನು ಮತ್ತು ಇದರ ಅಧಿಕಾರಿಗಳನ್ನು ಶಾಸನಗಳು ನಿರ್ದಿಷ್ಟವಾಗಿ ತಿಳಿಸುತ್ತವೆ. ನಾಡಿನ ಆಡಳಿತವು ಸುಗಮವಾಗಿ ನಡೆಯಲು ನಾಡಗೌಡರು ಅಥವಾ ನಾಡಪ್ರಭುಗಳು ಎಂಬ ಅಧಿಕಾರಿಗಳಿದ್ದರು. ವಿಜಯನಗರ ಕಾಲದಲ್ಲಿ ನಾಡಗೌಡನ ಹುದ್ದೆ ವಂಶಪಾರಂಪರ್ಯವಾಗಿದ್ದಿತು.[೨೬] ಆತನು ನಾಡು ಎಂಬ ವಿಭಾಗದ ಪ್ರಭುವು ಆಗಿದ್ದರಿಂದ ಆತನನ್ನು "ನಾಡಗೌಡ"ನೆಂದು ಕರೆಯಲಾಗುತಿದ್ದಿತು, ನಾಡಗೌಡನ ಮುಖ್ಯ ಕರ್ತವ್ಯಗಳಲ್ಲಿ ದೇವಸ್ಥಾನಗಳ ಉಸ್ತುವಾರಿಯನ್ನು ನೋಡಿಕೊಳ್ಳುವುದು ಮತ್ತು ನಾಡಿಗೆ ಸಂಬಂಧಪಟ್ಟ ಪ್ರದೇಶದ ನ್ಯಾಯ ವಿತರಣೆಯ ಹಕ್ಕನ್ನು ಹೊಂದಿದ್ದನು. ಇದು ದೇವಸ್ಥಾನ ಮತ್ತು ನ್ಯಾಯಾಲಯ ಅವಿಭಾಜ್ಯತೆಯನ್ನು ಸೂಚಿಸುತ್ತದೆ. ಆದರೆ ನ್ಯಾಯ ವಿತರಣೆಯ ಅಧಿಕಾರಿಯಾದ ನಾಡಗೌಡನು ದೇವಸ್ಥಾನವನ್ನು ನೋಡಿಕೊಳ್ಳುವ ಅಧಿಕಾರಿಯಾಗಿದ್ದರಿಂದ ಆತನು ದೇವಸ್ಥಾನದಲ್ಲೇ ಕುಳಿತು ನ್ಯಾಯ ವಿತರಣೆಯನ್ನು ಮಾಡುತ್ತಿದ್ದನು.

ವಿಜಯನಗರ ಕಾಲದಲ್ಲಿ ದೇವಸ್ಥಾನವು ಸಮಾಜದ ಒಂದು ಅಂಗವಾಗಿತ್ತು. ದೇವಸ್ಥಾನದ ಆಡಳಿತವು ರಾಜ್ಯಾಡಳಿತದ ಒಂದು ಮುಖ್ಯ ಅಂಗವಾಗಿತ್ತು. ದೇವಸ್ಥಾನವು ಸ್ಥಳೀಯ ಪ್ರದೇಶದಲ್ಲಿ ಮತೀಯ ಜೀವನದ ಒಂದು ಮುಖ್ಯ ಕೇಂದ್ರವಾಗಿದ್ದುದಲ್ಲದೆ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ತಾಣವಾಗಿತ್ತು.[೨೭] ಅಂದಿನ ಸಮಾಜವು ಆರ್ಥಿಕವಾಗಿ ಸಬಲವಾಗಲು ದೇವಾಲಯಗಳು ಅಂದಿನ ಕಾಲದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದವು. ಅಕ್ಷರಸ್ತರ ಸಂಖ್ಯೆ ಕಡೆಮೆಯಾಗಿದ್ದ ಆ ಕಾಲದಲ್ಲಿ ದೇವಾಲಯಗಳು ಇಡೀ ಸಮಾಜದ ಊರಿನ ಲೆಕ್ಕಪತ್ರಗಳನ್ನು ಇಡುವ ಸಾಲ ವಿತರಿಸುವ ಕೆರೆಗಳನ್ನು ನಿರ್ಮಿಸುವ ಮತ್ತು ಉದ್ಯೋಗಗಳನ್ನು ನೀಡುವ ಒಂದು ಬಹು ಉಪಯೋಗಿ ಆರ್ಥಿಕ ಚಟುವಟಿಕೆಯ ಕೇಂದ್ರವಾಗಿ ಕಂಡುಬರುತ್ತವೆ.

ದೇವಸ್ಥಾನದ ಆರ್ಥಿಕ ಮೂಲಗಳು

೧. ಭೂಮಿಯನ್ನು ದತ್ತಿಯಾಗಿ ಸ್ವಿಕರಿಸುವುದು.

೨. ಗ್ರಾಮವನ್ನು ದತ್ತಿಯಾಗಿ ಸ್ವೀಕರಿಸುವುದು.

೩. ಹಣದ ರೂಪದಲ್ಲಿ ರಾಜತ್ವ ಸಂಗ್ರಹ.

ದೇವಸ್ಥಾನವು ವಿಜಯನಗರ ಕಾಲದಲ್ಲಿ ಧಾರ್ಮಿಕ ಚಟುವಟಿಕೆಯ ಕೇಂದ್ರವಾದ್ದುದರ ಜೊತೆಯಲ್ಲೆ ಆರ್ಥಿಕ ಚಟುವಟಿಕೆಯ ಕೇಂದ್ರವೂ ಆಗಿತ್ತು. ಆದುದರಿಂದ ಆ ಕಾಲದಲ್ಲಿ ದೇವಾಲಯಗಳು ತಮ್ಮದೇ ಆದ ಆರ್ಥಿಕ ಮೂಲವನ್ನು ಹೊಂದುವುದು ಅವಶ್ಯವಾಗಿತ್ತು. ಈ ಆರ್ಥಿಕ ಮೂಲವನ್ನು ದೇವಾಲಯಗಳು ರಾಜ ಪ್ರಭುತ್ವದ ದಾನಗಳಿಂದ ಮತ್ತು ಸಾಮ್ರಾಜ್ಯದಲ್ಲಿನ ಪ್ರತಿಷ್ಠಿತ ವ್ಯಕ್ತಿಗಳಿಂದ ಸಂಗ್ರಹಿಸಲಾಗುತ್ತಿತ್ತು. ರಾಜರು, ರಾಣಿಯರು, ಸಾಮಂತರು, ದಂಡನಾಯಕರು, ವ್ಯಾಪಾರಿ ಸಂಘಗಳು ಗ್ರಾಮಸಭೆಗಳು, ಪ್ರಾಂತೀಯ ಅಧಿಕಾರಿಗಳು ದೇವಾಲಯಗಳ ನಿರ್ಮಾಣಕ್ಕೆ ಮತ್ತು ಅವುಗಳ ನಿರ್ವಹಣೆಗೆ ದಾನದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಈ ದಾನದತ್ತಿಗಳೇ ದೇವಸ್ಥಾನದ ಆರ್ಥಿಕ ಮೂಲವಾಗುತ್ತಿದ್ದಿತು. ದೇವಸ್ಥಾನದ ದಾನಗಳನ್ನು ಗ್ರಾಮದ ರೂಪದಲ್ಲಿ ಇಲ್ಲವೇ ಭೂಮಿಯ ರೂಪದಲ್ಲಿ, ಹಣದ ರೂಪದಲ್ಲಿ, ತೆರೆಗೆಯ ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಹೀಗೆ ಸಂಗ್ರಹಿಸಲಾಗುತ್ತಿದ್ದ ದಾನ ದತ್ತಿಗಳನ್ನು ದೇವಸ್ಥಾನದ ಆಡಳಿತ ವರ್ಗವು ಸರಿಯಾದ ಲೆಕ್ಕ ಪತ್ರಗಳನ್ನು ಇಡುವುದರ ಮುಖೇನ ಅದರ ಒಟ್ಟು ವರಮಾನವನ್ನು ಸದ್ವಿನಿಯೋಗಕ್ಕಾಗಿ ಬಳಸಲಾಗುತ್ತಿದ್ದಿತು.

ದೇವಸ್ಥಾನಗಳಿಗೆ ದಾನ ನೀಡುವುದು ಅಗ್ರಹಾರದ ಮಹಾಜನರ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿತ್ತು. ಇದೇ ರೀತಿಯಲ್ಲಿ ಗ್ರಾಮ ಸಭೆಯು ದೇವಸ್ಥಾನಗಳಿಗೆ ದಾನವನ್ನು ಕೊಡುವ ಅಧಿಕಾರವನ್ನು ಹೊಂದಿದ್ದವು. ಈ ಎಲ್ಲಾ ಕೊಡುಗೆಗಳು ದೇವಸ್ಥಾನದ ಆದಾಯವಾಗಿರುತ್ತಿತ್ತು.

ವಿಜಯನಗರ ಕಾಲದಲ್ಲಿ ಗ್ರಾಮ ಸಭೆಯು ಸ್ಥಳೀಯ ಆಡಳಿತದ ಮುಖ್ಯ ಘಟಕವಾಗಿತ್ತು. ಬಾರಕೂರು ಪ್ರಾಂತ್ಯದಲ್ಲಿ ಚಿಕ್ಕರೆ ಗ್ರಾಮ ಸಭೆಯು ಅಸ್ತಿತ್ವದಲ್ಲಿತ್ತು. ಕ್ರಿ.ಶ.೧೩೬೪ರಲ್ಲಿ ಚಿಕ್ಕೆರೆಯ ಮೂವತ್ತು ಸಂಸಾರಗಳು ಮತ್ತು ಇತರರು ಸೇರಿ ಕೋಟೇಶ್ವರ ದೇವರ ಸೇವೆಗೆ ಹನ್ನೆರೆಡು ಹೊನ್ನುಗಳು ಮತ್ತು ಭೂಮಿಯನ್ನು ದಾನ ಮಾಡಿದರು. ಈ ದತ್ತಿಗಳು ಕೋಟೇಶ್ವರ ದೇವಸ್ಥಾನದ ಆದಾಯವಾಗಿರುತ್ತಿದ್ದವು. ಇದೇ ಬಾರಕೂರು ರಾಜ್ಯದಲ್ಲಿ ಕುಂದಾಪುರವು ಒಂದು ಗ್ರಾಮ ಸಭೆಯಾಗಿತ್ತು. ಕ್ರಿ.ಶ.೧೪೨೫ರಲ್ಲಿ ಕುಂದಾಪುರದ ಗ್ರಾಮ ಜಗತ್ತು ಪ್ರಾಂತೀಯ ಅಧಿಕಾರಿಯಾದ ನರಸಿಂಹ ದೇವ ಒಡೆಯನ ಆಜ್ಞೆಯ ಮೇರೆಗೆ ಕುಂದೇಶ್ವರ ದೇವರ ಸೇವೆಗೆ ದೇವಣ್ಣ ಷೇನುಭೋವ ದಾನಮಾಡಿದ್ದ ಭೂಮಿಯನ್ನು ರಾಜನು ಊರ್ಜಿತಗೊಳಿಸಿದನು. ಈ ಸೇವೆಯು ಕುಂದಾಪುರದ ಕುಂದೇಶ್ವರ ದೇವಸ್ಥಾನದ ಆದಾಯವಾಗಿ ಪರಿಣಮಿಸುತ್ತಿತ್ತು.[೨೯] ಕ್ರಿ.ಶ.೧೫೦೬ರಲ್ಲಿ ಚಿಕ್ಕಳ್ಳಿಯ ಗೌಡ ಪ್ರಜೆಗಳು ಗ್ರಾಮದ ಮಲ್ಲಿಕಾರ್ಜುನ ದೇವರಿಗೆ ಭೂಮಿಯನ್ನು ದಾನ ಮಾಡಿದರು. ಈ ಭೂದಾನವು ಮಲ್ಲಿಕಾರ್ಜುನದೇವರ ಆದಾಯವಾಗಿರುತ್ತಿತ್ತು.[೩೦]

ಕ್ರಿ.ಶ.೧೩೬೫ರಲ್ಲಿ ಕೋಟೇಶ್ವರದ ಕೋಟೇಶ್ವರ ದೇವಸ್ಥಾನಕ್ಕೆ ವೀರಬುಕ್ಕರಾಯನು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಭೂಮಿಯನ್ನು ೧೨೪ ಚೀಲ ಭತ್ತವನ್ನು ದಾನವನ್ನಾಗಿ ನೀಡಿದನು. ದಾನವನ್ನು

ನಿರ್ದಿಷ್ಠಕಾರ್ಯಕ್ಕೆ ಬಳಸಲು ಶಾಸನದಲ್ಲಿ ತಿಳಿಸಲಾಗಿತ್ತು. ಪ್ರತಿದಿನ ಆರು ಬ್ರಾಹ್ಮಣರಿಗೆ ಮತ್ತು ಅಡಿಗೆ ಮಾಡುವವರಿಗೆ ಈ ದಾನವನ್ನು ಬಳಸಬೇಕೆಂದು ಹೇಳಲಾಗಿದೆ. ಈ ಆದಾಯವು ದೇವಸ್ಥಾನದ ಆದಾಯವಾಗಿದ್ದು, ಒಮ್ಮೆ ಭೂಮಿಯಿಂದ ಆದಾಯವು ಖಜಾನೆಯಲ್ಲಿ ಸಂಗ್ರಹವಾಗುತ್ತಿತ್ತು. ನಂತರದಲ್ಲಿ ಆ ಆದಾಯವನ್ನು ದಿನಪ್ರತಿ ಖರ್ಚುಮಾಡುವ ವ್ಯವಸ್ಥೆಯನ್ನು ಮಾಡಲಾಯಿತು.[೩೧] ಇದೇ ಕೋಟೇಶ್ವರ ದೇವರಿಗೆ ೧೩೭೩ರಲ್ಲಿ ಬುಕ್ಕರಾಯನ ಕಾಲದಲ್ಲಿ ಗದ್ದೆ ಅಕ್ಕಿ ಹಣವನ್ನು ದಾನ ನೀಡಲಾಗಿದೆ.[೩೨] ಹೀಗೆ ಒಬ್ಬರು ರಾಜರು ನೀಡಿದ ದೇವಸ್ಥಾನಕ್ಕೆ ಮತ್ತೊಬ್ಬ ರಾಜರು ದತ್ತಿ ನೀಡಿ ಆ ದೇವಸ್ಥಾನಕ್ಕೆ ತಮ್ಮ ಗೌರವವನ್ನು ಸಲ್ಲಿಸುತ್ತಿದ್ದರು. ಇದೇ ಸೋಮೇಶ್ವನಿಗೆ ೧೩೭೭ರಲ್ಲಿ ಪ್ರತಿದಿನ ಹದಿಮೂರು ಬ್ರಾಹ್ಮಣರ ಊಟಕ್ಕೆ ಮತ್ತು ದೇವರಿಗೆ ನಡೆಯುವ ರಂಗಭೋಗಕ್ಕೆ ಒಂದೊಂದು ಪೂಜೆಗೆ ಇಂತಿಷ್ಟು ಹಣ ಎಂದು ಮೀಸಲಾಗಿರಿಸಲಾಗಿತ್ತು.[೩೩]

ಕ್ರಿ.ಶ.೧೩೮೦ರಲ್ಲಿ ಕುಂದಾಪುರ ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆಯ ಹಿರೇಬೈಲ್ ಗ್ರಾಮದ ಯಣದೇವಸ್ಥಾನಕ್ಕೆ ಬಾರಕೂರನ್ನು ಮಹಾಪ್ರಧಾನ ಮಲೆಯ ದಂಡನಾಯಕ ಆಳುತ್ತಿರುವಾಗ,[೩೪] ಕಿಮಿ ಶೆಟ್ಟಿಯು ಭೂಮಿಯನ್ನು ದಾನ ಮಾಡಿದನು. ಅಲ್ಲದೆ ಭೂಮಿಯಲ್ಲಿ ದೊರೆಯುವ ಅಷ್ಟಭೋಗಗಳೆಲ್ಲವು ದೇವರಿಗೇ ಸಲ್ಲಬೇಕು. ಮತ್ತು ಒಂದು ವರ್ಷದಲ್ಲಿ ನಡೆಯುವ ಶಂಕರ ನಾರಾಯಣ ದೇವರ ಸೇವೆಗೆ ಇಂತಿಷ್ಟು ಹಣ ಸೇರಬೇಕು ಎಂದು ಶಾಸನಗಳಲ್ಲಿ ಗೊತ್ತುಪಡಿಸಲಾಗಿದೆ.[೩೫]

ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರದ ಕುಂದೇಶ್ವರ ದೇವರಿಗೆ ದಾನ ನೀಡಿದ್ದನ್ನು ತಿಳಿಸಲಾಗಿರುವ ಶಾಸನವು ಈ ಕೆಳಗಿನ ವಿಷಯ ನಿರೂಪಿಸುತ್ತದೆ. ಇದು ಕ್ರಿ.ಶ.೧೪೨೫ರ ಕಾಲದ ಶಾಸನವಾಗಿದೆ. ಕುಂದೇಶ್ವರ ದೇವರಿಗೆ ಭೂಮಿಯನ್ನು ದಾನ ಮಾಡಿರುವುದನ್ನು ಶಾಸನವು ತಿಳಿಸುತ್ತದೆ.[೩೬]

ಕ್ರಿ.ಶ.೧೪೪೨ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕು ಬಸರೂರನ್ನು ದೇವರಾಯ ಮಹಾರಾಯರ ಆಳ್ವಿಕೆಯ ಕಾಲದಲ್ಲಿ ಚಂದರಸ ಒಡೆಯನು ಬಾರಕೂರು ಪ್ರಾಂತ್ಯವನ್ನು ಆಳುವ ಕಾಲದಲ್ಲಿ ಕೊಂಟಿಯಣ್ಣ ಶೆಟ್ಟಿ ಎಂಬಾತನು ಬಸರೂರಿನ ಪಡುವಣ ಕೇರಿಯನ್ನು ಮಹಾದೇವ ದೇವಸ್ಥಾನಕ್ಕೆ ಭೂಮಿಯನ್ನು ದಾನ ಮಾಡಿದ್ದನ್ನು ಶಾಸನವು ತಿಳಿಸುತ್ತದೆ.[೩೭]

ಕ್ರಿ.ಶ.೧೪೪೪ರ ಎರಡನೇಯ ದೇವರಾಯನ ಕಾಲದಲ್ಲಿ ಬರಕೂರನ್ನು ತಿಮ್ಮಣ್ಣ ಒಡೆಯನು ಆಳುತ್ತಿದ್ದ ಕಾಲದಲ್ಲಿ ಪಡುವಣ ಕೇರಿಯ ಶೆಟ್ಟಿಕಾರರು ನಕರೇಶ್ವರ ದೇವಸ್ಥಾನಕ್ಕೆ ಭೂಮಿಯನ್ನು ದಾನ ನೀಡಿದರು. ಇದು ನಕರೇಶ್ವರ ದೇವಸ್ಥಾನದ ಆದಾಯವಾಗಿರುತ್ತಿತ್ತು. ಇದರಿಂದ ದೇವಸ್ಥಾನದ ಪೂಜಾ ಕಾರ್ಯಗಳು ಸಾಂಗೋಪಾಂಗವಾಗಿ ನಡೆಯುತ್ತಿದ್ದವಲ್ಲದೆ, ಆ ಗ್ರಾಮದಲ್ಲಿ ಸಮಾಜೋಪಯೋಗಿ ಕೆಲಸಗಳು ನಡೆಯುತ್ತಿದ್ದವು.[೩೮]

ಕ್ರಿ.ಶ.೧೪೭೨ರಲ್ಲಿ ವಿರುಪಾಕ್ಷನ ಕಾಲದಲ್ಲಿ ವಿಠ್ಠರಸ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿರುವಾಗ ಬಸರೂರಿನ ಶಾಸನದಂತೆ ಅಲ್ಲಿನ ನಾರಾಯಣ ಸೇನಭೋವನ ಮಗ ಬಳ್ಳಾಬಳಿಯ ದುಗ್ಗಣ್ಣಶೆಟ್ಟಿಯ ಅಳಿಯ ಮತ್ತು ಬಳಗದವರು, ಸೇರಿ ಕಟ್ಟಿಸಿದ ಮಠದ ಭೂಮಿಯನ್ನು ದಾನ ನೀಡಿದ್ದನ್ನು ಶಾಸನವು ಉಲ್ಲೇಖಿಸಿದೆ.[೩೯] ಅದೇ ಬಸರೂರಿನಲ್ಲಿ ಪಡುವಣ ಕೇರಿಯಲ್ಲಿ ಮಹಾದೇವರ ಸನ್ನಿಧಿಯಲ್ಲಿ ಪಡುವಣ ಕೇರಿಯ ಹಲವು ಶೆಟ್ಟಿಕಾರರಿಗೆ ಗುರುವಾಗಿದ್ದ ರುದ್ರಾಕ್ಷಿ ಒಡೆಯರಿಗೆ ಮಠವನ್ನು ಕಟ್ಟಿಸಲಾಯಿತು. ಮಠ ಮಹಾದೇವರ ದೇವಸ್ಥಾನದ ಹತ್ತಿರದಲ್ಲೆ ಇದ್ದುದನ್ನು ಶಾಸನವು ತಿಳಿಸುವುದರಿಂದ ಮಠ ಮತ್ತು ದೇವಸ್ಥಾನವೆರೆಡೂ ಒಂದಕ್ಕೊಂದು ಅವಲಂಬಿಸಿದ್ದವು ಎಂಬುದನ್ನು ನೋಡಬಹುದು. ಈ ಮಠಕ್ಕೆ ಭೂಮಿಯನ್ನು ದಾನವಾಗಿ ನೀಡಲಾಗಿದೆ. ಅಕ್ಕಿಯ ಮೂಟೆ ಮತ್ತು ನಲವತ್ತು(೪೦) ವರಹಗಳನ್ನು ದಾನ ನೀಡಿದ್ದನ್ನು ರುದ್ರಾಕ್ಷಿ ಒಡೆಯರು ಮತ್ತು ಸೆಟ್ಟಿಕಾರರು ಒಪ್ಪಿದರು ಎಂಬುದನ್ನು ಉಲ್ಲೇಖಿಸಲಾಗಿದೆ.[೪೦]

ಕ್ರಿ.ಶ.೧೫೧೬ರಲ್ಲಿ ಸೋಗಿಯ ಶಾಸನವು ಅಲ್ಲಿನ ಕಲ್ಲಿನಾಥ ದೇವರಿಗೆ ದಣಾಯಕ ಕೆರೆಯ ಏತವನ್ನು ದಾನವನ್ನು ನೀಡಿ, ಆ ದೇವಾಲಯದ ಪೂಜೆಯು ಸಾಂಗೋಪಾಂಗವಾಗಿ ನಡೆಸಬೇಕೆಂದು ತಿಳಿಸುತ್ತದೆ.[೪೧]

ಕ್ರಿ.ಶ.೧೫೧೯ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಸರೂರು ತಾಲೂಕಿನ ಬಸರೂರಿನ ದೊಡ್ಡ ಕೆರೆ ಕಟ್ಟೆಯಲ್ಲಿ ಮಠವನ್ನು ಕಟ್ಟಿ ಆ ಮಠಕ್ಕೆ ಭೂಮಿಯನ್ನು ದಾನವಾಗಿ ನೀಡಿದ್ದನ್ನು ಬಸರೂರಿನ ಶಾಸನಗಳು ಉಲ್ಲೇಖಿಸಿವೆ.[೪೨] ಕ್ರಿ.ಶ.೧೫೨೮ರಲ್ಲಿ ಕುರುಗೋಡಿನ ದೊಡ್ಡ ಬಸವಣ್ಣ ದೇವರಿಗೆ ಪೂಜೆ ಸಲ್ಲಿಸಲೋಸುಗ ಭೂಮಿಯನ್ನು ದಾನ ಮಾಡಿದನ್ನು ಕುರುಗೋಡಿನ ಶಾಸನವು ಹೇಳುತ್ತದೆ.[೪೩]

ಹೀಗೆ ದೇವಸ್ಥಾನಗಳಿಗೆ ಭೂಮಿಯನ್ನು ದಾನವಾಗಿ ಸಂಘಸಂಸ್ಥೆಗಳು ಮತ್ತು ಆಳುವ ವರ್ಗವಾದ ಮಹಾರಾಜರು ಮತ್ತು ಅವರ ಸಾಮಂತರುಗಳು ಶೆಟ್ಟಿಕಾರ ಸಂಘಗಳು ದಾನದತ್ತಿಗಳನ್ನು ನೀಡಿ ದೇವಸ್ಥಾನವನ್ನು ಶ್ರೀಮಂತಗೊಳಿಸುತ್ತಿದ್ದರು. ಈ ಶೇಖರಣೆಗೊಂಡ ಹಣವನ್ನು ದೇವಸ್ಥಾನದ ಆಡಳಿತವು ಅನೇಕ ಸಾರ್ವಜನಿಕ ಕಾರ್ಯಗಳಿಗೆ ಬಳಸುತ್ತಿತ್ತು.

### ಗ್ರಾಮದಾನ

ದೇವಸ್ಥಾನವು ಆರ್ಥಿಕವಾಗಿ ಸಬಲಗೊಳ್ಳಲು ಭೂದಾನ ಹೇಗೆ ಕಾರಣವೊ ಹಾಗೇನೇ ಗ್ರಾಮದಾನವು ಮುಖ್ಯವಾದುದು. ದಾನ ಕೊಟ್ಟ ಗ್ರಾಮದ ಎಲ್ಲಾ ತೆರಿಗೆಯು ದೇವಸ್ಥಾನದ ಬೊಕ್ಕಸಕ್ಕೆ ಹೋಗುತ್ತಿತ್ತು. ಇದರಿಂದ ದೇವಸ್ಥಾನವು ಆರ್ಥಿಕವಾಗಿ ಸಬಲಗೊಳ್ಳುತ್ತಿತ್ತು. ದೇವಸ್ಥಾನದ ಆ ಹಣದಿಂದ ಅನೇಕ ಜನಹಿತ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.

ಕ್ರಿ.ಶ.೧೫೬೪ರ ಒಂದು ಶಾಸನದ ಪ್ರಕಾರ ವೀರಸದಾಶಿವ ಮಹಾರಾಯರ ಕಾಲದಲ್ಲಿ ಚಿಕ್ಕರಾಯ ತಮ್ಮೇಗೌಡನು ಸೋಮೇಶ್ವರ ಮತ್ತು ವೀರಭದ್ರ ದೇವರಿಗೆ ಅಮೃತಪಡಿ ನಡೆಸುವುದಕ್ಕಾಗಿ ಮೂರು ಗ್ರಾಮಗಳನ್ನು ದಾನ ನೀಡಲಾಯಿತು.[೪೪] ಈ ಮೂರು ಗ್ರಾಮಗಳಲ್ಲಿ ಸಲ್ಲುವ ಕೆರೆ, ಕುಂಟೆ, ನಿಧಿ-ನಿಕ್ಷೇಪಗಳೆಲ್ಲವೂ ಆ ದೇವರ ಸೇವೆಗೆ ಮೀಸಲು ಎಂದು ಶಾಸನದಲ್ಲಿ ತಿಳಿಸಲಾಗಿದೆ.[೪೫]

ಕ್ರಿ.ಶ.೧೪೩೧ರಲ್ಲಿ ಮುಳುಬಾಗಿಲಿನ ಹತ್ತಿರದ ವಿರೂಪಾಕ್ಷಿಯ ವಿರೂಪಾಕ್ಷ ದೇವಾಲಯಕ್ಕೆ ದೀಪಾರಾಧನೆ, ನಿತ್ಯೋತ್ಸವ, ಪಕ್ಷೋತ್ಸವ, ರಥೋತ್ಸವ ಮುಂತಾದ ಅಂಗ, ರಂಗ-ಬೋಗಗಳಿಗೆ, ವಿರೂಪಾಕ್ಷಪುರ, ಗುಟ್ಟೆಹಳ್ಳಿ, ಸೊರಾದೇವಿ ಹಳ್ಳಿ, ಮಹಾದೇವನಹಳ್ಳಿ, ಕುಮದೇವನಹಳ್ಳಿ, ಕುಂಚುಬಂಡೆ ಗ್ರಾಮಗಳನ್ನು ದಾನವಾಗಿ ನೀಡಿದ್ದನ್ನು ಶಾಸನಗಳು ಉಲ್ಲೇಖಿಸಿವೆ.[೪೬] ಕ್ರಿ.ಶ.೧೪೭೯ರಲ್ಲಿ ಹೊಂಗನ್ನಿ ಹಳ್ಳಿಯ ಗ್ರಾಮದ ಗೌಡರು ಎಣ್ಣೆನಾಡಿನ ಹರದನಹಳ್ಳಿಯ ದಿವ್ಯಲಿಂಗೇಶ್ವರ ದೇವರ ನೈವೇದ್ಯಕ್ಕೆ ಮತ್ತು ದೀಪಾರಾಧನೆಗಾಗಿ ಗಜನೂರು ಎಂಬ ಗ್ರಾಮವನ್ನು ದಾನ ಮಾಡಿದ್ದನ್ನು ನೋಡಬಹುದು. ಲಿಂಗೇಶ್ವರ ದೇವರ ದೇವಸ್ಥಾನವು ಆ ಕಾಲದ ಒಂದು ಪ್ರಸಿದ್ಧ ದೇವಾಲಯವಾಗಿತ್ತು.[೪೭]

ಕ್ರಿ.ಶ.೧೫೨ರಲ್ಲಿ ಬಸರೂರಿನ ಮಹಾಲಿಂಗೇಶ್ವರ ದೇವರಿಗೆ ವಿಜಯನಗರದ ಅರಸರು ‘‘ಪಡುವ ಬೆಲತೂರು’’ ಎಂಬ ಗ್ರಾಮವನ್ನು ದಾನ ಮಾಡಿದ್ದನ್ನು ಬಸರೂರಿನ ಶಾಸನವು ತಿಳಿಸುತ್ತದೆ.[೪೮] ಕ್ರಿ.ಶ. ೧೫೧೩ರಲ್ಲಿ ವಿಜಯನಗರದ ಅರಸರಾದ ಕೃಷ್ಣದೇವರಾಯನು ವಿರೂಪಾಕ್ಷ ದೇವರ, ಅಮೃತಪಡಿನೈವೇದ್ಯ, ಅಂಗರಂಗ, ವೈಭೋಗ, ನಿತ್ಯ, ನೈಮಿತ್ತಿಕ, ಚೈತ್ರ ಮಾಸದ ರಥೋತ್ಸವ, ಮಕರ ಸಂಕ್ರಾಂತಿ ರಥೋತ್ಸವ, ಮಾಸೋತ್ಸವ, ಪಕ್ಷೋತ್ಸವ, ದೀಪಾರಾಧನೆ ಮೊದಲಾದ ಪೂಜೆಗಳಿಗಾಗಿ ಮತ್ತು ತಮ್ಮ ತಂದೆ ತಾಯಿಗಳಿಗೆ ಪುಣ್ಯಪ್ರಾಪ್ತಿಯಾಗಲಿಯೆಂದು ಚಿಂನಿನಾಯಕನ ಹಳ್ಳಿ ಗ್ರಾಮ ಮತ್ತು ಅದಕ್ಕೆ ಸೇರಿರುವ ಕಾಳಗಟ್ಟೆ, ಡಣಾಯಕಪುರ, ರಾಮ ಚಂದ್ರಾಪುರ, ಕಂಚುಮಂಟಿನ ಕುಪೆ, ಅಯೋದಿ ಹೊನಪುರ, ಮಂಡನೂರು, ದಂಮೂರು, ಬೈಯಿರವ ದೇವನಹಳ್ಳಿ, ಕಲುಕಂಬ, ಗೋನಾಹಾಳು ಗುಂಡೆನೂರು, ಪಾಡಿರಾಲ ಮುದೆಗೆರೆ ಮುಂತಾದ ಗ್ರಾಮಗಳನ್ನು ವಿರೂಪಾಕ್ಷ ದೇವಸ್ಥಾನಕ್ಕ ದಾನ ನೀಡುತ್ತಾನೆ. ಈ ಗ್ರಾಮಗಳಲ್ಲದೆ ವಿರೂಪಾಕ್ಷ ದೇವರಿಗೆ ಒಂದು ನಾಗಾಭರಣ, ಒಂದು ನವರತ್ನ ಕಮಲ, ಚಿನ್ನದ ಹರಿವಾಣ, ಎರೆಡು ಚಿನ್ನದ ಆರತಿ ಹಲಗೆ, ಮೂವತ್ತನಾಲ್ಕು(೩೪) ಬೆಳ್ಳಿಯ ಆರತಿಗಳನ್ನು ತನಗೆ ಧರ್ಮವಾಗಬೇಕೆಂದು ಕೃಷ್ಣದೇವರಾಯನ ಶ್ರೀ.ವಿರೂಪಾಕ್ಷನಿಗೆ ಸಮರ್ಪಿಸಿದ್ದನ್ನು ತಿಳಿಸಲಾಗಿದೆ. ಈ ಮೇಲೆ ಹೇಳಿದ ಗ್ರಾಮಗಳಿಂದ ಒಟ್ಟುಗೂಡಿದ ಆದಾಯ ಮತ್ತು ಚಿನ್ನ, ಬೆಳ್ಳಿಯ ಸಾಮಾಗ್ರಿಗಳು ದೇವಸ್ಥಾನದ ಶ್ರೀಬಂಡಾರಕ್ಕೆ ಸಮರ್ಪಣೆಗೊಂಡು ಇದು ದೇವಸ್ಥಾನದ ಆದಾಯವಾಗುತ್ತಿತ್ತು.[೪೯] ಇದೇ ದೇವಸ್ಥಾನದ ರಂಗಮಂಟಪದ ಎಡಗಡೆ ನಿಲ್ಲಿಸಿರುವ ಶಾಸನವು ನಿರೂಪಿಸುವಂತೆ ಕ್ರಿ.ಶ.೧೫೧೦ರಲ್ಲಿ

ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ದಿನ ವಿರೂಪಾಕ್ಷದೇವರ ಅಮೃತಪಡಿ ಮತ್ತು ನೈವೇದ್ಯ ಸೇವೆಗಾಗಿ ಸಿಂಗನಾಯಕನಹಳ್ಳಿಯನ್ನು ದಾನನೀಡುತ್ತಾನೆ. ಅಲ್ಲದೇ ದೇವಸ್ಥಾನದ ಹಲವು ಭಾಗಗಳನ್ನು ಜೀರ್ಣೋದ್ಧಾರ ಮಾಡಿಸಿ ಬೆಲೆ ಬಾಳುವ ರತ್ನಗಳಿಂದ ಅಲಂಕೃತವಾದ ಚಿನ್ನದ ಕಮಲ ನಾಗಾಭರಣ, ನೈವೇದ್ಯ ಮಾಡಲು ಚಿನ್ನದ ಹರಿವಾಣ, ಎರೆಡು ಚಿನ್ನದ ತಟ್ಟೆಗಳು, ಚಿನ್ನದ ಆರತಿ, ಇಪ್ಪತ್ತು ನಾಲ್ಕು ಬೆಳ್ಳಿಯ ಆರತಿಗಳನ್ನು ದೇವರ ಸೇವೆಗೆ ನೀಡುತ್ತಾನೆ.[೫೦] ಕ್ರಿ.ಶ.೧೫೩೪ರಲ್ಲಿ ವಿಯನಗರವನ್ನು ಅಚ್ಯುತರಾಯರು ಆಳ್ವಿಕೆ ನಡೆಸುವ ಕಾಲದಲ್ಲಿ ತಮ್ಮ ತಂದೆ ನರಸಣನಾಯಕ ಮತ್ತು ತಾಯಿ ಬುಕ್ಕಜಿ ಅಮ್ಮನವರಿಗೆ ಪುಣ್ಯವಾಗಲೆಂದು ವಿರುಪಾಕ್ಷ ದೇವರ ದೇವಾಸ್ಥಾನದ ಸೋಮಣನಾಯಕರ ಗೋಪುರದ ಹತ್ತಿರ ಶ್ರೀಬಕ್ಕೇಶ್ವರ ದೇವರನ್ನು ಪ್ರತಿಷ್ಠಾಪಿಸಿದನು. ಈ ಬಕ್ಕೇಶ್ವರ ದೇವರಿಗೆ ನೈವೇದ್ಯಕ್ಕೆ ಕುರುಗೋಡು ಸೀಮೆಯೊಳಗಣ ''ದೊಂಡವಟ' ಗ್ರಾಮವನ್ನು ದಾನ ನೀಡಿದನ್ನು ತಿಳಿಯಬಹುದು.[೫೧]

ಅಚ್ಯುತ ದೇವರಾಯರ ಆಳ್ವಿಕೆಯ ನಂತರ ಸದಾಶಿವರಾಯರು ವಿಜಯನಗರದ ಸಿಂಹಾಸನವನ್ನೇರಿದರು. ಕ್ರಿ.ಶ.೧೫೪೩ರಲ್ಲಿ ಸದಾಶಿವರಾಯನು ಕುರುಗೋಡಿನ ಸಂಗಮೇಶ್ವರ ದೇವರಿಗೆ ಬೆನಕುಂಟೆ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದ್ದನ್ನು ದಾಖಲೆಗಳಿಂದ ತಿಳಿಯಬಹುದು.[೫೨] ಹೀಗೆ ವಿಜಯನಗರದ ಅರಸರು ಯಾವುದೇ ಮತಗಳ, ಧರ್ಮಗಳ ಅನುಯಾಯಿಗಳಾಗಿದ್ದರು ಅವರು ತಮ್ಮ ಸರ್ವಮತದಲ್ಲಿ ಗೌರವ, ಭಾವನೆಯನ್ನು ಹೊಂದಿದವರಾಗಿದ್ದರು ಎಂಬುದನ್ನು ನೋಡಬಹುದು. ಕ್ರಿ.ಶ.೧೫೫೨ರಲ್ಲಿ ಸದಾಶಿವರಾಯನು ವಿಜಯನಗರ ಸಿಂಹಾಸನದಿಂದ ಆಳ್ವಿಕೆ ನಡೆಸುತ್ತಿದ್ದ ಸಮಯದಲ್ಲಿ ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವರಿಗೆ ಸೇವೆ ಮಾಡುವವರಿಗೆ ಮೊರಬ ಸೀಮೆಯಲ್ಲಿರುವ ಪಂನುಲನುಂಕನ ಹಳ್ಳಿಯನ್ನು ದಾನ ನೀಡಿದ್ದನ್ನು ಶಾಸನವು ತಿಳಿಸುತ್ತದೆ.[೫೩]

ಹೀಗೆ ದೇವಸ್ಥಾನಕ್ಕೆ ಆಳ್ವವರ್ಗವು ದಾನವನ್ನು ನೀಡುತ್ತಿದ್ದರಿಂದ ದೇವಸ್ಥಾನವು ಹೆಚ್ಚು ವಿಸ್ತಾರವಾಗಿ ಬೆಳೆಯುತ್ತಿದ್ದವು. ದೇವಸ್ಥಾನದ ಭಂಡಾರವು ಸದಾ ತುಂಬಿರುತ್ತಿತ್ತು. ಈ ದಾನದತ್ತಿಗಳಿಂದ ಬಂದ ಹಣದಿಂದ ಗ್ರಾಮಕ್ಕೆ ಉಪಯೋಗ ವಾಗುವಂತಹ ಕೆಲಸಗಳನ್ನು ಕೈಗೊಳ್ಳಲಾಗುತ್ತಿತ್ತು.

## ಹಣ ಮತ್ತು ದಾನ್ಯ ರೂಪದ ದತ್ತಿಗಳು

ಹೀಗೆ ದೇವಸ್ಥಾನಗಳಿಗೆ ಗ್ರಾಮ, ಭೂಮಿಗಳನ್ನಲ್ಲದೆ, ಹಣವನ್ನು ಮತ್ತು ಧಾನ್ಯಗಳನ್ನು ದಾನವಾಗಿ ನೀಡುವ ಪದ್ಧತಿ ವಿಜಯನಗರದಲ್ಲಿ ಕಂಡುಬರುತ್ತದೆ. ನಾಣ್ಯಗಳು ಹೆಚ್ಚಾಗಿ ದೇವಸ್ಥಾನದ ಪ್ರದೇಶದಲ್ಲಿ ಚಲಾವಣೆಗೊಳ್ಳುವ ನಾಣ್ಯಗಳನ್ನು ದಾನವಾಗಿ ನೀಡಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ನಾಣ್ಯಗಳನ್ನು ಟಂಕಸಾಲೆಯ ಹೆಸರಿನಿಂದ ಕರೆಯುವುದು ವಾಡಿಕೆಯಿತ್ತು. ಟಂಕಸಾಲೆಯು ಊರಿಗೆ ಹೊಂದಿಕೊಂಡು

ಇದ್ದವೆಂದು ನಾಣ್ಯಗಳಲ್ಲಿ, ಶಾಸನಗಳಲ್ಲಿ ಕಂಡುಬರುತ್ತವೆ. ಇವುಗಳ ಆಧಾರದ ಮೇಲೆ ಹೇಳುವುದಾದರೆ ಬಾರಕೂರು ಗದ್ಯಾಣ, ಮಂಗಳೂರು ಗದ್ಯಾಣ, ಗುತ್ತಿಹೊನ್ನು, ತಿರುಪತಿ ಹೊನ್ನು ಆದೋಣಿ ಹಣ ತಾಡಪತ್ರೆಯ ಗದ್ಯಾಣ ನೆಲ್ಲೂರು ಎಂಬ ಹೆಸರುಗಳಿಂದ ಗುರುತಿಸಲಾಗುತ್ತಿತ್ತು.[೫೪] ಹಾಗಾಗಿ ದೇವಸ್ಥಾನವು ಇರುವ ಪ್ರದೇಶದ ಸಮೀಪದ ಟಂಕಸಾಲೆಯ ಹಣವನ್ನು ದೇವಸ್ಥಾನದ ಆಡಳಿತಕ್ಕೆ ಸಾಮಾನ್ಯವಾಗಿ ದಾನ ನೀಡಲಾಗುತ್ತಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಕೋಟೇಶ್ವರದ ಕೋಟೇಶ್ವರ ದೇವರಿಗೆ ಶಿವರಾತ್ರಿಯ ರಂಗಪೂಜೆಗೆ, ನಂದಾದೀವಿಗೆಗೆ ಹೂವಿನ ಮಾಲೆಗೂ ಕೂಡಿ ಹನ್ನೆರೆಡು ಹೊನ್ನನ್ನು ದಾನ ನೀಡಿದನ್ನು ಕ್ರಿ.ಶ.೧೩೬೪ರ ಬುಕ್ಕನ ಆಳ್ವಿಕೆಯ ಕಾಲದ ಶಾಸನವು ತಿಳಿಸುತ್ತದೆ.[೫೫] ಇದೇ ದೇವರಿಗೆ ಕ್ರಿ.ಶ.೧೩೭೭ರಲ್ಲಿ ನಂದದೀಪಕ್ಕೆ ತುಪ್ಪಕ್ಕೆ ಎಲೆ ಅಡಿಕೆಗೆ ಹಾಗೂ ನಡೆಯುವ ಉತ್ಸವಗಳಿಗೆ ೧೩೫ ರೊಕ್ಕ ೬೫ ಕಾಟಿ ಗದ್ಯಾಣವನ್ನು ದಾನವಾಗಿ ನೀಡಲಾಗಿದೆ.[೫೬]

ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ತಾಲೂಕಿನ ಹಿರೇ ಅಗ್ರಹಾರ ಗ್ರಾಮದ ಶಂಕರ ನಾರಾಯಣ ದೇವರಿಗೆ ಬೇರೆ ಬೇರೆ, ದೇವರ ಉತ್ಸವಗಳಿಗಾಗಿ ನಿಗದಿತ ಪ್ರಮಾಣದ ಅಕ್ಕಿಯನ್ನು ದೇವಸ್ಥಾನಕ್ಕೆ ನೀಡಲಾಗಿದೆ. ಇದು ದೇವಸ್ಥಾನದಲ್ಲಿ ಕೆಲಸ ಮಾಡುವ ಪರಿಚಾರಕರಿಗೆ ದೇವಸ್ಥಾನದ ಆಡಳಿತವು ನೀಡುವ, ಹಣವಾಗಿದ್ದು ಅದಕ್ಕಾಗಿ ರಾಜನು ದಾನ ಬಿಟ್ಟರುವುದನ್ನು ಹಿರೇ ಅಗ್ರಹಾರ ಗ್ರಾಮದ ಶಾಸನವು ನಿರೂಪಿಸುತ್ತಿದೆ.[೫೭] ದೇವಸ್ಥಾನಕ್ಕೆ ಭೂಮಿ, ಗ್ರಾಮ ರೂಪದಲ್ಲಿ ದತ್ತಿ ನೀಡುತ್ತಿದುದ್ದಲ್ಲದೆ, ದಾನ್ಯರೂಪದಲ್ಲಿ ದತ್ತಿ ನೀಡಿರುವುದನ್ನು ಇಲ್ಲಿ ಗಮನಿಸಬಹುದು.

ಕ್ರಿ.ಶ.೧೪೪೭ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೋಟೇಶ್ವರದ ಕೋಟೇಶ್ವರದೇವರಿಗೆ, ದತ್ತಿ ನೀಡಿದರು. ಪ್ರೌಢದೇವರಾಯನು ವಿಜಯನಗರವನ್ನು ಆಳ್ವಿಕೆ ನಡೆಸುತಿದ್ದ ಈ ಸಮಯದಲ್ಲಿ ಬಾರಕೂರಿಗೆ ರುಪ್ಪಣ್ಣ ಒಡೆಯರು ಪ್ರಾಂತ್ಯಾಧಿಕಾರಿಗಳಾಗಿದ್ದರು. ಭಂಡಾರದ ಗುರುರಾಯ ಒಡೆಯರು ಕೋಟೇಶ್ವರನಿಗೆ ರಂಗಪೂಜಿ, ಮಹಾಪೂಜೆ, ಹೂಮಾಲೆಗಾಗಿ, ನೂರಾತೊಂಬತ್ತಾರು ಹೊನ್ನು(೧೯೬) ದಾನ ನೀಡಿರುತ್ತಾರೆ.[೫೮]

ಇದೇ ಕೋಟೇಶ್ವರನಿಗೆ ಮಲ್ಲಿಕಾರ್ಜುನನ ಆಳ್ವಿಕೆಯ ಕಾಲದಲ್ಲಿ ನಲವತ್ತೆಂಟು ಉಪ್ಪಿನ ಹೊನ್ನುಗಳನ್ನು ದಾನವಾಗಿ ನೀಡಲಾಗಿದೆ.[೫೯] ಬಸರೂರಿನ ಮಹಾಲಿಂಗೇಶ್ವರ ದೇವಾಲಯಕ್ಕೆ ಕ್ರಿ.ಶ.೧೪೫೧ರಲ್ಲಿ ಬಸರೂರಿನ ದಿವಾರಕೇರಿಯ ತೋಟದ ನೂರಹನ್ನೊಂದು ಹೊನ್ನನ್ನು ಮಲ್ಲಿಕಾರ್ಜುನರಾಯರ ನಿರೂಪದಿಂದ ದಾನಮಾಡಿದ್ದನ್ನು ಬಸರೂರಿನ ದಿವಾರಕೇರಿಯ ಶಾಸನವು ನಿರೂಪಿಸುತ್ತದೆ.[೬೦]

ಕ್ರಿ.ಶ.೧೩೬೪ರಲ್ಲಿ ಕುಂದಾಪುರದ ಕುಂದೇಶ್ವರ ದೇವರಿಗೆ ವೀರಬುಕ್ಕನ ಆಳ್ವಿಕೆ ಅವಧಿಯಲ್ಲಿ ಚಕ್ಕರೆಯ ಊರಿನ ಗ್ರಾಮಸ್ಥರು ಹನ್ನೆರೆಡು ಹೊನ್ನನು ದಾನ ನೀಡುತ್ತಾರೆ.[೬೧] ಕ್ರಿ.ಶ.೧೩೭೯ರಲ್ಲಿ ಎರೆಡನೆಯ ಹರಿಹರನು ವಿಜಯನಗರದಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದ ಅವಧಿಯಲ್ಲಿ ಮಾದರಸನು ಎರಡು ನೂರು ಗದ್ಯಾಣಗಳನ್ನು ದಾನವಾಗಿ ನೀಡುತ್ತಾನೆ. ಇದು ಸುಬ್ರಮಣ್ಯ ದೇವಸ್ಥಾನಕ್ಕೆ ನೀಡಲ್ಪಟ್ಟ ದಾನವಾಗಿದೆ.[೬೨] ಕ್ರಿ.ಶ.೧೫೧೦ರಲ್ಲಿ ವಿಜಯನಗರದ ಅರಸರು ಬಸರೂರಿನ ಮಹಾದೇವ ದೇವರಿಗೆ ಅರವತ್ತು ವರಹಗಳನ್ನು ದೇವರ ಸೇವೆಗಾಗಿ ದಾನನೀಡಿರುವುದನ್ನು ಶಾಸನಗಳು ಉಲ್ಲೇಖಿಸಿವೆ.[೬೩]

ನಮ್ಮದು ದೇವಾಲಯಗಳ ನಾಡು, ದೇವಾಲಯದ ಸಂಸ್ಕೃತಿ ಕರ್ನಾಟಕ ಸಮಗ್ರ ಸಂಸ್ಕೃತಿಕಯ ಪ್ರತೀಕ ನಮ್ಮ ಹಿರಿಯರು ತಮಗೆ ವಾಸಿಸಲು ತೀರಾ ಸಾಮಾನ್ಯವಾದ ಮನೆಯನ್ನು ಕಟ್ಟಿಕೊಂಡರೂ ಊರ ದೇವಾಲಯವನ್ನು ಭವ್ಯವಾಗಿ ಕಲಾತ್ಮಕವಾಗಿ ಶ್ರೀಮಂತವಾಗಿ ನಿರ್ಮಿಸುತ್ತಿದ್ದರು. ಒಂದು ಊರಿನ ದೇವಸ್ಥಾನವನ್ನು ನೋಡಿದರೆ, ಇಡೀ ಊರಿನ ಸಂಸ್ಕೃತಿಯನ್ನು ನೋಡಿದಂತಾಗುತ್ತಿತ್ತು. ಈ ದೇವಾಲಯಗಳ ಅಭಿವೃದ್ಧಿಗಾಗಿ ಶಾಶ್ವತ ಪೂಜೆಗಾಗಿ ರಾಜಮಹಾರಾಜರು, ಸಾಮಂತರು ಶ್ರೀಮಂತರು ಜಮೀನ್ದಾರರು ಅಪಾರವಾದ ಉಂಬಳಿಗಳನ್ನು ನೀಡಿದ್ದನ್ನು ಈವರೆಗೆ ಶಾಸನಗಳು ನಿರೂಪಿಸಿದ್ದನ್ನು ನಾವು ನೋಡಬಹುದು.

## ದೇವಸ್ಥಾನದ ಆಡಳಿತ ವ್ಯವಸ್ಥೆ

ಸಾಂಸ್ಕೃತಿಕ ಕೇಂದ್ರಗಳೆನಿಸಿದ್ದ ವಿಜಯನಗರ ಕಾಲದ ಶೈವ ದೇವಾಲಯಗಳು ಅಂದಿನ ಕಾಲದ ಧಾರ್ಮಿಕ, ಆರ್ಥಿಕ ಸಾಮಾಜಿಕ, ರಂಗದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದವು. ಅಂದಿನ ಕಾಲದ ಶೈವ ದೇವಾಲಯಗಳು ನ್ಯಾಯಾಲಯಗಳಾಗಿ, ವಿದ್ಯಾಕೇಂದ್ರಗಳಾಗಿ, ಚಿಕಿತ್ಸಾಲಯಗಳಾಗಿ ಕಾರ್ಯನಿರ್ವಹಿಸಿ ಜನಜೀವನದ ಪ್ರಮುಖ ಅಂಗಗಳೆನಿಸಿದರೆ, ಮೂರ್ತಿ, ಶಿಲ್ಪ, ಚಿತ್ರಕಲೆ, ಸಂಗೀತ, ನೃತ್ಯ ಮೊದಲಾದವು ಲಲಿತ ಕಲೆಗಳ ತಾಣವಾಗಿದ್ದವು. ದೇವಸ್ಥಾನದ ಕಟ್ಟಡವು ಸೌಂದರ್ಯದ ಖನಿಯಾಗಿ ಅತ್ಯಂತ ವೈಭವದಿಂದ ತಮ್ಮಗತ ವೈಭವವನ್ನು ಸಾರಲು ಇಂದಿಗೂ ಮೂಕ ಸಾಕ್ಷಿಗಳಾಗಿ ನಿಂತಿರುವುದನ್ನು ಕಾಣಬಹುದು. ದೇವಸ್ಥಾನವು ಆರ್ಥಿಕ ಸಂಸ್ಥೆಯಾಗಿ ಕಾರ್ಯನಿರ್ವಹಿಸಿ, ಜನತೆಯನ್ನು ಆರ್ಥಿಕವಾಗಿ ಸಬಲರಾಗಲು, ಸಹಕರಿಸುತ್ತಿತ್ತು. ಅಲ್ಲದೆ ದೇವಾಲಯವು ಹಲವಾರು ಜನರಿಗೆ ಉದ್ಯೋಗ ನೀಡಿ ಅವರ ಕುಟುಂಬದ ನಿರ್ವಹಣೆಗೆ ಸಹಕಾರಿಯಾಗಿ, ಆ ಮೂಲಕ ಸಮಾಜದ ಉನ್ನತಿಗೆ ಸಹಕಾರಿಯಾಗುತ್ತಿತ್ತು. ಅಪಾರವಾದ ಸ್ಥಿರ ಆದಾಯವನ್ನು ಮತ್ತು ಚರ ಆದಾಯವನ್ನು ಹೊಂದಿದ್ದ ದೇವಸ್ಥಾನಗಳು ಅಂದಿನ ಜನತೆಯ ಬದುಕಿನ ಬೆಳಕಿನ ಕಿರಣಗಳಾಗಿದ್ದವು.

ಧರ್ಮವನ್ನು ರಕ್ಷಿಸುವ ನೆಪದಲ್ಲಿ ದೇವರು, ದೇವರನ್ನು ರಕ್ಷಿಸಲು ದೇವಾಲಯಗಳು, ದೇವಾಲಯಗಳನ್ನು ಅವಲಂಬಿಸಿ ಮಠಗಳು ಬೆಳೆದು ಬಂದವು. ಇದರಿಂದಾಗಿ ಧರ್ಮ ಗುರುಗಳಿಗೂ ಮತ್ತು ದೇವಾಲಯಗಳಿಗೂ

ಮತ್ತು ಆಡಳಿತಕ್ಕೂ ಪರಸ್ಪರ ಪೂರಕವಾತಾವರಣ ವಿಜಯನಗರ ಕಾಲದ ಶೈವ ದೇವಾಲಯಗಳಲ್ಲಿ ಕಂಡುಬರುತ್ತದೆ. ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಅನೇಕ ಶೈವ, ಕಾಳಮುಖ, ಪಾಶುಪತ, ವೀರಶೈವ ಮಠಗಳು, ಸಾಮ್ರಾಜ್ಯಕ್ಕೊಬ್ಬ, ಮಂಡಲಕ್ಕೊಬ್ಬ, ನಾಡಿಗೊಬ್ಬ, ನಗರಕ್ಕೊಬ್ಬ ಮತ್ತು ಗ್ರಾಮಕೊಬ್ಬ ಧರ್ಮಗುರುಗಳನ್ನೂ ಹೊಂದಿರುತ್ತಿದ್ದವು. ಇವರುಗಳು ತಮ್ಮ ಪ್ರದೇಶದಲ್ಲಿನ ದೇವಾಲಯಗಳ ಸ್ಥಾನಪತಿಗಳಾಗಿ ಅದರ ಆಗುಹೋಗುಗಳನ್ನೂ ನೋಡಿಕೊಳ್ಳುತ್ತಿದ್ದನ್ನು ಕಾಣಬಹುದು. ಕ್ರಿ.ಶ.೧೪೮೭ರಲ್ಲಿ ದಕ್ಷಿಣಕನ್ನಡ ಜಿಲ್ಲೆ ಬಸರೂರಿನ ಪಡುವಣ ಕೇರಿಯ ಒಳಗೆ ಶ್ರೀ ಮಹಾದೇವರ ಸನ್ನಿಧಿಯಲ್ಲಿ ಮಠವನ್ನು ಕಟ್ಟಿಸಿ "ರುದ್ರಾಕ್ಷಿ ಒಡೆಯರಿಗೆ" ಹಲವಾರು ಶಿಟ್ಟಿಕಾರರು ಭೂಮಿಯನ್ನು ದಾನವಾಗಿ ನೀಡುತ್ತಾರೆ. ಈ ರುದ್ರಾಕ್ಷಿ ಒಡೆಯರು ಈ ಮಠದ ಸ್ಥಾನಾಚಾರ್ಯನಾಗಿದ್ದನು ಎನ್ನಬಹುದು.[೬೪]

ಶೈವ ದೇವಸ್ಥಾನಗಳ ಆಡಳಿತವನ್ನು ಆಯಾ ದೇವಸ್ಥಾನದ ಕಾಳಮುಖ ಶೈವಧರ್ಮದ ಸ್ಥಾನಾಚಾರ್ಯರು ನೋಡಿಕೊಳ್ಳುತ್ತಿದ್ದರು. ಶಾಸನಗಳಲ್ಲಿ ಇವರನ್ನು "ಸ್ಥಾನಿಕ" "ಸ್ಥಾನಪತಿ" "ಮಠಧಿಪತಿ" "ಸ್ಥಾನಾಚಾರ್ಯ" ಎಂದು ಕರೆಯಲಾಗಿದೆ.[೬೫] ಈ ಸ್ಥಾನಪತಿಗಳ ಮೇಲೆ ನಾಡಿಗೊಬ್ಬರು ಹಿರಿಯ ಸ್ಥಾನಪತಿ ಇರುತ್ತಿದ್ದನು. ಈ ಎಲ್ಲಾ ಮಠಗಳಿಗೂ ಸಾಮ್ರಾಜ್ಯಕ್ಕೆ ಒಬ್ಬ ಹಿರಿಯ ಸ್ಥಾನಪತಿ ಇರುತ್ತಿದ್ದಿರಬೇಕು.[೬೬] ದೇವಾಲಯಗಳಲ್ಲಿ ಮಠಗಳಿರುತ್ತಿದ್ದವು. ಮಠಗಳು ಶೈವ ಸ್ಥಾನಪತಿಗಳ ವಾಸಸ್ಥಾನಗಳಾಗಿದ್ದವೆಂಬುದನ್ನು ಹಿಂದೆಯೇ ನೋಡಿದ್ದೇವೆ. ದೇವಸ್ಥಾನದ ಸ್ಥಾನಪತಿಗಳು ತಮ್ಮ ದೇವಾಲಯದ ಆಡಳಿತ ನಡೆಸಲು ಸ್ವತಂತ್ರರಾಗಿದ್ದರೂ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದಂತೆ ನಾಡಿನಲ್ಲಿನ ಹಿರಿಯ ಸ್ಥಾನಾಚಾರ್ಯರಿಂದ ಮಾರ್ಗದರ್ಶನ ಪಡೆದುಕೊಳ್ಳುತ್ತಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕೋಟೇಶ್ವರದ ಕೋಟೇಶ್ವರ ದೇವಾಲಯವು ವಿಜಯನಗರ ಕಾಲದಲ್ಲಿ ಸುಪ್ರಸಿದ್ಧವಾದ ಕಾಳಮುಖ ಪಂಥದ ಶೈವ ದೇವಸ್ಥಾನವಾಗಿರುತ್ತಿತ್ತು. ಈ ದೇವಸ್ಥಾನವಾಗಿತ್ತು. ಕೋಟೇಶ್ವರನ ದೇವಾಲಯಕ್ಕೆ ಕಾಳಾಮುಖ ಪಂಥದ ಶೈವಗುರುಗಳು ಅಧಿಪತಿಗಳಾಗಿದ್ದರು.

ಈ ದೇವಾಲಯವು ತನ್ನ ಕೆಳಗಿನ ಎಪ್ಪತ್ತೇಳು ಚಿಕ್ಕಪುಟ್ಟ ದೇವಾಲಯಗಳಿಗೆ ಕೇಂದ್ರ ದೇವಾಲಯ ವಾಗಿತ್ತು.[೬೭] ಕೋಟೇಶ್ವರ ದೇವಸ್ಥಾನದ ಸ್ಥಾನಾಚಾರ್ಯರು ತಮ್ಮ ಕೆಳಗೆ ಬರುವ ಈ ಎಪ್ಪತೇಳು ದೇವಸ್ಥಾನಗಳಿಗೆ ಮಾರ್ಗದರ್ಶನ ನೀಡುವಂತವರಾಗಿದ್ದರು. ಬ್ರಾಹ್ಮಣರಿಗೆ ದಾನವನ್ನು ನೀಡಿದ ಗ್ರಾಮವನ್ನು ಅಗ್ರಹಾರ ಎಂದು ಕರೆಯಲಾಗುತ್ತಿತ್ತು ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಈ ಅಗ್ರಹಾರಗಳು ದೇವಸ್ಥಾನವನ್ನು ಒಳಗೊಂಡಿರುತ್ತಿದ್ದವು. ಈ ಅಗ್ರಹಾರದಲ್ಲಿನ ದೇವಾಲಯಗಳ ಆಡಳಿತವನ್ನು ಅಗ್ರಹಾರ ಗ್ರಾಮದ ಮುಖಂಡನಾದ ಪಂಡಿತನೇ ನೋಡಿಕೊಳ್ಳುತ್ತಿದ್ದನು. ಶೈವ ಗುರುಗಳು

ದೇವಸ್ಥಾನ ಪ್ರದೇಶದಲ್ಲಿ ವಾಸವಾಗಿರುತ್ತಿದ್ದರೂ. ಒಬ್ಬರಿಗಿಂತ ಹೆಚ್ಚಾಗಿ ಗುರುಗಳು ಆ ದೇವಸ್ಥಾನದಲ್ಲಿದ್ದರೆ, ಅವರಲ್ಲಿ ಹಿರಿಯವನೇ ಸಾಮಾನ್ಯವಾಗಿ ಸ್ಥಾನಪತಿ ಎನ್ನಿಸಿಕೊಳ್ಳುತ್ತಿದ್ದನು.

ಶೈವಗುರುಗಳು ಅಖಂಡ ಬ್ರಹ್ಮಚಾರಿಗಳಾಗಿದ್ದು ಬ್ರಹ್ಮಚಾರಿ ವಿದ್ಯಾರ್ಥಿಗಳಿಗೇ ವಿದ್ಯಾದಾನ ಮಾಡುತ್ತಿದ್ದರು. ಆದರೆ ಕಾಳಾಮುಖ ಶೈವಗುರುಗಳಲ್ಲಿ ಕೆಲವರು ವಿವಾಹಿತ ಸ್ಥಾನಪತಿಗಳು ಇರುತ್ತಿದ್ದರು.[೬೮] ಧಾರ್ಮಿಕ ಮತ್ತು ತಾತ್ವಿಕ ಹಿನ್ನೆಲೆಯುಳ್ಳ ಸ್ಥಾನಾಚಾರ್ಯರು ತಪ್ಪು ಮಾಡುವುದು ಕಡಿಮೆಯಾಗಿತ್ತು. ಒಳ್ಳೆಯ ನಡೆತೆಗೆ ನೈತಿಕ ಬದುಕಿಗೆ ಇವರು ಮಾದರಿಯಾಗಿದ್ದರು. ಆದರೆ ಹನ್ನೆರಡನೇಯ ಶತಮಾನದಷ್ಟೊತ್ತಿಗೆ ಸ್ಥಾನಾಚಾರ್ಯರ ನೈತಿಕತೆ ಮಾಯವಾಗಿರುವಂತಹ ಶಾಸನಗಳು ದೊರೆಯುತ್ತವೆ. ದೇವಸ್ಥಾನದ ದೇವದಾಸಿಯರಿಗೆ ಇವರು ಮನಸೋತು ಭ್ರಷ್ಟರಾದ ವಿಷಯವನ್ನು ಕರ್ನಾಟಕದ ಶಾಸನಗಳು ಸೂಚಿಸುತ್ತವೆ. ದೇವಸ್ಥಾನದ ಹಣವನ್ನು ದುರ್ಬಳಕೆ ಮಾಡುತ್ತಿದ್ದ ವಿಷಯವನ್ನು ಅವು ನಿರೂಪಿಸುತ್ತವೆ.[೬೯] ರಾಜನೇ ನೇರವಾಗಿ ಸ್ಥಾನಿಕರನ್ನು ನೇಮಿಸುತ್ತಿದ್ದನು. ಎಂದು ಡಾ.ಬಿ.ಎ.ಸಾರೆತ್ತೊರ್ ಅಭಿಪ್ರಾಯ ಪಡುತ್ತಾರೆ.[೭೦]

ದೇವಾಲಯದ ಮುಖ್ಯಸ್ಥರಾದ ಸ್ಥಾನಿಕರು ತಮ್ಮ ದೇವಾಲಯದ ಸಮಸ್ತ ಹೊಣೆಯನ್ನು ಹೊತ್ತಿದ್ದರು. ಇವರು ಅಧಿಕಾರವನ್ನು ಹೊಂದಿದ್ದರೂ ಸ್ವೇಚ್ಛೆಯಿಂದ ವರ್ತಿಸುವಂತಿರಲಿಲ್ಲ. ದೇವಾಲಯದ ಆಸ್ತಿಯನ್ನು ದುರ್ಬಳಕೆ ಮಾಡುವಂತಿರಲಿಲ್ಲ. ಬಿಟ್ಟ ದಾನವು ಆಯಾ ಉದ್ದೇಶಕ್ಕೆ ವಿನಿಯೋಗವಾಗಬೇಕು. ಇವರಲ್ಲಿ ಕರ್ತವ್ಯ ಚ್ಯುತಿ ಕಂಡುಬಂದರೆ, ಗ್ರಾಮದ ಜನತೆ, ಗ್ರಾಮದ ಸಭೆಗಳು, ಸಂಘ ಸಂಸ್ಥೆಗಳು ಇವರನ್ನು ಹೊರಗೆ ಹಾಕುತ್ತಿದ್ದವು. ಕಾರ್ಯಚಟುವಟಿಕೆಗಳ ಮೇಲೆ ಗ್ರಾಮ ಸಭೆಯು ನಿಗಾ ಇಟ್ಟಿರುತ್ತಿತ್ತು. ಅಂದರೆ ಸ್ಥಾನಾಚಾರ್ಯರ ಆಡಳಿತವನ್ನು ವ್ಯಾಪಾರಿ ಸಂಘಗಳು, ನಾಡಸಭೆಗಳು, ನಾಗರೀಕ ಸಂಸ್ಥೆಗಳು ಗಮನಿಸುತ್ತಿದ್ದವು ಎಂಬುದು ಗಮನಿಸಬೇಕಾದ ಅಂಶ. ದೇವಸ್ಥಾನಗಳ ಮೇಲ್ವಿಚಾರಣೆ ಮಾಡುವುದು ಗ್ರಾಮಸಭೆಯ ಮುಖ್ಯ ಕರ್ತವ್ಯಗಳಲೊಂದಾಗಿತ್ತು.

ನಾಡು ಎಂಬ ಪ್ರಾಂತ್ಯೀಯ ಆಡಳಿತ ಪ್ರದೇಶ ವಿಜಯನಗರ ಕಾಲದಲ್ಲಿ ಅಸ್ತಿತ್ವದಲ್ಲಿದ್ದನ್ನು ಕಾಣಬಹುದು. ಈ ನಾಡಿನ ಆಡಳಿತವನ್ನು ನಾಡಗೌಡನು ನೋಡಿಕೊಳ್ಳುತ್ತಿದ್ದನು. ತನ್ನ ವ್ಯಾಪ್ತಿಯಲ್ಲಿ ಬರುವ ದೇವಸ್ಥಾನಗಳ ಉಸ್ತುವಾರಿಯನ್ನು ನೋಡಿಕೊಳ್ಳುವುದು ನಾಡಗೌಡನ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿತ್ತು. ನಾಡ ಪ್ರತಿನಿಧಿಗಳು ಅನೇಕ ವೇಳೆ ದೇವಸ್ಥಾನದ ಒಳ ಆಡಳಿತಕ್ಕೆ ಸಂಬಂಧಪಟ್ಟ ಆರ್ಥಿಕ ವಿವರಗಳನ್ನು ತೀರ್ಮಾನಿಸುತ್ತಿತ್ತು.[೭೧] ಹೀಗಾಗಿ ದೇವಸ್ಥಾನದ ಆಡಳಿತದ ಒಳ ಹೊರಗನ್ನು ಈ ಸಮಿತಿ ಗಮನಿಸುತ್ತಿತ್ತು. ನಾಡಗೌಡನು ಒಬ್ಬ ಪ್ರಾಂತೀಯ ಮುಖ್ಯ ಅಧಿಕಾರಿಯಾಗಿದ್ದರಿಂದ ತನ್ನ ವ್ಯಾಪ್ತಿಯಲ್ಲಿ ಬರುವ ದೇವಸ್ಥಾನಗಳಿಗೆ ಆತನು ದಾನ ನೀಡುವ ಅಧಿಕಾರವನ್ನೂ ಹೊಂದಿದ್ದನು. ದೇವಸ್ಥಾನದಲ್ಲಿ ನಡೆಯುವ ಕಾರ್ಯಚಟುವಟಿಕೆಗಳನ್ನು ಆತನು ತನ್ನ ಮೇಲಿನ ಅಧಿಕಾರಿಗಳಿಗೆ ತಿಳಿಸುತ್ತಿದ್ದನು.

## ದೇವಸ್ಥಾನದಲ್ಲಿ ಸೇವೆಮಾಡುವ ಪರಿಚಾರಕರು

ವಿಜಯನಗರ ಕಾಲದಲ್ಲಿ ದೇವಾಲಯವು ಒಂದು ಸಾಂಸ್ಕೃತಿಕ ಸಂಸ್ಥೆಯಾಗಿತ್ತು. ದೇವಾಲಯದಲ್ಲಿ ಜರುಗುವ ತ್ರಿಕಾಲಪೂಜೆ ಪುನಸ್ಕಾರಕ್ಕೆ, ನೈವೇದ್ಯಕ್ಕೆ ಗಂಧವನ್ನು ತೀಡುವುದಕ್ಕೆ ಪುಷ್ಪ, ದೀಪ, ದೂಪ ಹಾಕುವುದಕ್ಕೆ ಮೊದಲಾದ ದೇವರ ಅಂಗಭೋಗಕ್ಕೆ ಸೇವೆ ಸಲ್ಲಿಸುವ ಪರಿಚಾರಕರನ್ನು ದೇವಸ್ಥಾನವು ಹೊಂದಿರುತ್ತಿತ್ತು. ಇದೇ ರೀತಿಯಲ್ಲಿ ನಾಟ್ಯ ಮಾಡಲು ಸಂಗೀತವನ್ನು ಹಾಡಲು ವಾದ್ಯ, ಕಹಳೆ ಮೊದಲಾದ ರಂಗಭೋಗ ಕಾರ್ಯಗಳನ್ನು ನಿರ್ವಹಿಸಲು ದೇವಸ್ಥಾನವು ಪರಿಚಾರಕರನ್ನು ಹೊಂದಿರುತ್ತಿದ್ದಿತು. ದೇವಸ್ಥಾನದಲ್ಲಿ ನಡೆಯುವ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವವನ್ನು ನಡೆಸಲು ಮತ್ತು ದೇವಸ್ಥಾನದ ವಾರ್ಷಿಕ ಉತ್ಸವಗಳನ್ನು ನಡೆಸಲು ಅಪಾರ ನೌಕರನ್ನು ಹೊಂದಿರುವುದನ್ನು ಶಾಸನಗಳಿಂದ ತಿಳಿದುಬರುತ್ತದೆ. ಈ ನೌಕರ ವರ್ಗವನ್ನೆ "ಪರಿಚಾರಕ ವರ್ಗ" ಎಂದು ವಿಜಯನಗರ ಪೂರ್ವದ ಶಾಸನಗಳಿಂದ ತಿಳಿದುಬರುತ್ತದೆ.[೨] ಇದೇ ತೆರನಾದ ವ್ಯವಸ್ಥೆಯನ್ನು ವಿಜಯನಗರದ ದೇವಸ್ಥಾನಗಳು ಹೊಂದಿದ್ದವು ಇವುಗಳಲ್ಲಿ ಕೆಲವಾರು ಮಾರ್ಪಾಡುಗಳನ್ನು ವಿಜಯನಗರದ ದೇವಸ್ಥಾನದ ವ್ಯವಸ್ಥೆ ಒಳಗೊಂಡಿತ್ತು. ದೇವಸ್ಥಾನದ ಪರಿಚಾರಕ ಸೇವೆಯವರು ವಂಶಪಾರಂಪರ್ಯವಾಗಿ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಒಮ್ಮೆ ನೇಮಕವಾದ ನೌಕರನು ತನ್ನ ಜೀವಮಾನಪೂರ್ತಿ ಅದರ ಸೇವಕನಾಗಿರುತ್ತಿದ್ದನು. ಅವನ ನಂತರ ಅವರ ವಂಶದವರಿಗೇ ಆ ಉದ್ಯೋಗವು ವರ್ಗಾವಣೆಗೊಳ್ಳುತ್ತಿತ್ತು. ದೇವಸ್ಥಾನದ ಪೂಜಾರಿಗಳ ಉದ್ಯೋಗವು ಇಲ್ಲಿಯವರೆಗೂ ಹಾಗೇ ಮುಂದುವರೆದಿರುವುದನ್ನು ನೋಡಬಹುದು. ಅದೇ ವಂಶದಲ್ಲಿ ಅಣ್ಣ-ತಮ್ಮಂದಿರ ಹೆಚ್ಚು ಹೆಚ್ಚು ಕುಟುಂಬಗಳಾದಾಗ ವರ್ಷಗಳಲ್ಲಿ ಇಂತಿಷ್ಟು ವರ್ಷ ಒಬ್ಬೊಬ್ಬರು ಪೂಜಾರಿಕೆ ಮಾಡಬೇಕೆಂದು ಅವಧಿಯನ್ನು ನಿರ್ಧರಿಸಲಾಗುತ್ತಿತ್ತು.

**ವೇತನ :** ದೇವಸ್ಥಾನದಲ್ಲಿ ಜೀವನ ಪರ್ಯಂತರವಾಗಿ ಜೀವನ ಸಾಗಿಸುವ ಈ ಪರಿಚಾರಿಕ ವರ್ಗಕ್ಕೆ ವೇತನವನ್ನು ಹಣದ ರೂಪದಲ್ಲಿ ನೀಡಲಾಗುತ್ತಿರಲಿಲ್ಲ. ಪರಿಚಾಕರಿಗೆ ವೇತನ ರೂಪದಲ್ಲಿ ಭೂಮಿ, ಗದ್ದೆ, ದತ್ತಿ ಬಿಟ್ಟು ಕೊಟ್ಟಿರುವುದನ್ನು ವಿಜಯನಗರದ ಶಾಸನಗಳು ನಿರೂಪಿಸುತ್ತವೆ.

ಪರಿಚಾರಕರ ಸಂಖ್ಯೆಯನ್ನು ನಿರ್ದಿಷ್ಟವಾಗಿ ಯಾವ ಶಾಸನಗಳೂ ನಿರೂಪಿಸುವುದಿಲ್ಲ. ಪರಿಚಾರಕರ ಸಂಖ್ಯೆಯು ಕಾಲದಿಂದ ಕಾಲಕ್ಕೆ ದೇವಾಲಯದಿಂದ ದೇವಾಲಯಕ್ಕೆ ಭಿನ್ನ ಭಿನ್ನವಾಗಿರುತ್ತಿತ್ತು. ಪ್ರಾಚೀನ ಕಾಲದ ಆರಂಭದಲ್ಲಿ ದೇವಸ್ಥಾನಗಳು ಗಾತ್ರದಲ್ಲಿ ಕಿರಿದಾಗಿದ್ದು, ಹೆಚ್ಚು ಪರಿಚಾರಕರನ್ನು ಹೊಂದಿರಲಿಲ್ಲ. ಎಂಟು-ಒಂಬತ್ತನೆಯ ಶತಮಾನದಲ್ಲಿ ಕಾಳಾಮುಖ, ಪಾಶುಪತರ ಉನ್ನತಿಯ ಕಾಲದಲ್ಲಿ ದೇವಸ್ಥಾನಗಳು ಬೃಹದಾಕಾರದಲ್ಲಿ ಬೆಳೆಯಲು ಪ್ರಾರಂಭಿಸಿದವು. ಹಾಗಾಗಿ ಆ ಕಾಲದಲ್ಲಿ ದೇವಸ್ಥಾನದ ಪರಿಚಾರಕರ ಸಂಖ್ಯೆಯೂ ಹೆಚ್ಚುತ್ತಾ ಹೋಯಿತು. ವಿಜಯನಗರದ ಅರಸರ ಕಾಲದಲ್ಲಿ ದೇವಾಲಯಗಳು

ಉತ್ತರೋತ್ತರವಾಗಿ ಬೆಳೆದು ಹೆಮ್ಮರವಾಗಿ ನಿಂತವು. ಅರಸರು, ಅಧಿಕಾರಿಗಳು, ಶ್ರೀಮಂತರು ಸಾಮಾನ್ಯ ಜನತೆ, ನಾಡಗೌಡರು, ಗ್ರಾಮಸಭೆಗಳು ಭಕ್ತಿಯಿಂದ ದೇವಾಲಯದ ಖರ್ಚಿಗಾಗಿ ಹೇರಳವಾಗಿ ದಾನ ದತ್ತಿಗಳನ್ನು ಬಿಟ್ಟಿದ್ದಾರೆ. ದೇವಸ್ಥಾನಗಳು ಹೀಗೆ ಆರ್ಥಿಕವಾಗಿ ಸಬಲವಾದಂತೆ ಅವುಗಳ ಪರಿಚಾರಕರ ಸಂಖ್ಯೆಯೂ ಬರಬರುತ್ತಾ ಹೆಚ್ಚಾಗುತ್ತಾ ಸಾಗಿತು.

ದೇವಸ್ಥಾನದಲ್ಲಿ ಕೆಲಸ ಮಾಡುವ ವೃತ್ತಿಯನ್ನು ಮೇಲೆ ಅಧ್ಯಯನದ ಅನುಕೂಲಕ್ಕಾಗಿ ವಿವಿಧ ರೀತಿಯಲ್ಲಿ ವಿಭಾಗಿಸಲಾಗುತ್ತದೆ. ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿರುವ ಪರಿಚಾರಕರನ್ನು ಡಾ.ದಯಾಮಾಳನ್ ಅವರು

೧. ಆಧ್ಯಾತ್ಮಿಕ ಸೇವೆಯಲ್ಲಿರುವವರು

೨. ಆಡಳಿತದಲ್ಲಿ ಭಾಗಿಯಾಗಿದ್ದವರು

೩. ಇನ್ನಿತರ ಸೇವೆಯ ಮಾಡುವವರು

ಎಂದು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ.[೭೩] ಇದನ್ನೆ ಆಧಾರವಾಗಿಟ್ಟುಕೊಂಡು ದೇವಾಲಯದ ಪರಿಚಾರಕ ವರ್ಗವನ್ನು ಡಾ.ಜೆ.ಎಂ.ನಾಗಯ್ಯ ಅವರು

೧. ಗುರುವರ್ಗದ ಪರಿಚಾರಕರು

೨. ಅಂಗಭೋಗದ ಪರಿಚಾರಕರು

೩. ರಂಗಭೋಗದ ಪರಿಚಾರಕರು

೪. ಸೇವಾ ವರ್ಗದ ಪರಿಚಾರಕರು ಎಂದು ವರ್ಗೀಕರಿಸಿದ್ದಾರೆ.

ಡಾ.ಜೆ.ಎಂ.ನಾಗಯ್ಯನವರ ವರ್ಗೀಕರಣವು ಸೂಕ್ತವಾದ್ದರಿಂದ ಅದರಲ್ಲಿ ಸ್ವಲ್ಪ ಬದಲಿಸಿ ಪರಿಚಾರಕರನ್ನು ಹೀಗೆ ವರ್ಗೀಕರಿಸ ಬೇಕಿದೆ.

೧. ಮುಖ್ಯ ಪರಿಚಾರಕರು

೨. ಗುರುವರ್ಗದ ಪರಿಚಾರಕರು

೩. ಅಂಗಭೋಗದ ಪರಿಚಾರಕರು

೪. ರಂಗ ಭೋಗದ ಪರಿಚಾರಕರು

೫. ಸೇವ ವರ್ಗದ ಪರಿಚಾರಕರು

### ೧. ಮುಖ್ಯ ಪರಿಚಾರಕರು

ದೇವಸ್ಥಾನದ ಆಡಳಿತದ ಮುಖ್ಯಹೊಣೆ ಹೊತ್ತವರೇ ಮುಖ್ಯ ಪರಿಚಾರಕರು. ಇವರನ್ನು ಸ್ಥಾನಪ, ಸ್ಥಾನಾಚಾರ್ಯ ಎಂದು ಶಾಸನಗಳು ಉಲ್ಲೇಖಿಸಿವೆ. ದೇವಸ್ಥಾನದ ಎಲ್ಲಾ ಆಗುಹೋಗುಗಳು ಸ್ಥಾನಿಕರ ಮೇಲೆಯೇ ಅವಲಂಬಿಸಿರುತ್ತಿದ್ದವು. ದೇವಸ್ಥಾನಕ್ಕೆ ಸೇರಿದ್ದ ಭೂಮಿಯನ್ನು ನೋಡಿಕೊಳ್ಳುವುದು ದೇವಸ್ಥಾನದ ಪರವಾಗಿ ಧನರೂಪದ ಭೂಮಿಯನ್ನು ಸ್ವೀಕರಿಸುವುದು. ಕ್ರಿ.ಶ.೧೪೮೭ರಲ್ಲಿ ಬಸರೂರಿನ ಪಡುವಣ ಕೇರಿಯ ಸ್ಥಾನಪತಿ ರುದ್ರಾಕ್ಷಿ ಒಡೆಯನಿಗೆ ಮಠವನ್ನು ಕಟ್ಟಿಸಿ ಕೆಲವು ಭೂಮಿಯನ್ನು ದಾನವಾಗಿ ನೀಡಿದ್ದನ್ನು ಶಾಸನವು ಉಲ್ಲೇಖಿಸಿದೆ.[೭೪] ಭೂಮಿಯನ್ನು ಕೊಂಡುಕೊಂಡು ದೇವಸ್ಥಾನದ ಆಸ್ತಿಯನ್ನು ಹೆಚ್ಚಿಸುವುದು, ಉತ್ಸವಗಳಿಗೆ ಹಣಬೇಕಾದಾಗ ಭೂಮಿಯನ್ನು ಮಾರುವುದು, ಹೊಲವನ್ನು ಆಧಾರವಾಗಿ ಇಟ್ಟುಕೊಂಡು ದೇವಸ್ಥಾನದ ಹಣವನ್ನು ಬಡ್ಡಿಗೆ ಸಾಲವಾಗಿ ಕೊಡುವುದು, ಹೊಲವನ್ನು ಅಡವಿಟ್ಟವನು ಸಾಲವನ್ನು ಮರುಪಾವತಿಸದಿದ್ದಾಗ ಅವನ ಹೊಲವನ್ನು ವಶಪಡಿಸಿಕೊಳ್ಳುವುದು, ದೇವಸ್ಥಾನಕ್ಕೆ ದಾನವಾಗಿ ಬಂದ ಭೂಮಿಯನ್ನು ರೈತರಿಗೆ ಗೇಣಿಯಾಗಿ ಕೊಡುವುದು ದೇವಸ್ಥಾನದಲ್ಲಿ ಸಂಗ್ರಹವಾದ ಸಂಪತ್ತಿನ ಮೇಲ್ವಿಚಾರಣೆ ಮಾಡುವುದು, ದೇವಸ್ಥಾನಗಳಲ್ಲಿ ನಡೆಯುವ ಅಪರಾಧಗಳನ್ನು ವಿಚಾರಣೆ ಮಾಡುವುದು. ಇಂತಹ ಅನೇಕ ಕರ್ತವ್ಯಗಳನ್ನು ಸ್ಥಾನಿಕನು ಕೈಗೊಳ್ಳುತ್ತಿದ್ದನು.[೭೫] ಆದ್ದರಿಂದ ಸ್ಥಾನಿಕನು ದೇವಸ್ಥಾನದ ಅವಿಭಾಜ್ಯ ಅಂಗವಾಗಿದ್ದು ಆತನು ದೇವಸ್ಥಾನದ ಅಭಿವೃದ್ಧಿಗೆ ಹಗಲಿರುಳು ಶ್ರಮಿಸುತ್ತಿದ್ದನು.

ದೇವಸ್ಥಾನದಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ರಮದಲ್ಲೂ ಈತನು ಉಪಸ್ಥಿತನಿರುತ್ತಿದ್ದನು. ದೇವಾಲಯಕ್ಕೆ ಬಂದ ಸಂಪತ್ತನ್ನು ಮತ್ತು ಭೂಮಿಯನ್ನು ದಾನವಾಗಿ ಪಡೆಯುವುದು ಈತನ ಮುಖ್ಯ ಕರ್ತವ್ಯವಾಗಿತ್ತು. ದೇವಸ್ಥಾನದಲ್ಲಿ ಜರುಗುವ ಉತ್ಸವಗಳು ನಿಯಮಿತ ಕಾಲದಲ್ಲಿ ನಡೆಯುವಂತೆ ನೋಡಿಕೊಳ್ಳುವ ಜವಾಬ್ದಾರಿಯ ಸ್ಥಾನಾಚಾರ್ಯನ ಮೇಲಿರುತ್ತಿತ್ತು. ವಿಜಯನಗರದ ಮಧ್ಯಕಾಲಕ್ಕೆ ಆಗಲೇ ರಾಜನೇ ಸ್ಥಾನಾಚಾರ್ಯರನ್ನು ನೇಮಕ ಮಾಡುವ ಪದ್ಧತಿ ಜಾರಿಗೆ ಬಂದಿತ್ತು.

### ೨. ಗುರುವರ್ಗದ ಪರಿಚಾರಕರು

ವಿಜಯನಗರದ ಕಾಲದಲ್ಲಿ ದೇವಾಲಯವು ಸಾಂಸ್ಕೃತಿಕ ಕೇಂದ್ರವಾಗಿತ್ತು. ಇದು ಅಂದಿನ ಕಾಲದ ಸಾಮಾಜಿಕ ಜೀವನದಲ್ಲಿ ವಿಶಿಷ್ಟವಾದ ಗೌರವ ಆದರಗಳಿಗೆ ಪಾತ್ರವಾಗಿತ್ತು. ಕೆಲವೊಂದು ದೇವಾಲಯಗಳು ವಿದ್ಯಾಶಾಲೆಗಳಾಗಿ ಪ್ರೌಢಶಿಕ್ಷಣದ ಕೇಂದ್ರಗಳಾಗಿದ್ದವು. ಈ ವಿದ್ಯಾಕೇಂದ್ರಗಳಿಗೆ, ಉಪಾಧ್ಯಾಯರು ನೇಮಕಗೊಳ್ಳುತ್ತಿದ್ದರು. ಉಪಾಧ್ಯಾಯ ಈ ವಿದ್ಯಾರ್ಥಿಗಳಿಗೆ ಪಾಠವನ್ನು ಬೋಧಿಸುತ್ತಿದ್ದವು.

**ಉಪಾಧ್ಯಾಯರು :** ದೇವಾಲಯಕ್ಕೆ ಸಂಬಂಧಿಸಿದ ಶಾಲೆಯಲ್ಲಿ ಪಾಠ ಹೇಳುವ ಕೆಲಸಕ್ಕೆ ಉಪಾಧ್ಯಾಯರು ನೇಮಕಗೊಳ್ಳುತ್ತಿದ್ದರು. ಪ್ರಾಚೀನ ಶಾಸನಗಳು ಉಪಾಧ್ಯಾಯರನ್ನು "ಒಝ" ಉಪಾಧ್ಯಾಯ 'ಭಟ್ಟೋಪಧ್ಯಾಯ' ಎಂಬ ಹೆಸರುಗಳಿಂದ ಕರೆಯಲಾಗಿದೆ.[೭೬] ಒಂದೊಂದು ವಿಷಯಗಳಲ್ಲಿ ಪಂಡಿತರಾದವರನ್ನು ಶಿಕ್ಷಕರಾಗಿ ನೇಮಿಸಿಕೊಳ್ಳಲಾಗುತ್ತಿತ್ತು. ಕೆಲವೊಂದು ಸಲ ಪುರಾಣಗಳಿಗೊಬ್ಬ ವ್ಯಾಖ್ಯಾನಕ್ಕೆ ಇನ್ನೊಬ್ಬ ಶಿಕ್ಷಕರು ನೇಮಕಗೊಳ್ಳುತ್ತಿದ್ದರು. ಬಾಗಳಿಯ ಶಾಸನವು ಇದನ್ನು ಸ್ಪಷ್ಟಪಡಿಸುತ್ತದೆ.[೭೭] ಹೀಗೆ ಬೇರೆ ಬೇರೆ ವಿಷಯಗಳಿಗೆ ಒಬ್ಬೊಬ್ಬ ಉಪಾಧ್ಯಯರನ್ನು ನೇಮಿಸಿಕೊಳ್ಳುತ್ತಿದ್ದರು. ಪುರಾಣ, ಋಗ್ವೇದ, ಪ್ರಭಾಕರ ವ್ಯಾಖ್ಯಾನ, ನ್ಯಾಸ ವ್ಯಾಖ್ಯಾನ, ಯಜುರ್ವೇದ ವಿಷಯಗಳನ್ನು ಮುಖ್ಯವಾಗಿ ಅಧ್ಯಯನ ಮಾಡಲಾಗುತ್ತಿತ್ತು. ಋಗ್ವೇದ, ಯರ್ಜುವೇದ, ಕೌಮಾರ, ಪಾಣಿನೀಯ ವ್ಯಾಕರಣ, ಷಡ್ದರ್ಶನಗಳು, ಲಾಕುಳ ಸಿದ್ಧಾಂತ ಪಾತಂಜಳ ಯೋಗ ಶಾಸ್ತ್ರ, ಪುರಾಣ, ಕಾವ್ಯ, ನಾಟಕ ಮುಂತಾದವುಗಳ ಅಧ್ಯಯನವು ಮಧ್ಯಯುಗೀನ ಕಾಲದಲ್ಲೂ ಮುಂದುವರೆದಿತ್ತು. ದೇಶದ ನಾನಾ ಭಾಗಗಳಿಂದ ಬಂದ ಸನ್ಯಾಸಿಗಳಿಗೆ, ಶಿಕ್ಷಣಾರ್ಥಿಗಳಿಗೆ ದೇವಾಲಯಗಳು ಶಿಕ್ಷಣವನ್ನು ಹೇಳಿಕೊಡಲಾಗುತ್ತಿದ್ದವು. ಗುಲ್ಬರ್ಗ ಜಿಲ್ಲೆಯ ಹಂದರ್ಕಿ ಶಾಸನವು ಹೇಳುವಂತೆ "ಕನ್ನಡ ಓದುವ ವಿದ್ಯಾರ್ಥಿ ಮಣಿಗಳಿಗಂ ವೋದಿಸುವ ಉಪಾಧ್ಯಾಯರ್ಗ್ಗೆ" ದಾನ ಬಿಟ್ಟುದ್ದನ್ನು ತಿಳಿಸುತ್ತದೆ.[೭೮] ವಿಜಯನಗರ ಕಾಲದಲ್ಲಿ ಪ್ರೌಢವಾದ ಸಾಹಿತ್ಯ ಬೆಳವಣಿಗೆ ಬಂದಿತು. ಈ ಸಾಹಿತ್ಯವನ್ನು ರಚಿಸಲು ಬೇಕಾಗುವ ವ್ಯಾಕರಣವನ್ನು ಅಂದಿನ ಕವಿಗಳು ಕಲಿತಿರಲೇ ಬೇಕು. ಹಾಗಾಗಿ ಕನ್ನಡ ವ್ಯಾಕರಣದ ಭೋದನೆ ವಿಜಯನಗರ ಕಾಲದಲ್ಲೂ ಮುಂದುವರಿಯಿತು ಎಂದು ಹೇಳಬಹುದು. ವಿಜಯನಗರ ಕಾಲದಲ್ಲಿ ಮಂಡ್ಯ ಜಿಲ್ಲೆಯ ಮದ್ದೂರಿನಲ್ಲಿ ಅಲ್ಲಲ್ಲಿನ ಮಹಾಜನರು ದೇವಾಲಯಕ್ಕೆ ಹೊಂದಿಕೊಂಡಿರುವ ಛತ್ರಕ್ಕೆ ಮತ್ತು ವೇದಗಳನ್ನು ಪಾರಾಯಣ ಮಾಡುವುದಕ್ಕೆ ಭೂಮಿಯನ್ನು ದಾನ ಮಾಡಿದನ್ನು ಶಾಸನವು ಉಲ್ಲೇಖಿಸಿದೆ. ಮಧ್ಯಯುಗೀನ ಕಾಲದಲ್ಲಿ ವೇದಗಳನ್ನು ಅಧ್ಯಯನ ಮಾಡುವುದು ಪಾರಾಯಣ ಮಾಡುವುದಕ್ಕೆ ವಿಶೇಷವಾದ ಪ್ರೋತ್ಸಾಹವನ್ನು ನೀಡಲಾಗುತ್ತಿತ್ತು ಎಂಬ ವಿಷಯವನ್ನು ಶಾಸನವು ತಿಳಿಸುತ್ತದೆ. ಕ್ರಿ.ಶ.೧೪೭೪ರಲ್ಲಿ ಗುಮ್ಮಳಾಪುರದ ವೀರಶೈವ ಶರಣರು ಬ್ರಾಹ್ಮಣ ಮತದ ವೆಂಕಟೇಶ ಉಪಾಧ್ಯಾಯರಿಗೆ ದಾನ ನೀಡಿದರು ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ವೀರಶೈವ ಧರ್ಮದ ವಿದ್ಯಾರ್ಥಿಗಳು ಸಹ ಬ್ರಾಹ್ಮಣ ವರ್ಗದ ಉಪಾಧ್ಯಯರಿಗೆ ದಾನ ನೀಡಿದನ್ನು ಶಾಸನವು ಉಲ್ಲೇಖಿಸುವುದರಿಂದ ಎರಡೂ ಧರ್ಮೀಯ ಬಾಂಧವ್ಯವನ್ನು ಈ ಶಾಸನವು ತಿಳಿಸುತ್ತದೆ.[೭೯]

## ಪುರಾಣಿಕರು

ದೇವಸ್ಥಾನಗಳು ಧಾರ್ಮಿಕ ಬೋಧನೆಯ ಕೇಂದ್ರಗಳು ಆಗಿದ್ದವು. ಪುರಾಣ, ಪ್ರವಚನಗಳು ಧಾರ್ಮಿಕ ಬೋಧನೆಯ ಪ್ರಮುಖ ಆಕರ್ಷಣೆಗಳು ಹಾಗಾಗಿ ದೇವಾಲಯಗಳಲ್ಲಿ ಪುರಾಣಗಳನ್ನು ಹೇಳುವ

ಪುರಾಣಿಕರನ್ನು ನೇಮಿಸಿಕೊಳ್ಳುತ್ತಿದ್ದರು. ಇವರು ಈ ಕಾರ್ಯಕ್ಕಾಗಿ ದೇವಸ್ಥಾನವು ನೀಡುವ ಸಂಬಳವನ್ನು ಉಂಬಳಿಯ ರೂಪದಲ್ಲಿ ಕೊಡಲಾಗುತ್ತಿತ್ತು. ಶಾಸನಗಳು ಈ ದತ್ತಿಯನ್ನು ''ಪುರಾಣ ವೃತ್ತಿಗಾಗಿ'' ಎಂದು ಕರೆದಿದೆ.[೮೦] ಬಾಗಳಿಯ ಕಲಿದೇವಸ್ವಾಮಿಗೆ ತೋಟ, ಹೊಲಬಿಟ್ಟು, 'ಸಿಟೆಲಗೇರಿಯ' ತನ್ನ ಮನೆಯಲ್ಲಿ ತನ್ನಿಂದ ಪರೋಕ್ಷದಲ್ಲಿ ದೇವರ ಮನೆಯಲ್ಲಿ ಪುರಾಣ ಹೇಳುವ ಉಪಾಧ್ಯಾಯರಿಗೆ ವಾಸಮಾಡಲು ಬಿಟ್ಟು ಕೊಡುತ್ತಾರೆ.[೮೧] ಅಂದರೆ ಅಂದಿನ ಸಮಾಜದಲ್ಲಿ ಪುರಾಣಿಕರಿಗೆ ಕೊಡುತ್ತಿದ್ದ ಗೌರವವನ್ನು ಶಾಸನವು ಹೇಳುತ್ತದೆ. ಇದೇ ಬಾಗಳಿಯ ಇನ್ನೊಂದು ಶಾಸನದಲ್ಲಿ ಪುರಾಣದ ಈಶ್ವರ ಭಟ್ಟೋಪಾಧ್ಯಯರಿಗೆ ತೋಟ, ಗದ್ದೆಗಳನ್ನು ದಾನಬಿಟ್ಟದನ್ನು ಶಾಸನವು ಉಲ್ಲೇಖಿಸಿದೆ.[೮೨] ಅಂದರೆ ಆ ಕಾಲದ ಪ್ರಸಿದ್ಧ ಅಗ್ರಹಾರವಾದ ಬಾಗಳಿಯಲ್ಲಿ ಕಲ್ಲೇಶ್ವರ ದೇವಸ್ಥಾನವು ಒಂದು ಪ್ರಸಿದ್ಧ ಸಾಂಸ್ಕೃತಿಕ ಕೇಂದ್ರವಾಗಿತ್ತು. ಇಲ್ಲಿ ಪುರಾಣಿಕನ ಹುದ್ದೆಯ ಒಂದು ಖಾಯಂ ಹುದ್ದೆಯಾಗಿದ್ದು, ಆತನ ಜೀವನೋಪಾಯಕ್ಕಾಗಿ ಭೂಮಿಯನ್ನು ದಾನ ನೀಡಿದ್ದನ್ನು ಶಾಸನಗಳು ಉಲ್ಲೇಖಿಸುತ್ತದೆ. ಇದೇ ರೀತಿಯಲ್ಲಿ ಹಂಪೆಯ ಶಾಸನದಲ್ಲಿ ಇಬ್ಬರು ಪುರಾಣಿಕರಿಗೆ ದತ್ತಿ ಬಿಟ್ಟದರೆಂದು ತಿಳಿದುಬರುತ್ತದೆ.[೮೩] ಹಾಗಾಗಿ ವಿಜಯನಗರ ಕಾಲದಲ್ಲಿ ಕೂಡ ಪುರಾಣಿಕರ ವೃತ್ತಿಯು ಮುಂದುವರೆದಂತೆ ಕಂಡುಬರುತ್ತದೆ. ಇವರ ವೃತ್ತಿಯು ವಂಶಪಾರಂಪರ್ಯವಾಗಿ ಮುಂದುವರೆಯುತ್ತಿದ್ದವು. ಇವರಿಗೆ ಸಂಬಳವನ್ನು ಹಣದ ರೂಪದಲ್ಲಿ ಕೊಡಲಾಗುತ್ತಿರಲಿಲ್ಲ. ಭೂಮಿಯನ್ನು ದಾನ ಕೊಡುವುದರ ಮುಖೇನ ಇವರಿಗೆ ಜೀವನ ನಿರ್ವಹಣೆಗೆ ಅವಕಾಶ ಕಲ್ಪಿಸಲಾಗುತ್ತಿತ್ತು. ಪುರಾಣಗಳನ್ನು ಪಾರಾಯಣ ಮಾಡುವುದೇ ಈತನ ಮುಖ್ಯ ಕರ್ತವ್ಯವಾಗಿರುತ್ತಿತ್ತು.

**ಜ್ಯೋತಿಷ್ಯ :** ದೇವಸ್ಥಾನದ ಪೂಜಾದಿ ಉತ್ಸವಗಳು ಕಾಲಕಾಲಕ್ಕೆ ನಡೆಯಲು ಆ ಕಾಲವನ್ನು ನಿರ್ಧರಿಸಲು ಜ್ಯೋತಿಷ್ಯಶಾಸ್ತ್ರವನ್ನು ಬಲ್ಲವರು ದೇವಸ್ಥಾನದ ಜೋತಿಷ್ಯಶಾಸ್ತ್ರ ಪರಿಣಿತರು ನೇಮಕಗೊಂಡಿದ್ದರು. ಇವರು ಪಂಚಾಂಗವನ್ನು ಹಿಡಿದು ದೇವರ ಉತ್ಸವ, ಹಬ್ಬ, ಕಾರ್ಯಗಳನ್ನು ಆಚರಿಸುವ ವಾರ, ನಕ್ಷತ್ರಗಳನ್ನು ಅಭ್ಯಾಸ ಮಾಡಿ ಶುಭ ಮುಹೂರ್ತಗಳನ್ನು ನಿಶ್ಚಯಿಸಿ ಕೊಡುತ್ತಿದ್ದರು. ಸಾಮಾನ್ಯವಾಗಿ ಜ್ಯೋತಿಷಿಗಳು ಆಗಿರುತ್ತಿದ್ದರು. ಇವರ ಜೀವನ ನಿರ್ವಹಣೆಗಾಗಿ ಭೂಮಿಯನ್ನು ದತ್ತಿಯಾಗಿ ನೀಡುವ ಪದ್ಧತಿ ಜಾರಿಯಲ್ಲಿತ್ತು.

### ೩. ಅಂಗಭೋಗದ ಪರಿಚಾರಕರು

ಪ್ರಾಚೀನ ಕಾಲದಲ್ಲಿ ಆಚರಣೆಯಲ್ಲಿದ್ದಂತೆ ವಿಜಯನಗರ ಕಾಲದಲ್ಲೂ ದೇವರ ಅಂಗಭೋದ ಉತ್ಸವಗಳು ಜರುಗುತ್ತಿದ್ದವು. ಅಂಗಭೋದ ಅಲಂಕಾರವು ಪ್ರಾಚೀನ ಕಾಲಕ್ಕಿಂತಲೂ ವಿಜಯನಗರ ಕಾಲದಲ್ಲಿ ಹೆಚ್ಚು ವಿಜೃಂಬಣೆಯಿಂದ ಜರುಗುತ್ತಿದ್ದವು. ದೇವರ ಗರ್ಭಗುಡಿಯಲ್ಲಿ ಮೂರ್ತಿಗೆ ನಡೆಯುವ ಅಲಂಕಾರವನ್ನು ಅಂಗಭೋಗವೆಂದು ಕರೆಯಲಾಗಿದೆ. ದೇವರ ಮೂರ್ತಿಗೆ ಸಲ್ಲುವ, ಪೂಜೆ,

ದೀಪ, ಧೂಪ, ಶ್ರೀಗಂಧ, ಅಭಿಷೇಕ, ಅಲಂಕಾರ, ಮಂತ್ರೋಚ್ಚಾರಣೆ ಮೊದಲಾದ ಸೇವೆಗಳನ್ನು ಅಂಗಭೋಗದ ಸೇವೆಗಳು ಎನ್ನುತ್ತೇವೆ. ಈ ಕಾರ್ಯಗಳನ್ನು ನಡೆಸಲು ಹಲವಾರು ಪರಿಚಾರಕರು ಬೇಕಾಗುತ್ತಿತ್ತು. ಈ ಪರಿಚಾರಕರನ್ನು ದೇವಸ್ಥಾನದ ಆಡಳಿತವು ನೇಮಕ ಮಾಡಿಕೊಳ್ಳುತ್ತಿತ್ತು.

**ಪೂಜಾರಿಗಳು**

ದೇವಸ್ಥಾನಕ್ಕೆ ಅದರಲ್ಲಿರುವ ಪೂಜಾಮೂರ್ತಿಯೇ ಕೇಂದ್ರ ಬಿಂದು. ಈ ಪೂಜಾ ಮೂರ್ತಿಗೆ ತ್ರಿಕಾಲ ಪೂಜೆಗಳು ನಡೆಯಬೇಕು. ಈ ಪೂಜೆಯನ್ನು ಎಲ್ಲರೂ ಮಾಡುವಂತಿರಲಿಲ್ಲ. ಆಗಮ ಶಾಸ್ತ್ರಗಳನ್ನು ಬಲ್ಲಂತಹ ಒಬ್ಬ ಬ್ರಾಹ್ಮಣನು ದೇವಸ್ಥಾನದ ಪೂಜಾರಿಯಾಗಿ ನೇಮಕಗೊಳ್ಳುತ್ತಿದ್ದನು. ಈತನು ದೇವರಿಗೆ ತ್ರಿಕಾಲ ಪೂಜೆ ಪುನಸ್ಕಾರಗಳನ್ನು ನಡೆಸುತ್ತಿದ್ದನು. ದೇವರಿಗೆ ಭಕ್ತರಿಗೂ ಮಧ್ಯವರ್ತಿಯಾಗಿ ಕೆಲಸ ನಿರ್ವಹಿಸಲು ಪೂಜಾರಿ ಮುಖ್ಯನಾಗಿದ್ದನು. ಅಲ್ಲದೆ ಅಂಗ, ರಂಗ, ಭೋಗ ಮತ್ತು ಇತರ ಪರಿಚಾರಕರಲ್ಲಿ ಉನ್ನತಸ್ಥಾನ ಪಡೆದಿದ್ದಾನೆ. ಸಾಮಾನ್ಯವಾಗಿ ಶೈವ ದೇವಸ್ಥಾನಗಳಲ್ಲಿ ಶೈವ ಬ್ರಾಹ್ಮಣರು ಮತ್ತು ವೀರಶೈವ ದೇವಾಲಯಗಳಲ್ಲಿ ಜಂಗಮರು ಪೂಜಾರಿಗಳಾಗಿ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಶಿವ ದೇವಾಲಯಗಳಲ್ಲಿ ಪೂಜೆಗಳನ್ನು ನೆರವೇರಿಸುವ ಪೂಜಾರಿಗಳನ್ನು ಶಿವಬ್ರಾಹ್ಮಣರೆಂದು ಶಾಸನಗಳು ಕರೆದಿವೆ. ಇವರು ಶಿವಾಗಮ ಬಲ್ಲಂತ ಪಂಡಿತರಾಗಿದ್ದರು. ಕಾಳಾಮುಖ ಮತ್ತು ಪಾಶುಪತರ ದೇವಸ್ಥಾನಗಳಲ್ಲಿ ದೇವಸ್ಥಾನದ ಸ್ಥಾನಪತಿಯೇ ಪೂಜಾರಿಗಳಿದ್ದಂತಿದೆ. ದಾವಣಗೇರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಹಿರೇಮೇಗಳಗೇರಿಯಲ್ಲಿಯ ಸ್ವಯಂಭುದೇವರಿಗೆ ಸತತಂ ಪತ್ರೆ ಪುಷ್ಪಗಳಿಂ ಪೂಜೆಗೊಳ್ಳುವ ಪೂಜಾರಿಗಳಲ್ಲಿ ಸ್ಥಾನಪತಿ ಚಂದ್ರಭೂಷಣ ಪಂಡಿತರ ಕಾಲುತೊಳೆದು, ಗದ್ದೆ ದಾನ ಬಿಟ್ಟುದ್ದು ತಿಳಿದುಬರುತ್ತದೆ.[೮೪] ಹಾಗಾಗಿ ಆ ಕಾಲದ ಕಾಳಾಮುಖ, ಪಾಶುಪತ ದೇವಸ್ಥಾನಗಳು ಸ್ಥಾನಪತಿಗಳೇ ಮುಖ್ಯ ಪೂಜಾರಿಗಳಾಗಿ ಮುಂದುವರಿದನ್ನು ಉಲ್ಲೇಖಿಸಿವೆ. ಅದೇ ರೀತಿಯಲ್ಲಿ ಬಸರೂರಿನ ಪಡುವಣ ಕೇರಿಯ ಜನತೆಯು ರುದ್ರಾಕ್ಷಿಯ ಒಡೆಯನಿಗೆ ಭೂಮಿಯನ್ನ ದಾನವಾಗಿ ನೀಡಿದನ್ನು ನೋಡಬಹುದು.[೮೫]

ಬಳ್ಳಾರಿ ಜಿಲ್ಲಾ ಹೊಸಪೇಟೆ ತಾಲೂಕು ನಾಗೇನಹಳ್ಳಿಯ ಕ್ರಿ.ಶ.೧೫೧೮ರ ಶಾಸನವು ನಿರೂಪಿಸುವಂತೆ ಕೃಷ್ಣದೇವರಾಯನ ಪುರೋಹಿತರಾದ ರಂಗನಾಥ ದೀಕ್ಷಿತರು ಜಾಮದಗ್ನ್ಯ ವತ್ಸಗೋತ್ರದವರಾಗಿದ್ದು ಇವರು ಗ್ರಾಮದ ಮಾನ್ಯವನ್ನು ಪಡೆದುಕೊಂಡು ರಾಯರ ತಾಯಿ ನಾಗಲಾದೇವಿಯ ಹೆಸರಿನಲ್ಲಿ ಅಗ್ರಹಾರವನ್ನು ಸ್ಥಾಪಿಸಿದರು. ಇಲ್ಲಿ ಪುರೋಹಿತರಾದ ರಂಗನಾಥ ದೀಕ್ಷಿತರಿಗೆ ಗ್ರಾಮವನ್ನು ಮಾನ್ಯ ಮಾಡಿದನ್ನು ಶಾಸನವು ಉಲ್ಲೇಖಿಸಿದೆ. ಈತನು ನಾಗೇನಹಳ್ಳಿಯ ರಂಗನಾಥ ದೇವಾಲಯದ ಪುರೋಹಿತನಾಗಿದ್ದನೆಂಬುದರ ಸುಳಿವನ್ನು ಇಲ್ಲಿ ನೀಡಲಾಗಿದೆ.[೮೬] ಕ್ರಿ.ಶ.೧೪೨೯ರಲ್ಲಿ ಉಜ್ಜನಿ ಗ್ರಾಮದ ಜನತೆಯ ಪೂಜಾರಿಗಳಿಗಾಗಿ ತೆರಿಗೆ ರಹಿತ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೮೭] ಜನತೆಯು ಪೂಜಾರಿಗಳ ಮೇಲೆ ಇಟ್ಟಿದ್ದ ನಂಬಿಕೆಯನ್ನು ಇದು ತಿಳಿಸುತ್ತದೆ.

**ಅಭಿಷೇಕದ ಪರಿಚಾರಕರು**

ದೇವರಿಗೆ ನಿತ್ಯ ನಡೆಯುವ ಅಭಿಷೇಕ ಕಾಯಕದಲ್ಲಿ ಅಭಿಷೇಕದ ಪರಿಚಾರಕರು ಭಾಗಿಗಳಾಗಿರುತ್ತಿದ್ದರು. ದೇವರಿಗೆ ನಡೆಸುತ್ತಿದ್ದ ತ್ರಿಕಾಲ ಪೂಜೆಗೆ ಮುಂಚೆ ಅಭಿಷೇಕವು ನಡೆಯುತ್ತಿತ್ತು. ಅಭಿಷೇಕ ನಡೆಯುವ ಕಾಲದಲ್ಲಿ ಪೂಜಾರಿಗಳಿಗೆ ಸಹಾಯಕರಾಗಿ ಈ ಅಭಿಷೇಕದ ಪರಿಚಾರಕರು ಕೆಲಸ ಮಾಡುತ್ತಿರಬೇಕು. ಇವರು ಕೂಡ ವೇದ ಆಗಮಗಳನ್ನು ತಿಳಿದಂತವರಿರಬೇಕಾಗುತ್ತಿತ್ತು. ಹಂಪೆಯ ಒಂದು ಶಾಸನವು ಅಭಿಷೇಕದ ಜನರಿಗೆ ದಾನ ಬಿಟ್ಟುದ್ದನ್ನು ಉಲ್ಲೇಖಿಸಿದೆ.[೮೮]

**ಮಂತ್ರೋಚ್ಚಾರಕರು**

ದೇವರಿಗೆ ನಡೆಯುವ ಪೂಜೆಯ ಸಮಯದಲ್ಲಿ ದೇವರಿಗೆ ಅಭಿಷೇಕವಾಗುತ್ತಿತ್ತು. ಅಭಿಷೇಕವು ನಡೆಯುವ ಕಾಲದಲ್ಲಿ ದೇವರಿಗೆ ಮಂತ್ರೋಚ್ಚಾರಣೆ ಮಾಡುವ ಸಂಪ್ರದಾಯವಿತ್ತು. ಈ ಮಂತ್ರಗಳನ್ನು ಹೇಳುವುದಕ್ಕಾಗಿಯೇ ಕೆಲವಾರು ಬ್ರಾಹ್ಮಣರನ್ನು ನೇಮಕ ಮಾಡಿಕೊಂಡಿರುತ್ತಿದ್ದರು. ಸಾಮಾನ್ಯವಾಗಿ ಈ ಕೆಲಸವನ್ನು ಮಾಡುವವರು ಬ್ರಾಹ್ಮಣರೇ ಆಗಿರುತ್ತಿದ್ದರು. ಪೂಜೆಗಳು ವೈದಿಕ ಸಂಪ್ರದಾಯದ ಪ್ರಕಾರ ನಡೆಯುತ್ತಿದ್ದರಿಂದ ವೇದ ಬಲ್ಲಂತವರು ಆಗಮ ಕಲಿತವರು ಮಂತ್ರೋಚ್ಚಾರಕರಾಗಿ ನೇಮಕಗೊಳ್ಳುತ್ತಿದ್ದರು. ಹಂಪೆಯ ಶಾಸನವು ಹೇಳುವಂತೆ ತಿರುಮಲ ರಾಜವೊಡೆಯರು ದೇವರಿಗೆ ಮಂತ್ರವನ್ನು ಉಚ್ಚರಿಸಲು ಇಬ್ಬರು ಬ್ರಾಹ್ಮಣರನ್ನು ನೇಮಕ ಮಾಡಿದನ್ನು ತಿಳಿಸುತ್ತದೆ. ಈ ಇಬ್ಬರಿಗೆ ರಾಜನು ಭೂಮಿಯನ್ನು ದಾನವಾಗಿ ನೀಡಿದ್ದನು.[೮೯]

**ಇತಿಹಾಸದ ಜನರು**

ದೇವಸ್ಥಾನದಲ್ಲಿ ಇತಿಹಾಸವನ್ನು ಹೇಳಲು ಪಂಡಿತರಾದ ಬ್ರಾಹ್ಮಣರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಹಂಪಿಯ ಒಂದು ಶಾಸನವು ಇತಿಹಾಸ ಹೇಳಲು ಬ್ರಾಹ್ಮಣನನ್ನು ನೇಮಕ ಮಾಡಿಕೊಂಡಿರುವುದನ್ನು ತಿಳಿಸುತ್ತದೆ. ಈ ಇತಿಹಾಸ ಹೇಳುವವನಿಗೆ ಅಚ್ಯುತದೇವರಾಯನು ದಾನಬಿಟ್ಟ ವಿಷಯವನ್ನು ಹೇಳುತ್ತದೆ.[೯೦]

**ಹೂಗಾರರು :** ದೇವಸ್ಥಾನದ ದೇವರ ಪೂಜೆಗಾಗಿ ಹೂವನ್ನು ತರುವ ಕೆಲಸವನ್ನು ನಿಭಾಯಿಸಲು ಹೂಗಾರರು ನೇಮಕಗೊಳ್ಳುತ್ತಿದ್ದರು. ದೇವರ ಪೂಜೆಗೆ ಹೂವನ್ನು ಸರಬರಾಜು ಮಾಡುವುದೇ ಇವರ ಕೆಲಸ. ಕ್ರಿ.ಶ.೧೫೬೮ರಲ್ಲಿ ತಗಡೂರಿನ ಅರಸು ನಾಡಿನ ಗೌಡ ಪ್ರಜೆಗಳು ದೇವಸ್ಥಾನದ ಪೂಜಾರಿಗೆ ದತ್ತಿ ನೀಡಿದ್ದಲ್ಲದೆ ಆ ಮೂಲ ಸ್ಥಾನೇಶ್ವರ ದೇವರ ನಂದಾದೀಪಕ್ಕೆ ಹೂವು ಸರಬರಾಜು ಮಾಡುವವನಿಗೆ ಕಾಲಕಾಲಕ್ಕೆ ಕೊಡುತ್ತಿದ್ದ ೧೨೦ ಪಗೋಡಗಳನ್ನು ಕೊಡುವುದರ ಬದಲು ಅವನಿಗೆ ಪ್ರತಿ ವರ್ಷವೂ ಆ ಪ್ರದೇಶದ ತೆರಿಗೆಯಲ್ಲಿ ೧೨೦ ಪಗೋಡಗಳನ್ನು ಕೊಡಬಹುದು ಎಂದು ತಿಳಿಸಲಾಗಿದೆ.

**ವೇದಕರು :** ದೇವಸ್ಥಾನವು ಧಾರ್ಮಿಕ ಕೇಂದ್ರವಾಗಿದ್ದರಿಂದ, ದೇವಸ್ಥಾನದ ಪೂಜೆಗಳಿಗಾಗಿ ವೈದಿಕರು ಇರುತ್ತಿದ್ದರು. ಅಲ್ಲದೆ ವಿಜಯನಗರ ಕಾಲದಲ್ಲಿ ದೇವಸ್ಥಾನವು ವಿದ್ಯಾಕೇಂದ್ರವಾಗಿದ್ದರಿಂದ ವೇದವನ್ನು ಪಾರಾಯಣ ಮಾಡುವುದಕ್ಕಾಗಿಯೇ ವೇದಿಕರು ನೇಮಕಗೊಳ್ಳುತ್ತಿದ್ದರು. ವಿಜಯನಗರ ಕಾಲದಲ್ಲಿ ಮದ್ದೂರಿನ ಮಹಾಜನರು ಛತ್ರಕ್ಕೆ ಮತ್ತು ವೇದಪಾರಾಯಣ ಮಾಡುವುದಕ್ಕೆ ಭೂಮಿಯನ್ನು ದಾನ ಮಾಡಿದ್ದನ್ನು ಶಾಸನ ತಿಳಿಸುತ್ತದೆ.[೬೧]

**ಹೋಮದ ಬ್ರಾಹ್ಮಣರು :** ದೇವಸ್ಥಾನದಲ್ಲಿ ನಡೆಯುವ ಪವಿತ್ರ ಕಾರ್ಯಗಳಲ್ಲಿ ಯಜ್ಞ, ಹೋಮ, ಹವನಗಳನ್ನು ಕೈಗೊಳ್ಳಲು, ದೇವಸ್ಥಾನದಲ್ಲಿ ಹೋಮದ ಬ್ರಾಹ್ಮಣರು ನೇಮಕಗೊಳ್ಳುತ್ತಿದ್ದರು. ಹೋಮವನ್ನು ಸಾಂಗೋಪಾಂಗವಾಗಿ ನೆರವೇರಿಸಲು ಇಬ್ಬರು ಬ್ರಾಹ್ಮಣರನ್ನು ಸೂಡಿಯ ನಾಗೇಶ್ವರ ದೇವಾಲಯದಲ್ಲಿ ನೇಮಿಸಿದ್ದು ತಿಳಿದುಬರುತ್ತದೆ.

**ನಂದಾ ದೀವಿಗೆ ಮಾಣಿಗಳು :** ದೇವಸ್ಥಾನದಲ್ಲಿ ಪವಿತ್ರವಾದ ದಿನಗಳಲ್ಲಿ ಉತ್ಸವಗಳು ನಡೆಯುವ ಕಾಲದಲ್ಲಿ ಮತ್ತು ಪ್ರತಿನಿತ್ಯ ದೇವರ ಸಮ್ಮುಖದಲ್ಲಿ ನಂದಾದೀಪ ಸದಾಕಾಲ ಉರಿಯುತ್ತಿರಬೇಕು. ನಂದಾದೀಪಕ್ಕೆ ಕಾಲಕಾಲಕ್ಕೆ ಎಣ್ಣೆಯನ್ನು ಹಾಕುತ್ತ ದೀಪ ಆರದಂತೆ ನೋಡಿಕೊಳ್ಳಲು ಪರಿಚಾರಕನ್ನು ನೇಮಿಸಲಾಗುತ್ತಿತ್ತು. ದೇವಸ್ಥಾನದಲ್ಲಿ ಈ ನಂದಾದೀವಿಗೆ ಆರದಂತೆ ನೋಡಿಕೊಳ್ಳಲು ದಾನದತ್ತಿಗಳನ್ನು ನೀಡಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ನಂದಾದೀಪದ ಪರಿಚಾರಕರು ಈ ಕೆಲಸ ಕೈಗೊಳ್ಳುತ್ತಿದ್ದರು.

**ಅಡಿಗೆಯವರು :** ದೇವರ ಪೂಜೆಯ ಸಮಯದಲ್ಲಿ ದೇವರಿಗಾಗಿ ನೈವೇದ್ಯ ಸಲ್ಲಬೇಕಾಗಿತ್ತು. ದೇವಾಲಯದ ಛತ್ರದಲ್ಲಿ ಅಡಿಗೆಯ ಮಾಡುವವರು ಬೇಕಾಗುತ್ತಿತ್ತು. ಈ ಎರೆಡೂ ಕಾರ್ಯಕ್ರಮಗಳಿಗೆ ದೇವಸ್ಥಾನವು ಅಡಿಗೆ ಮಾಡುವವರನ್ನು ನೇಮಿಸಿಕೊಳ್ಳಲಾಗುತ್ತಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕೋಟೇಶ್ವರದ ಶ್ರೀ ಕೋಟಿನಾಥ ದೇವರ ದರುಶನಕ್ಕೆ ಬಂದ ಭಂಡಾರದ ಗುರುರಾಜ ಒಡೆಯರು ಮಠದಲ್ಲಿ ಛತ್ರವನ್ನು ಪ್ರಾರಂಭಿಸುತ್ತಾರೆ. ಅಲ್ಲಿ ಹತ್ತು ಜನ ಬ್ರಾಹ್ಮಣರು ಊಟ ಮಾಡುವುದಕ್ಕೆ ವ್ಯವಸ್ಥೆ ಮಾಡುತ್ತಾರೆ. ಅಡಿಗೆಯನ್ನು ಮಾಡಲು ಒಬ್ಬ ಬ್ರಾಹ್ಮಣನು ಆ ಛತ್ರದಲ್ಲಿದ್ದುದ್ದನ್ನು ಕಾಣಬಹುದು.[೬೨] ಕ್ರಿ.ಶ.೧೩೬೫ರಲ್ಲಿ ಮಹಾಮಂಡಳೇಶ್ವರ ವೀರಬುಕ್ಕಣ್ಣ ಒಡೆಯರ ನಿರೂಪದ ಮೇರೆಗೆ ಮಲ್ಲೆಯ ದಂಡನಾಯಕರು ಬಾರಕೂರು ರಾಜ್ಯವನ್ನಾಳುವ ಅವಧಿಯಲ್ಲಿ ನಾಗಪ್ಪನವರ ಮಕ್ಕಳಾದ ಧರಣಿ ದೇವಂಗಳು ಕೋಪೇಶ ದೇವರಲ್ಲಿ ಐವ್ವರು ಬ್ರಾಹ್ಮಣರು ಅಡಿಗಿ ಮಾಡುವವನೊಬ್ಬನು ಒಟ್ಟು ಆರು ಜನ ಬ್ರಾಹ್ಮಣರಿಗೆ ಭೋಜನಕ್ಕೆ ನಾಲ್ಕು ನಿವೇಶನ, ನೂರಾ ಇಪ್ಪತ್ತು ನಾಲ್ಕು ಮುಡಿ ಬತ್ತದ ಗದ್ದೆ, ಹದಿನೆಂಟು ಹೊನ್ನುಗಳನ್ನು ದಾನವಾಗಿ ನೀಡುತ್ತಾನೆ.[೬೩] ಇದು ಅಡಿಗಿಯವನು ದೇವಸ್ಥಾನದ ಪೂಜಾದಿ ಉತ್ಸವಗಳಲ್ಲಿ ಮತ್ತು ಛತ್ರದಲ್ಲಿ ಇರಲೇ ಬೇಕಾದ ಅಗತ್ಯತೆಯನ್ನು ತೋರಿಸುತ್ತದೆ.

## ೪. ರಂಗಭೋಗದ ಪರಿಚಾರಕರು

ದೇವಸ್ಥಾನದಲ್ಲಿ ಗರ್ಭಗೃಹದಲ್ಲಿ ಮೂರ್ತಿಗೆ ನಡೆಯುವ ಅಲಂಕಾರವನ್ನು ಅಂಗಭೋಗವೆಂದು ಕರೆದರೆ, ಗರ್ಭಗುಡಿಯ ಹೊರಗೆ, ರಂಗಮಂಟಪದಲ್ಲಿ ಸಾರ್ವಜನಿಕರಿಗಾಗಿ ನಡೆಯುವ ಚಟುವಟಿಕೆಗಳನ್ನು ರಂಗಭೋಗವೆಂದು ಕರೆಯಲಾಗುತ್ತದೆ. ದೇವಾಲಯದ ರಂಗಮಂಟಪದಲ್ಲಿ ನಡೆಯುವ ನಾಟ್ಯ, ನೃತ್ಯ, ನಾಟಕ, ಸಂಗೀತ ಹಾಡುವಿಕೆ, ಸಮ್ಮೇಳ, ನಂದಿಕೋಲು ಕುಣಿವುದು ಮೊದಲಾದ ಭೋಗಗಳು ರಂಗಭೋಗಗಳೆನಿಸುತ್ತದೆ. ಈ ರಂಗಭೋಗವು ಪ್ರಾಚೀನ ಕಾಲದಲ್ಲಿ ಕಂಡುಬಂದರೂ ವಿಜಯನಗರ ಕಾಲದಲ್ಲಿ ಮತ್ತಷ್ಟು ಹೆಚ್ಚು ಪ್ರಚಲಿತಕ್ಕೆ ಬಂದಿತು. ರಂಗಭೋಗಕ್ಕಾಗಿ, ನವರಂಗದ ಪ್ರದೇಶವು ಚಿಕ್ಕದಾದಾಗ ರಂಗಭೋಗಕ್ಕಾಗಿ ಮತ್ತೊಂದು ಹೊಸದಾದ ಮಹಾರಂಗ ಮಂಟಪದ ರಚನೆ ಈ ಕಾಲದಲ್ಲಿ ಪ್ರಾರಂಭವಾಯಿತು. ಇದು ಸಾಮಾನ್ಯವಾಗಿ ೬೪ ಕಂಬಗಳಿಂದ ಕೂಡಿದ ಮಂಟಪವಾಗಿತ್ತು. ಇದರಲ್ಲಿ ಹೆಚ್ಚು ಅಲಂಕೃತವಾದ ಕಂಬಗಳನ್ನು ಬಳಸಿ ಇದನ್ನು ನಿರ್ಮಿಸಲಾಗುತ್ತಿತ್ತು. ಮಹಾರಂಗ ಮಂಟಪವು ನವರಂಗದ ಮುಂದಿನ ರಚನೆಯಾಗಿದೆ. ಇದು ಎತ್ತರವಾದ ವೇದಿಕೆಯ ಮೇಲೆ ರಚನೆಯಾಗಿತ್ತು. ಹೆಚ್ಚು ಜನರು ಕುಳಿತು ನೋಡಲು ಅವಕಾಶವನ್ನು ಕಲ್ಪಿಸಲಾಗುತ್ತಿತ್ತು. ವಿಜಯನಗರ ಕಾಲದಲ್ಲಿ ಹೆಚ್ಚಾದ ಜನಸಂಖ್ಯೆ ಮತ್ತು ವಿಜೃಂಬಣೆಯಿಂದ ನಡೆಯುವ ಪೂಜೆಗಳಿಗೆ ಈ ತೆರನಾದ ಮಂಟಪದ ರಚನೆ ಅವಶ್ಯವಿತ್ತು. ವಿಜಯನಗರ ಕಾಲದಲ್ಲಿ ರಂಗಭೋಗವು ಹೆಚ್ಚು ವಿಸ್ತಾರವಾಗಿ ನಡೆದುದನ್ನು ಕಾಣಬಹುದು. ರಂಗಭೋಗದಲ್ಲಿ ಸ್ತ್ರೀ ಮತ್ತು ಪುರುಷರಿಬ್ಬರಿಗೂ ಅವಕಾಶವಿತ್ತು.

**ಸೂಳೆಯರು :** ಸೂಳೆಯರು ದೇವದಾಸಿಯರೆಂದು ಭಗವಂತನ ದಾಸಿಯರು ದೇವರ ಸೇವಾ ಕೈಕಾರ್ಯಗಳಿಗೆ ನೆರವೇರಿಸುವವರು ಎಂದು ಅರ್ಥ. ದೇವಸ್ಥಾನಗಳಲ್ಲಿ ನೃತ್ಯ, ಗಾಯನ ಮಾಡುವ ಮೂಲಕ ದೇವರ ಸೇವೆಯನ್ನು ಮಾಡಿಕೊಂಡು ಬದುಕುವವರು. ವಿಗ್ರಹದ ದೇಹಕ್ಕೆ ಸಲ್ಲುವ ಭೋಗ ಅಂಗಭೋಗವೆಂದು ಹಿಂದೆಯೇ ನೋಡಿದ್ದೇವೆ. ಗರ್ಭಗೃಹದ ಮುಂದೆ ರಂಗದಲ್ಲಿ ನಡೆಯುವ ಗಾಯನ, ನೃತ್ಯಗಳೇ ರಂಗಭೋಗಗಳು ದೇವದಾಸಿಯರು ರಂಗಭೋಗದ ಉಪಕರಣಗಳಾಗಿದ್ದರು. ಮೊಟ್ಟಮೊದಲ ಬಾರಿಗೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ಪಟ್ಟದ ಕಲ್ಲಿನ ವಿರುಪಾಕ್ಷ ದೇವಾಲಯದ ದೇಗುಲದ ಸೂಳೆಯೊಬ್ಬಳು ದಾನ ಮಾಡಿದ ಉಲ್ಲೇಖ ಕಂಡುಬರುತ್ತದೆ.[೬೪] ದೇವಸ್ಥಾನಗಳು ಬೆಳೆದಂತೆ ಸೂಳೆಯರ ಸಂಖ್ಯೆಯೂ ಬೆಳೆಯಿತು. ಸೂಳೆಯರ ಸಂಖ್ಯೆ ಹೆಚ್ಚಿದ್ದರಿಂದ ಅವರ ಕಾರ್ಯಕ್ಷೇತ್ರವು ಹೆಚ್ಚಾಯಿತು. ಹಾಗಾಗಿ ಅವರ ಕೆಲಸಗಳಿಗೆ ತಕ್ಕಂತೆ, ಸೂಳೆಯರಿಗೆ ಹೆಸರನ್ನು ಇಡಲಾಯಿತು. ಕಂಬದ ಪಕ್ಕದಲ್ಲಿ ದೇವಾಲಯದ ಅಲಂಕಾರಕ್ಕೆ ನಿಲ್ಲುವ ಸೂಳೆಯು ಕಂಬದ ಸೂಳೆಯರೆಂದು ಕರೆಯಲಾಯಿತು.[೬೫] ನರ್ತನ ನೃತ್ಯಾದಿ ಕಾರ್ಯಗಳನ್ನು ಮಾಡುವ ಸೂಳೆಯನ್ನು ಪಾತ್ರ ಎಂದು ಶಾಸನಗಳು ಕರೆದಿವೆ.[೬೬] ದೇವರಿಗೆ ಉತ್ಸವ

ಮಂಟಪದಲ್ಲಿ ಅಥವಾ ಗರ್ಭಗೃಹದಿಂದ ಹೊರೆಗೆ ಹೊರಟಾಗ ದೇವರಿಗೆ ಚಾಮರವನ್ನು ಬೀಸುತ್ತಿದ್ದರು. ಈ ಚಾಮರ ಬೀಸುವ ಸಲುವಾಗಿ ನೇಮಕ ಮಾಡಿಕೊಂಡ ಸೂಳೆಯರನ್ನು "ಚಾಮರದ ಸೂಳೆಯರು" ಎಂದು ಕರೆಯಲಾಗಿದೆ.[೯೭] ಹೀಗೆ ಸೂಳೆಯರಿಗೆ ಅವರ ಸೇವೆಗನುಗುಣವಾಗಿ ಅವರನ್ನು ಕರೆಯಲಾಗುತ್ತಿತ್ತು. ದೇವಾಲಯಗಳಲ್ಲಿ ಇವರ ಸೇವೆ ವಂಶಪಾರಂಪರ್ಯವಾಗಿ ನಡೆದು ಬರುತ್ತಿತ್ತೆಂದು ತಿಳಿದುಬರುತ್ತದೆ.[೯೮] ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಾಗಿರಲಿಲ್ಲ.[೯೯]

ದೇವದಾಸಿಯರ ಬಗ್ಗೆ ಹೆಚ್ಚು ಉಲ್ಲೇಖಗಳು ಪ್ರವಾಸಿ ವರದಿಗಳಲ್ಲಿ ನಿರೂಪಿತವಾಗಿದೆ. ವಿದೇಶಿಯ ಪ್ರವಾಸಿಯಾದ ಪಾಯೆಸ್‌ನು ವಿಜಯನಗರದ ದೇವಾಲಯಗಳಲ್ಲಿ ತಾನು ಕಂಡ ದೇವದಾಸಿಯರ ಬಗೆಗೆ ಬರೆಯುತ್ತಾನೆ. ದೇವರ ಪೂಜೆಯ ಸಮಯದಲ್ಲಿ ದೇವಸ್ಥಾನಕ್ಕೆ ಸೇರಿದ ದೇವದಾಸಿಯರು ನೃತ್ಯಮಾಡುತ್ತಾರೆ. ಇವರು ಸೂಳೆಗಾರಿಕೆಯನ್ನು ಮಾಡುತ್ತಾ, ಊರಿನ ಪ್ರಮುಖ ಬೀದಿಯಲ್ಲಿ ವಾಸಮಾಡುತ್ತಾರೆ. ಇವರ ಬಗೆಗೆ ಜನರಲ್ಲಿ ಬಹಳ ಗೌರವ ಭಾವನೆ ಇದೆ.[೧೦೦] ವಿದೇಶಿಯ ವರ್ಣನೆಗಳಲ್ಲದೆ, ಸಾಹಿತ್ಯಿಕ ಕೃತಿಗಳಲ್ಲೂ ವೇಶ್ಯೆಯರ ಬಗೆಗೆ ವಿಸ್ತಾರವಾದ ವರ್ಣನೆಗಳನ್ನು ಕಾಣಬಹುದು ರಾಜ ಸಭೆಯಲ್ಲಿ ವೇಶ್ಯೆಯರಿದ್ದರೆ ಅದು ಶುಭ ಸೂಚನೆ ಎಂದು ಸೋಮನಾಥನು ಹೇಳುತ್ತಾನೆ. ವಿಜಯನಗರ ಕಾಲದಲ್ಲಿ ಇದು ಎಲ್ಲಾ ವೃತ್ತಿಗಳಿಗಿಂತಲೂ ಸ್ವಾಭಾವಿಕ ವೃತ್ತಿಯಾಗಿತ್ತೆಂಬುದು ಸಾಮಾಜಿಕವಾದ ದುರಂತವಾಗಿತ್ತು. ಈ ಪದ್ಧತಿಗೆ ಆಳುವರ್ಗವು ಪ್ರೋತ್ಸಾಹಿಸುತ್ತಾ ನಡೆದುದನ್ನು ನೋಡಿದರೆ ಸಾಮಾಜಿಕವಾಗಿ ಅಂದಿನ ಸಮಾಜ ನೈತಿಕತೆಯಿಂದ ಅನೈತಿಕತೆಯೆಡೆ ಹೆಚ್ಚು ವಾಲಿತ್ತು ಎಂಬುದು ಕಂಡುಬರುತ್ತದೆ. ರಾಜಧಾನಿಯಲ್ಲಿ ಅನಾರೋಗ್ಯಕರ ಸಂಸ್ಕೃತಿಯ ಸಮಾಜದ ನಿರ್ಮಾಣದೊಡನೆ ಸಮಾಜದ ನೈತಿಕತೆಯು ಕುಸಿಯಲಾರಂಭಿಸಿದ್ದು ಸ್ಪಷ್ಟ.[೧೦೧]

ದೇವಾಲಯಗಳಲ್ಲಿ ಕೆಲಸ ಮಾಡುವ ದೇವದಾಸಿಯರ ಮಕ್ಕಳು ದೇವದಾಸಿಯರಾಗುತ್ತಿದ್ದರು. ದೇವಾಲಯಗಳಲ್ಲಿ ನೃತ್ಯ ಸಂಗೀತದಲ್ಲಿ ಸೇವೆ ಸಲ್ಲಿಸುತ್ತಿದ್ದ ದೇವದಾಸಿಯರು ಉಳಿದ ಸಮಯವನ್ನು ವೇಶ್ಯ ವೃತ್ತಿಯಲ್ಲಿ ಕಳೆಯುತ್ತಿದ್ದರು. ಈ ದೇವದಾಸಿಯರಿಗೆ ಹುಟ್ಟಿದ ಮಕ್ಕಳೆಲ್ಲ ದೇವಸ್ಥಾನಕ್ಕೆ ಸೇರಿರುತ್ತಾರೆ. ಅಂದರೆ ಅದೇ ವೃತ್ತಿಯಲ್ಲಿ ಮುಂದುವರೆಯುತ್ತಾರೆ. ಇವರು ಊರಿನ ಪ್ರಮುಖ ಬೀದಿಯಲ್ಲಿ ವಾಸ ಮಾಡುತ್ತಾರೆ ಎಂದು ಪಾಯೇಸ್‌ನು ಹೇಳುತ್ತಾನೆ.

ದೇವರ ಸೇವೆಯ ಹೆಸರಿನಲ್ಲಿ ಧಾರ್ಮಿಕ ರಂಗದಲ್ಲೂ ಬಿಗಿಯಾದ ಹಿಡಿತವನ್ನು ಹೊಂದಿದ ವೇಶ್ಯೆಯರು ವಿಜಯನಗರದ ಪ್ರತಿಯೊಂದು ಚಿಕ್ಕ ಮತ್ತು ದೊಡ್ಡ ದೇವಸ್ಥಾನಗಳಿಗೆ ಅರಸರು ಪಟ್ಟಣಸ್ವಾಮಿಗಳು, ಶ್ರೀಮಂತರು, ನಾಗರೀಕರು ಅನೇಕ ದಾನಗಳನ್ನು ನೀಡಿದರು. ಇದರಿಂದ ದೇವಸ್ಥಾನಗಳು ಶ್ರೀಮಂತ ಖಜಾನೆಗಳಾಗಿದ್ದವು. ರಾಜಕೀಯ ವಲಯಗಳಲ್ಲಿ ಅತ್ಯಂತ ಪ್ರಭಾವಿ ವ್ಯಕ್ತಿತ್ವವನ್ನು

ಹೊಂದಿದ್ದ ಪುರೋಹಿತರ ಮತ್ತು ದೇವದಾಸಿಯರ ಸಂಬಂಧವು ಹದಗೆಟ್ಟು ಹೋಗಿತ್ತು. ಚನ್ನಬಸವ ಪುರಾಣದಲ್ಲಿ ಹೇಳುವಂತೆ[೧೦೨] "ಶಿವಭಕ್ತ ಸೂಳೆಯರ ಗುಂಪು ಅಲ್ಲಿಗೆ ಬಂದ ವಿಟ ಜಂಗಮರೊಡನೆ ಕೂಡಿ ಅನಂತ ಸೌಖ್ಯವನ್ನು ಪಡೆಯುತ್ತಿದ್ದು, ಅನಂತರದಲ್ಲಿ ಅವರು ಶಿವಪೂಜೆ ಮಾಡುತ್ತಿದ್ದರು. ಇದರಿಂದ ವಿಜಯನಗರದಲ್ಲಿ ಬಹುತೇಕ ದೇವಾಲಯಗಳು ಕಾಮಕೇಳಿಯ ತಾಣಗಳಾಗಿದ್ದವೆಂದು ಸ್ಪಷ್ಟವಾಗುತ್ತದೆ. ಅರಮನೆಗಳಲ್ಲಿ ಪ್ರತಿ ಶನಿವಾರ ನಡೆಯುತ್ತಿದ್ದ ದೇವರ ಪೂಜೆಯಲ್ಲಿ ದೇವದಾಸಿಯರು ನೃತ್ಯ ಮಾಡಬೇಕಾಗಿತ್ತು. ಇದರಿಂದ ಅರಮನೆ ಮತ್ತು ಗುರುಮನೆಯ ವಾತಾವರಣ ಕೆಟ್ಟು ಹೋಗಿತ್ತು. ದೇವಾಲಯದ ವಾರ್ಷಿಕ ಆಚರಣೆಯಾದ ರಥೋತ್ಸವದ ಸಂದರ್ಭದಲ್ಲಿ ರಥದ ಮೇಲೆ ಉತ್ಸವ ಮೂರ್ತಿಯನ್ನಿಟ್ಟು ವೈಭವದಿಂದ ಮೆರವಣಿಗೆ ಮಾಡುತ್ತಾರೆ. ಆಗ ಸೂಳೆಯರು ಇತರೆ ಸ್ತ್ರೀಯರು ಹಾಡುತ್ತಾ ರಥೋತ್ಸವದಲ್ಲಿ ಭಾಗವಹಿಸುತ್ತಾರೆ ಎಂದು ಪಾಯೇಸ್ ಹೇಳುತ್ತಾನೆ.

ಒಟ್ಟಾರೆಯಾಗಿ ವಿಜಯನಗರ ಕಾಲದ ದೇವಸ್ಥಾನಗಳಲ್ಲಿ ಸೂಳೆಯರ ಹಿಡಿತ ಜಾಸ್ತಿಯಾಗಿತ್ತು. ದೇವಸ್ಥಾನದ ಪೂಜಾರಿಗಳು ದೇವದಾಸಿಯರ ಹಿಡಿತದಲ್ಲಿ ಸಿಕ್ಕು ಅಂದಿನ ಕಾಲದ ಧಾರ್ಮಿಕ ಪರಿಸರ ವಿಜಯನಗರದ ಕೊನೆಯ ಕಾಲಕ್ಕಾಗಲೇ ಅಧೋಗತಿಗಿಳಿದಿತ್ತು.

**ಸಂಗೀತ ವಾದ್ಯಗಾರರು :** ದೇವಸ್ಥಾನದಲ್ಲಿ ನಡೆಯುತ್ತಿದ್ದ ಹಬ್ಬ, ಉತ್ಸವಗಳ ಸಂದರ್ಭದಲ್ಲಿ ಅನೇಕ ಸಂಗೀತ ವಾದ್ಯಗಳನ್ನು ನುಡಿಸಲಾಗುತ್ತಿತ್ತು. ಈ ಸಂಗೀತ ವಾದ್ಯಗಳನ್ನು ನುಡಿಸಲು ನುರಿತ ವಾದ್ಯಗಾರರನ್ನು ನೇಮಕ ಮಾಡಿಕೊಳ್ಳಲಾಗುತ್ತಿತ್ತು. ಒಂದೊಂದು ಭಾಗದಲ್ಲಿ ಒಂದೊಂದು ಸಂಗೀತವಾದ್ಯಗಳು ಬಳಕೆಯಲ್ಲಿದದ್ದನ್ನು ಶಾಸನಗಳು ತಿಳಿಸುತ್ತವೆ. ವಿಜಯನಗರ ಕಾಲದಲ್ಲಾದ ದೇವರ ಉತ್ಸವವನ್ನು ಹೆಚ್ಚು ವಿಜೃಂಭಣೆಯಿಂದ ಆಚರಿಸುತ್ತಿದ್ದರಿಂದ, ಸಂಗೀತಕಾರರ ಮತ್ತು ವಾದ್ಯಗಾರರ ಸಂಖ್ಯೆಯು ದೇವಸ್ಥಾನದಲ್ಲಿ ಹೆಚ್ಚಾಗಿ ನೇಮಿಸಿಕೊಳ್ಳಲಾಗುತ್ತಿತ್ತು.

**ನಾಗಸ್ವರ :** ನಾಗಸ್ವರ ಒಂದು ಶುಭ ಸಂದರ್ಭದಲ್ಲಿ ಬಳಸುವ ವಾದ್ಯವಾಗಿದೆ. ಇದಕ್ಕೆ ಉತ್ತರ ಕರ್ನಾಟಕದಲ್ಲಿ ಓಲಗ ಎಂಬ ಹೆಸರಿನಿಂದಲೂ ಕರೆಯುತ್ತಾರೆ.[೧೦೩] ಈ ವಾದ್ಯವನ್ನು ನುಡಿಸುವ ವಾದ್ಯಗಾರನು ದೇವಾಲಯದಲ್ಲಿ ನೇಮಕಗೊಂಡಿರುತ್ತಿದ್ದನು. ವಿಜಯನಗರ ಕಾಲದ ಹಬ್ಬ, ಉತ್ಸವಗಳಲ್ಲಿ ದೇವಸ್ಥಾನದಲ್ಲಿ ಈ ವಾದ್ಯವು ಬಳಕೆಯಾಗುತ್ತಿದ್ದಿತು. ಶಾಲಿವಾಹನ ಶಕವರ್ಷ ೧೪೭೪ರಲ್ಲಿ ಅಂದರೆ ಕ್ರಿ.ಶ.೧೫೫೨ರಲ್ಲಿ ವಿಜಯನಗರ ರಾಜ್ಯವನ್ನು ಸದಾಶಿವರಾಯನು ಆಳುವ ಸಮಯದಲ್ಲಿ ವೇಲೂರು ತಿಮ್ಮಪ್ಪನಾಯಕನ ಮಗ ರಾಮಪ್ಪನಾಯಕನು ಮೊರಬದ ಹತ್ತಿರದ ಪಂನಲುನುಂಕನ ಹಳ್ಳಿಯನ್ನು ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವರಿಗೆ ಎರೆಡು ನಾಗಸ್ವರ ನುಡಿಸಬೇಕೆಂದು ಕೋನಯ್ಯರಾವುತನ ಮಗ ಮುಖವೇಣಿಯು ಮುಸಿಯರಾವುತನಿಗೆ ದಾನ ನೀಡುತ್ತಾನೆ. ಈ ಗ್ರಾಮದಲ್ಲಿ ದೊರೆಯುವ ಜಲ,

ಪಾಷಾಣ, ನಿಧಿ, ನಿಕ್ಷೇಪ, ಅಕ್ಷೀಣಿ, ಆಗಾಮಿ, ಸಿದ್ಧ ಸಾಂಧ್ಯ ಎಂಬ ಎಲ್ಲಾ ಅಷ್ಟಭೋಗಗಳನ್ನು ದಾನ ಪಡೆದವರು ಅನುಭವಿಸಿಕೊಂಡು, ಅವರು ಸಂಗೀತವಾದ್ಯವಾದ ನಾದಸ್ವರವನ್ನು ನುಡಿಸುವ ಮುಖೇನ ವಸಂತ ಮಲ್ಲಿಕಾರ್ಜುನ ದೇವರ ಸೇವೆಯನ್ನು ಮಾಡಿಕೊಂಡಿರಬೇಕೆಂದು ಶಾಸನದಲ್ಲಿ ತಿಳಿಸಲಾಗಿದೆ.[೧೦೪] ಹೀಗೆ ಮಧ್ಯಯುಗೀನ ಕಾಲದಲ್ಲಿ ವಾದ್ಯ ನುಡಿಸುವ ವಾದ್ಯಗಾರರಿಗೆ ದಾನವನ್ನು ನೀಡಿ ಅವರ ಸೇವೆಗೆ ಗೌರವವನ್ನು ನೀಡಲಾಗುತ್ತಿತ್ತು.

**ಡೊಳ್ಳು :** ದೇವಸ್ಥಾನದಲ್ಲಿ ನಡೆಯುವ ಉತ್ಸವಗಳಲ್ಲಿ ಇಂದಿಗೂ ಉತ್ತರ ಕರ್ನಾಟಕದಲ್ಲಿ ಡೊಳ್ಳು ಬಾರಿಸುವುದು ಸರ್ವೆ ಸಾಮಾನ್ಯವಾಗಿದೆ. ವಿಜಯನಗರ ಕಾಲದಲ್ಲಿ ದೇವಾಲಯಗಳಲ್ಲಿ ಉತ್ಸವವರ್ಗದಲ್ಲಿ ಡೊಳ್ಳು ಬಾರಿಸುವ ಪದ್ಧತಿ ಇತ್ತು. ಕ್ರಿ.ಶ.೧೫೫೨ರಲ್ಲಿ ಸದಾಶಿವರಾಯನು ವಿಜಯನಗರ ರಾಜ್ಯ ಭಾರವ ಮಾಡುತ್ತಿರುವಾಗ ದೇವಲಾಪುರದ ವಸಂತ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಡೊಳ್ಳು ಬಾರಿಸುವರಿಗೆ ದಾನ ಬಿಟ್ಟಿದ್ದನ್ನು ಕೂಡ್ಲಿಗಿ ತಾಲೂಕಿನ ಗಜಾಪುರದ ಶಾಸನವು ತಿಳಿಸುತ್ತದೆ.[೧೦೫] ಈ ದಾನವನ್ನು ಡೊಳ್ಳು ಸೇವೆಯನ್ನು ಮಾಡುವ ಅವರ ವಂಶಸ್ಥರು ಅನುಭವಿಸಬೇಕೆಂದು ಹೇಳಲಾಗಿದೆ. ಆ ಕಾಲದಲ್ಲಿ ವಾದ್ಯಗಾರರಿಗೆ ದೇವಸ್ಥಾನದ ಸಮಿತಿಯ ತೋರುತ್ತಿದ್ದ ಗೌರವವು ಇದರಿಂದ ವ್ಯಕ್ತವಾಗುತ್ತದೆ.

**ತಾಳ ಮತ್ತು ಮದ್ದಳೆ :** ದೇವಸ್ಥಾನದಲ್ಲಿ ಪೂಜೆಯ ಸಮಾರಂಭದಲ್ಲಿ ಮತ್ತು ಉತ್ಸವಗಳಲ್ಲಿ ತಾಳಗಳನ್ನು ಮತ್ತು ಮದ್ದಳೆಯನ್ನು ನುಡಿಸಲಾಗುತ್ತಿತ್ತು. ಇವರ ಜೀವನ ನಿರ್ವಹಣೆಗಾಗಿ ಭೂಮಿಯನ್ನು ದತ್ತಿಯಾಗಿ ಬಿಡುವ ಸಂಪ್ರದಾಯವು ವಿಜಯನಗರ ಕಾಲದಲ್ಲಿತ್ತು. ಕುರುಗೋಡಿನ ಸೀಮೆಯಲ್ಲಿ ಸೋಮಸಮುದ್ರ ಅಗ್ರಹಾರದಲ್ಲಿ ತಾಳ, ಮದ್ದಳೆಗಳನ್ನು ಬಾರಿಸುವುದಕ್ಕೆ ಮಹಾಜನರು ದಾನ ಬಿಟ್ಟಿದ್ದನ್ನು ನೋಡಬಹುದಾಗಿದೆ.[೧೦೬]

### ೫. ಸೇವಾ ವರ್ಗದ ಪರಿಚಾರಕರು

ದೇವಾಲಯದಲ್ಲಿ ಸಂಗೀತಗಾರರು, ನೃತ್ಯಗಾರರು, ಗುರುವರ್ಗದ ಪರಿಚಾರಕರು ಇದ್ದರು. ವಿಜಯನಗರ ಕಾಲದಲ್ಲಿ ದೇವಸ್ಥಾನಗಳು ಬಹುದೊಡ್ಡ ಸಾಂಸ್ಕೃತಿಕ ಕೇಂದ್ರಗಳಾಗಿ ಹೊರಹೊಮ್ಮಿದ್ದರಿಂದ, ಅಲ್ಲಿನ ಕೆಲಸಗಾರರ ಸಂಖ್ಯೆಯು ಹೆಚ್ಚಾಯಿತು. ಇದರಿಂದಾಗಿ ದೇವಸ್ಥಾನದ ಲೆಕ್ಕವನ್ನು ಇಡುವವರು, ಹೊಸದಾಗಿ ದೇವಸ್ಥಾನದ ಭಾಗವನ್ನು ನಿರ್ಮಾಣ ಮಾಡುವುದಕ್ಕೆ ಶಿಲ್ಪಿಗಳು, ಹೀಗೆ ಬೇರೆ ಬೇರೆ ಕೆಲಸವನ್ನು ನಿರ್ವಹಿಸುವುದನ್ನು ಸೇವಾ ವರ್ಗದ ಪರಿಚಾರರೆಂದು ಹೆಸರು.

**ಪಲ್ಲಕ್ಕಿ ಸೇವೆಯರು :** ದೇವಸ್ಥಾನದಲ್ಲಿ ನಡೆಯುತ್ತಿದ್ದ ನಿತ್ಯೋತ್ಸವ, ಮಾಸೋತ್ಸವ ಹಾಗೂ ವಾರ್ಷಿಕ ಉತ್ಸವಗಳಲ್ಲಿ ದೇವರ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡುತ್ತಿದ್ದರು. ಈ ರೀತಿಯ ಆಚರಣೆ ಇಂದಿಗೂ ಕೂಡ ಎಲ್ಲಾ ದೇವಸ್ಥಾನಗಳಲ್ಲಿ ನಡೆಯುವುದನ್ನು ಕಾಣಬಹುದು. ವಿಜಯನಗರ

ಕಾಲದಲ್ಲಿ ಪಲ್ಲಕ್ಕಿ ಸೇವೆಯನ್ನು ಮಾಡುವ ಜನರನ್ನು ದೇವಸ್ಥಾನದ ಆಡಳಿತವು ನೇಮಿಸಿಕೊಳ್ಳುತ್ತಿತ್ತು. ಇವರಿಗೆ ದತ್ತಿಯನ್ನು ಬಿಟ್ಟಿರುವುದನ್ನು ವಿಜಯನಗರ ಕಾಲದ ಶಾಸನಗಳಿಂದ ತಿಳಿಯಬಹುದಾಗಿದೆ. ಕುರುಗೋಡಿನ ಸೇವೆಯಲ್ಲಿ ಸೋಮಸಮುದ್ರವೆಂಬ ಗ್ರಾಮದಲ್ಲಿ ಅಗ್ರಹಾರದ ಮಹಾಜನರು ಪಲ್ಲಕ್ಕಿ ಸೇವೆಗೆ ಹೊಲವನ್ನು ದಾನ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. ಶಿವನ ದೇವಸ್ಥಾನಗಳಲ್ಲಿ ಜಾತ್ರೆಯ ದಿನದಂದು ಶಿವನಿಗೆ ಜರುಗುವ ಕಲ್ಯಾಣೋತ್ಸವ ಸಮಯದಲ್ಲಿ ನಡೆಯುವ ಉತ್ಸವ ಮೂರ್ತಿಯ ಮೆರವಣಿಗೆ ಮತ್ತು ಗಂಗಾ ಪೂಜೆ ಸಮಯದಲ್ಲಿ ಈ ಪಲ್ಲಕ್ಕಿಯ ಕಾರ್ಯ ಜರುಗುವುದು ಈ ಕಾರ್ಯಕೈಗೊಳ್ಳಲು ದಾನ ಬಿಟ್ಟಿರುವುದನ್ನು ಮೇಲಿನ ಶಾಸನ ಉಲ್ಲೇಖಿಸುತ್ತದೆ.[೧೦೭]

**ಕಟ್ಟಿಗೆಯ ಜನ :** ದೇವಸ್ಥಾನಕ್ಕೆ ಹೊಂದಿಕೊಂಡಂತೆ ಛತ್ರಗಳಿರುತ್ತಿದ್ದವು. ಛತ್ರಕ್ಕಲ್ಲದೇ, ದೇವಸ್ಥಾನದಲ್ಲಿ ನಡೆಯುತ್ತಿದ್ದ ಹೋಮ ಮತ್ತು ಬ್ರಾಹ್ಮಣರ ಭೋಜನಕ್ಕೆ ಬೇಕಾಗುವ ಅಡಿಗೆಯನ್ನು ತಯಾರಿಸಲು ಕಟ್ಟಿಗೆ ಬೇಕಾಗುತ್ತಿತ್ತು. ಈ ಕಟ್ಟಿಗೆಯನ್ನು ಪೂರೈಸುವುದಕ್ಕೆ ದೇವಸ್ಥಾನದ ಆಡಳಿತವು ಕಟ್ಟಿಗೆಯವರನ್ನು ನೇಮಿಸಿಕೊಳ್ಳುತ್ತಿತ್ತು. ಹಂಪೆಯ ಶಾಸನದಲ್ಲಿ ಇಬ್ಬರು ಕಟ್ಟಿಗೆಯ ಜನರನ್ನು ನೇಮಕ ಮಾಡಿಕೊಂಡಿದ್ದನ್ನು ಶಾಸನವು ಉಲ್ಲೇಖಿಸುತ್ತದೆ.[೧೦೮] ಇವರು ಕೂಡ ದೇವಸ್ಥಾನದ ಪರಿಚಾರಕರಾಗಿದ್ದು, ದೇವಾಲಯದ ಅವಿಭಾಜ್ಯ ಅಂಗವಾಗಿದ್ದರು.

**ಸೇನುಬೋವ :** ದೇವಸ್ಥಾನವು ಜನಪ್ರಿಯತೆಯನ್ನು ಗಳಿಸಿದಂತೆ ಅದಕ್ಕೆ ಬರುವ ಆದಾಯವು ಹೆಚ್ಚಾಗುತ್ತಾ ಹೋಯಿತು. ದೇವಸ್ಥಾನಕ್ಕೆ ಬರುವ ಭಕ್ತರ ಸಂಖ್ಯೆ, ಭೂಮಿ ಹಣ ಮತ್ತು ಆಭರಣಗಳ ಸಂಖ್ಯೆಯೂ ಹೆಚ್ಚಾಯಿತು. ದೇವಸ್ಥಾನವು ಜನ ನಿಬೀಡವಾದಂತೆ ಅದರ ಸುತ್ತ ವ್ಯಾಪಾರಿ ಮಳಿಗೆಗಳು ತಲೆಯೆತ್ತಿದ್ದವು. ಭಕ್ತರು ದೇವಸ್ಥಾನಕ್ಕೆ ಬೆಳ್ಳಿ ಬಂಗಾರದ ಸಾಮಾನುಗಳನ್ನು ಸಮರ್ಪಿಸುತ್ತಿದ್ದರಿಂದ ದೇವಸ್ಥಾನದ ಆವರಣಕ್ಕೆ ಹೊಂದಿಕೊಂಡಂತೆ ಬೆಳ್ಳಿ ಬಂಗಾರದ ಅಂಗಡಿಗಳು ಪ್ರಾರಂಭವಾದವು. ದೇವರ ಪೂಜಾ ಸಾಮಗ್ರಿಯ ವ್ಯಾಪಾರವು ಬಹಳ ಭರಾಟೆಯಿಂದ ಜರುಗುತ್ತಿತ್ತು. ಹೀಗಾಗಿ ದೇವಸ್ಥಾನದ ಸುತ್ತಲೂ ವ್ಯಾಪಾರಿ ಮಳಿಗೆಗಳು ತಲೆಯೆತ್ತಿ ಅದು ಒಂದು ಪೇಟೆಯ ಸ್ವರೂಪವನ್ನು ಪಡೆಯಿತು.[೧೦೯] ಹೀಗಾಗಿ ದೇವಸ್ಥಾನದ ಮತ್ತು ಅದಕ್ಕೆ ಸಂಬಂಧಪಟ್ಟ ವ್ಯವಹಾರದ ಲೆಕ್ಕವನ್ನು ವ್ಯವಸ್ಥಿತವಾಗಿ ಇಟ್ಟುಕೊಳ್ಳಲು ದೇವಸ್ಥಾನದ ಆಡಳಿತವು ಒಬ್ಬ ಸೇನಬೋವನನ್ನು ನೇಮಿಸಿಕೊಳ್ಳಲಾಗುತ್ತಿತ್ತು. ಈ ಸೇನುಭೋವನಿಗೆ ಸಂಬಳವಾಗಿ ದತ್ತಿಯನ್ನು ಬಿಡುತ್ತಿದ್ದರು. ಹಂಪೆಯಲ್ಲಿರುವ ಒಂದು ಶಾಸನವು ದೇವಸ್ಥಾನಕ್ಕೆ ನೇಮಕಗೊಂಡ ಸೇನುಭೋವನಿಗೆ ದತ್ತಿ ನೀಡಿದ ವಿಷಯವನ್ನು ಉಲ್ಲೇಖಿಸುತ್ತದೆ.[೧೧೦]

**ಕಾವಲುಗಾರರು :** ದೇವಾಲಯಗಳು ವಿಜಯನಗರ ಕಾಲದಲ್ಲಿ ಶ್ರೀಮಂತಿಕೆಯ ಆಗರವಾಗಿ ಬೆಳೆದುಬಂದವು. ಅವು ಅಪಾರ ಪ್ರಮಾಣದ ಧನ, ಕನಕ, ಆಭರಣಗಳನ್ನು ಹೊಂದಿರುತ್ತಿದ್ದವು. ದೇವಸ್ಥಾನದ ಗೋಪುರಕ್ಕೆ ಚಿನ್ನದ ಹೊದಿಕೆ, ಚಿನ್ನದ ಕಳಸವನ್ನು ಜೋಡಿಸಲಾಗಿರುತ್ತಿತ್ತು. ಕೋಲಾರ ಜಿಲ್ಲಾ ಮುಳುಬಾಗಿಲು

ತಾಲೂಕಿನ ವಿರೂಪಾಕ್ಷಿಯ ವಿರೂಪಾಕ್ಷ ದೇವಸ್ಥಾನಕ್ಕೆ ಪ್ರೌಢದೇವರಾಯನ ಮಂತ್ರಿಯಾದ ಲಕ್ಕಣ್ಣ ದಂಡೇಶನು ವಿರೂಪಾಕ್ಷ ದೇವಸ್ಥಾನದ ಗೋಪುರಕ್ಕೆ ಚಿನ್ನದ ಹೊದಿಕೆ ಹೊದಿಸಿ ಚಿನ್ನದ ಕಳಸವನ್ನು ತೊಡಿಸಿದನೆಂದು ವಿರೂಪಾಕ್ಷಿಯ ಶಾಸನವು ತಿಳಿಸುತ್ತದೆ. ಇಷ್ಟೊಂದು ಶ್ರೀಮಂತಿಕೆಯಿಂದ ಕೂಡಿದ ದೇವಸ್ಥಾನಗಳನ್ನು ಕಾಯಲು ಕಾವಲುಗಾರರನ್ನು ದೇವಸ್ಥಾನದ ಆಡಳಿತವು ನೇಮಿಸಿಕೊಳ್ಳುತ್ತಿದ್ದಿತು. ಹಂಪೆಯ ವಿರೂಪಾಕ್ಷ ತೀರ್ಥದ ರಕ್ಷಕನಾಗಿ ಸಾಮಂತ ಮಾದೆಯನಾಯಕ ನೇಮಕಗೊಂಡಿದ್ದನೆಂದು ಹಂಪೆಯ ಶಾಸನವು ತಿಳಿಸುತ್ತದೆ.[೧೧೧] ಹೀಗೆ ಒಬ್ಬ ಸಾಮಂತನೇ ಮತ್ತಂಗ ಪರ್ವತದ ಕಾವಲಿನ ಹೊಣೆ ಹೊತ್ತಿದ್ದನೆಂದರೆ, ಅಲ್ಲಿನ ಕಾವಲು ಸೈನಿಕರ ಸಂಖ್ಯೆ ನೂರಾರು ಇರಲೇಬೇಕು. ಹಾಗಾಗಿ ದೇವಸ್ಥಾನದ ಸಂಕೀರ್ಣವು ನೂರಾರು ಜನ ಕಾವಲುಗಾರರನ್ನು ಹೊಂದಿರುವುದು ಅವಶ್ಯವಾಗಿತ್ತು.

ದೇವಸ್ಥಾನವು ವಿಜಯನಗರ ಕಾಲದಲ್ಲಿ ಒಂದು ಬೃಹತ ಸಂಸ್ಥೆಯಾಗಿ ಬೆಳವಣಿಗೆ ಹೊಂದಿತ್ತು. ವಿಜಯನಗರ ಕಾಲದಲ್ಲಿ ಶೈವ ವೈಷ್ಣವ ದೇವಸ್ಥಾನಗಳು ಸಾಮಾನ್ಯವಾಗಿ ಒಂದೇ ರೀತಿಯ ಆಡಳಿತ ಪದ್ಧತಿಯನ್ನು ಹೊಂದಿದ್ದವು. ದೇವಸ್ಥಾನದ ಪರಿಚಾರಕ ಹುದ್ದೆಗಳು ಎರಡೂ ದೇವಸ್ಥಾನಗಳಲ್ಲಿ ಒಂದೇ ರೀತಿಯ ಹೆಸರಿದ್ದನ್ನು ಶಾಸನಗಳು ಉಲ್ಲೇಖಿಸಿವೆ. ದೇವಾಲಯದ ಮುಖ್ಯಸ್ಥನಾದ ಸ್ಥಾನಾಚಾರ್ಯರ ನೇತೃತ್ವದಲ್ಲಿ ಅಲ್ಲಿನ ವಿವಿಧ ನೌಕರರ ನಿಷ್ಠೆಯಿಂದ ವ್ಯವಸ್ಥಿತವಾಗಿ ನಡೆದುಕೊಂಡು ಹೋಗುತ್ತಿದ್ದರು. ಪರಿಚಾರಕರು ಸ್ಥಾನಚಾರ್ಯರು ವಹಿಸಿಕೊಟ್ಟ ವೃತ್ತಿಯನ್ನು ನಿರ್ವಹಿಸಿ ತಮಗೆ ದೇವಸ್ಥಾನದ ಆಡಳಿತ ಮಂಡಳಿಯು ಕೊಟ್ಟ ದತ್ತಿಯಿಂದ ನೆಮ್ಮದಿಯಿಂದ ಪರಿಚಾರಕರು ಊಟ ಮಾಡುತ್ತಿದ್ದರು. ಮಧ್ಯಯೂಗೀನ ಕಾಲದ ಸಮಾಜವು ಧಾರ್ಮಿಕಯುಕ್ತವಾದದಾಗಿದ್ದು ಅಂದಿನ ಕಾಲದಲ್ಲಿ ದೇವರ ಮೇಲೆ ಭಯ, ಭಕ್ತಿ ಇದ್ದುದರಿಂದ ಸ್ಥಾನಾಚಾರ್ಯರ ಯೋಗಿತರ ತಪಶ್ಯಕ್ತಿಗೆ ಹೆದರಿ ಎಲ್ಲಾ ಪರಿಚಾರಕರು ಶ್ರದ್ಧೆ ಭಕ್ತಿಯಿಂದ ಕಾರ್ಯನಿರ್ವಹಿಸುತ್ತಿದ್ದರು. ವಿಜಯನಗರದ ಕಾಲದ ಮಧ್ಯದ ವೇಳೆಗಾಗಲೇ ಸ್ಥಾನಪತಿಯನ್ನು ರಾಜನೇ ನೇಮಕ ಮಾಡುತ್ತಿದ್ದರಿಂದ ಪರಿಚಾರಕರು ಪ್ರಭುತ್ವಕ್ಕೆ ಹೆದರಿ ಕೆಲಸವನ್ನು ನಿರ್ವಹಿಸುತ್ತಿದ್ದರು. ಇದರಿಂದಾಗಿ ದೇವಸ್ಥಾನದ ಸಕಲ ಕಾರ್ಯಗಳು ಸಂದರ್ಭೋಚಿತವಾಗಿ ಸಮಯಕ್ಕೆ ಸರಿಯಾಗಿ ನಡೆದು ಇಡೀ ದೇವಸ್ಥಾನದ ಆಡಳಿತ ಚಕ್ರವು ಸುಲಲಿತವಾಗಿ ಜರುಗುತ್ತಿದ್ದವು.

## ಜಾತ್ರೆಗಳು

ದೇವಾಲಯವೆಂಬ ಸಾಮಾಜಿಕ ಸಂಸ್ಥೆ ಮಾನವನ ಜೀವನದಲ್ಲಿ ವಿಶಿಷ್ಠವಾದ ಗೌರವಯುತವಾದ ಸ್ಥಾನವನ್ನು ಪಡೆದಿತ್ತು. ಪವಿತ್ರ ವಾತಾವರಣದಿಂದ ಕೂಡಿದ ಈ ಸ್ಥಳ ನಿತ್ಯನೈಮಿತ್ತಿಕ ಧಾರ್ಮಿಕ ಕಾರ್ಯಗಳ ಕೇಂದ್ರವಾಗಿತ್ತು. ದೇವಸ್ಥಾನವು ಜಾತ್ರೆ ಮತ್ತು ರಥೋತ್ಸವಗಳ ಕೇಂದ್ರವೂ ಆಗಿತ್ತು. ಜಾತ್ರಾ ರಥೋತ್ಸವಗಳು ನಮ್ಮ ಜನರ ಧಾರ್ಮಿಕ ಜೀವನದ ಪ್ರತೀಕವಾಗಿರುವುದರ ಜೊತೆಯಲ್ಲಿ ಅವರ

ಬದುಕಿನ ಮನೋರಂಜನೆಯ ಕೇಂದ್ರಗಳೂ ಆಗಿದ್ದವು. ಜನತೆಯ ಬದುಕಿನಲ್ಲಿ ನವೋತ್ಸವವನ್ನು ತುಂಬುವಲ್ಲಿ ಜಾತ್ರೆಯ ಪ್ರಭಾವ ಅಪಾರವಾದುದು. ಸುತ್ತಮುತ್ತಲ ಹತ್ತು ಹಳ್ಳಿಯ ಜನರು ಜಾತ್ರಾದಿ-ಉತ್ಸವಗಳಲ್ಲಿ ಸೇರುವುದರಿಂದ ಬಂಧುಗಳು, ಸ್ನೇಹಿತರು, ಪರಿಚಯದವರು ಸೇರುವುದಕ್ಕೆ ಹಬ್ಬ-ಜಾತ್ರೆಗಳು ಒಂದು ತಾಣವಾಗಿದ್ದವು. ಜನರು ತಮ್ಮ ತಮ್ಮ ಜೋಡೆತ್ತಿನ ಬಂಡಿಗಳಲ್ಲಿ ಕುಳಿತು ಯಾತ್ರಸ್ಥಳಗಳಿಗೆ ಪ್ರಯಾಣಿಸುವುದು ವಿಜಯನಗರ ಕಾಲದಲ್ಲಿ ಸಾಮಾನ್ಯವಾಗಿತ್ತು. ವಿಜಯನಗರ ಕಾಲದ ಹಬ್ಬ ಜಾತ್ರಾಮಹೋತ್ಸವಗಳನ್ನು ವಿದೇಶಿಯರು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ಅಂದಿನ ಕಾಲದ ಸಾಹಿತ್ಯ ಕೃತಿಗಳಾದ ವಿರುಪಾಕ್ಷ ವಸಂತೋತ್ಸವ ಚಂಪು, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಕನಕದಾಸರ ಮೋಹನ ತರಂಗಿಣಿ ಮೊದಲಾದ ಸಾಹಿತ್ಯಿಕ ಕೃತಿಗಳು ಅಂದಿನ ಕಾಲದ ಹಬ್ಬ ಉತ್ಸವಗಳ ವಿವರಣೆಯನ್ನು ನೀಡುತ್ತವೆ. ಜನತೆ ಜಾತ್ರೆಗೆ ಹೋಗುವುದು ಸಾಮಾನ್ಯವಾಗಿತ್ತು. ತಮಗೆ ಎಷ್ಟೇ ಕಷ್ಟಗಳಿರಲಿ, ಅವುಗಳನೆಲ್ಲ ಎದುರಿಸಿ ಜನತೆ ಜಾತ್ರೆ-ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದರು.[೧೧೨] ಜಾತ್ರೆಯಲ್ಲಿ ಭಾಗವಹಿಸುವುದರಿಂದ ಜನತೆಗೆ ಧಾರ್ಮಿಕ ಶ್ರದ್ಧೆ ಜಾಗೃತಗೊಳ್ಳುತ್ತಿತ್ತು. ಜೊತೆಯಲ್ಲಿ ದೈನಂದಿನ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿದ್ದ ಜನತೆಗೆ ಮನೋರಂಜನೆಯು ದೊರೆತಂತಾಗುತ್ತಿತ್ತು. ಹಳ್ಳಿ ಮುಖೇನವಾಗಿ ಜಾತ್ರಾಯಾತ್ರಿಗಳು ಹಾದು ಹೋಗುವಾಗ ಹಳ್ಳಿಯ ಜನತೆ ಆದರಿಸಿ ಸತ್ಕರಿಸಿ ಬೀಳ್ಕೊಡುತ್ತಿದ್ದರು.

ಜಾತ್ರೆಗಳು, ರಥೋತ್ಸವಗಳು ನಮ್ಮ ಜನರ ಧಾರ್ಮಿಕ ಜೀವನವನ್ನು ರೂಪಿಸುವುದರಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಇವೆರೆಡೂ ದೇವಾಲಯಕ್ಕೆ ಹೊಂದಿಕೊಂಡು ಬೆಳೆದು ಬಂದವು ಹಬ್ಬಗಳು ಋತುಮಾನಕ್ಕೆ ಅನುಸಾರವಾಗಿ ಒಂದು ವರ್ಷಕ್ಕೆ ಒಂದುಬಾರಿ ಬಂದು ಹೋಗುತ್ತವೆ. ಹಬ್ಬಗಳನ್ನು ಜನತೆ ತಮ್ಮ ಮನೆಗಳಲ್ಲೂ, ಸಾಮ್ರಾಜ್ಯದ ಎಲ್ಲಾ ಗ್ರಾಮದ ಜನತೆ ಜಾತ್ರೆಗಳನ್ನು ಆಚರಿಸುತ್ತಿದ್ದರು. ನಿತ್ಯವ್ಯವಹಾರಗಳನ್ನು ಬದಿಗಿರಿಸಿ ಜನತೆ ಹಬ್ಬಗಳನ್ನು ಆಚರಿಸುವುದರಲ್ಲಿ ತೊಡಗುತ್ತಿದ್ದರು. ಒಂದು ಒಳ್ಳೆಯ ಉದ್ದೇಶವನ್ನು ಇಟ್ಟುಕೊಂಡು ಜಾತ್ರೆಗಳನ್ನು ಜನತೆ ಆಚರಿಸುತ್ತಿದ್ದರು. ವ್ಯಕ್ತಿ ಸ್ವಾರ್ಥವನ್ನು ಸ್ವಲ್ಪಮಟ್ಟಿಗಾದರೂ ಮರೆತು ಶ್ರದ್ಧಾ ಭಕ್ತಿಗಳಿಂದ ಈ ಜಾತ್ರೆಗಳನ್ನು ಆಚರಿಸುತ್ತಿದ್ದರು. ಜಾತ್ರೆಯನ್ನು ಒಂದು ಊರು ಮತ್ತು ಅದರ ಸುತ್ತಮುತ್ತಣ ಹತ್ತಾರು ಊರುಗಳು ಸೇರಿ ಆಚರಿಸುತ್ತದ್ದರು. ಹಬ್ಬಗಳಂತೆ ಇಡೀ ಸಾಮ್ರಾಜ್ಯದ ಜನತೆ ಜಾತ್ರೆಗಳನ್ನು ಆಚರಿಸುತ್ತಿರಲಿಲ್ಲ. ಹಬ್ಬಗಳಿಗಿಂತ ಜಾತ್ರೆಯ ಆಚರಣೆ ಸೀಮಿತವಾದದಾಗಿತ್ತು. ಜಾತ್ರೆ ಒಂದು ಗ್ರಾಮದ ಪ್ರಸಿದ್ಧಿ ಹೊಂದಿದ ದೇವಸ್ಥಾನವನ್ನು ಕೇಂದ್ರೀಕರಿಸಿ ಆಚರಣೆಗೊಳ್ಳುತಿತ್ತು. ವಿರೂಪಾಕ್ಷನ ರಥೋತ್ಸವವು ವಿರೂಪಾಕ್ಷ ದೇವಸ್ಥಾನದ ಪರಿಸರದ ಸುತ್ತಲಿರುವ ಹಳ್ಳಿಗಳಲ್ಲಿ ಜನತೆಯನ್ನು ಆಕರ್ಷಿಸುತಿತ್ತು. ದೂರದ ಊರುಗಳಿಂದ ಅಧಿಕಾರಿಗಳು ಸಾಮಂತರು ಜಾತ್ರೆಗೆ ಆಗಮಿಸುತ್ತಿದ್ದರಾದರೂ, ಸಾಮಾನ್ಯಜನತೆ ದೂರದ ಜಾತ್ರೆಗಳಲ್ಲಿ ಭಾಗಿಗಳಾಗುತ್ತಿರಲಿಲ್ಲ.

ಜಾತ್ರೆ ಎಂದರೆ ಅದು ಒಂದು ಧಾರ್ಮಿಕ ಶ್ರದ್ಧಾ ಕೇಂದ್ರದ ಜೊತೆಯಲ್ಲಿ ಮನೋರಂಜನೆ ಕೇಂದ್ರವೂ ಆಗಿತ್ತು. ಹಾಗಾಗಿ ಜಾತ್ರೆ ಎಂದರೆ ಅದೇ ಅನುಭವ ಪ್ರಪಂಚ. ಜನತೆಯ ಕಣ್ಣಿಗೆ ಅಲ್ಲಿ ಕಾಣದ ಸಂಗತಿಯೇ ಇಲ್ಲ. ಜನತೆಯ ಜೀವನಕ್ಕೆ ಬೇಕಾಗುವ ಎಲ್ಲಾ ವಸ್ತುಗಳು ಜಾತ್ರೆಗಳಲ್ಲಿ ದೊರೆಯುತ್ತಿದ್ದವು. ಹೀಗಾಗಿ ಜಾತ್ರೆಗಳು ವ್ಯಾಪಾರಿ ಕೇಂದ್ರವಾಗಿ, ಮನೋರಂಜನಾ ಕೇಂದ್ರವಾಗಿ ಮತ್ತು ಧಾರ್ಮಿಕ ಶ್ರದ್ಧ ಭಕ್ತಿಯ ಕೇಂದ್ರವಾಗಿಯೂ ಕಂಗೊಳಿಸುತ್ತಿದೆ. ಜಾತ್ರೆಯು ವರ್ಷದಲ್ಲಿ ಒಂದು ಬಾರಿ ಮಾತ್ರ ಜರುಗುತ್ತದೆ. ಇದು ಸಾಮಾನ್ಯವಾಗಿ ತೇರಿನ ಸಂದರ್ಭದಲ್ಲಿ ನಡೆಯುತ್ತದೆ. ''ತೇರಾದ ಮೇಲೆ ಜಾತ್ರೆ ನೆರೆಯಿತು'' [೧೧೩]ಎಂಬ ಗಾದೆ ಮಾತು ಜಾತ್ರೆಯು ತೇರಿನ ಸಂದರ್ಭದಲ್ಲಿ ನಡೆಯುತ್ತದೆ ಎಂಬುದನ್ನು ಸಾಬೀತುಪಡಿಸುತ್ತದೆ. ಜಾತ್ರೆಯು ಜರುಗುವ ದೇವಸ್ಥಾನದಲ್ಲಿ ವಿಶೇಷವಾದ ಹಲವಾರು ಪೂಜಾ ವಿಧಿ ವಿಧಾನಗಳು ಜರುಗುವುವು. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಶಂಕರನಾರಾಯಣದ ಹತ್ತಿರದ ಹಿರೇಬೈಲಿನ ಕ್ರಿ.ಶ.೧೩೮೦ರ ಶಾಸನದಂತೆ, ಬುಕ್ಕನು ರಾಜ್ಯಭಾರವನ್ನು ಮಾಡುತ್ತಿದ್ದ ಅವಧಿಯಲ್ಲಿ ಮಲೆಯ ದಂಡನಾಯಕನು ಕೊಡಗಿನ ರಾಜ್ಯವನ್ನು ಆಳುತ್ತಿರಲು ಇಲ್ಲಿನ ಶಂಕರ ನಾರಾಯಣ ದೇವರಿಗೆ ಅಕ್ಕಿ ನೈವೇದ್ಯಕ್ಕೆ ಮತ್ತು ನಂದಾ ದೀಪಕ್ಕೆ ಭೂಮಿಯನ್ನು ದಾನ ನೀಡಿ ಒಂದು ತೇರನ್ನು ಮಾಡಿಸಿಕೊಡುತ್ತಾರೆ.[೧೧೪] ತೇರನ್ನು ಮಾಡಿಸಿಕೊಟ್ಟ ವಿವರವನ್ನು ನೀಡುವುದರಿಂದ ಶಂಕರ ನಾರಾಯಣ ದೇವಸ್ಥಾನದಲ್ಲಿ ಜಾತ್ರೆಯು ನೆರೆಯುತ್ತಿತ್ತು ಎಂಬುದನ್ನು ತಿಳಿಯಬಹುದು.

ಕ್ರಿ.ಶ.೧೫೧೩ರಲ್ಲಿ ಕೃಷ್ಣದೇವರಾಯನು ಹಂಪೆಯಲ್ಲಿ ವಿರುಪಾಕ್ಷ ದೇವರಿಗೆ ನೀಡಿದ ದಾನಗಳನ್ನು ಹೆಸರಿಸಿದೆ. ಇಲ್ಲಿ ಆ ದೇವಸ್ಥಾನಗಳಲ್ಲಿ ನಡೆಯುವ ಜಾತ್ರಾ ಮಹೋತ್ಸವ ಮತ್ತು ವಿವಿಧ ಉತ್ಸವಗಳನ್ನು ಹೆಸರಿಸುತ್ತದೆ. ಹಂಪೆಯ ವಿರೂಪಾಕ್ಷ ದೇವರ ರಥೋತ್ಸವಗಳು ನಡೆಯುವ ವಿವರವನ್ನು ತಿಳಿಸುತ್ತದೆ. ಒಬ್ಬ ದೇವರಿಗೆ ವರ್ಷದಲ್ಲಿ ಒಂದೇ ರಥೋತ್ಸವವು ನಡೆಯುವುದು ಸಾಮಾನ್ಯ ಆದರೆ. ಕೆಲವೊಂದು ವಿಶೇಷ ದೇವಸ್ಥಾನಗಳಲ್ಲಿ ವರ್ಷದಲ್ಲಿ ಹಲವಾರು ರಥೋತ್ಸವಗಳು ನಡೆಯುವುದನ್ನು ಶಾಸನವು ಉಲ್ಲೇಖಿಸಿದೆ.[೧೧೫] ಈ ಮೇಲಿನ ಶಾಸನದಲ್ಲಿ ಚೈತ್ರಮಾಸದ ರಥೋತ್ಸವ ಮಕರ ಸಂಕ್ರಾಂತಿಯ ರಥೋತ್ಸವ, ಮಾಸೋತ್ಸವ, ಪಕ್ಷೋತ್ಸವ, ಸಂವತ್ಸರೋತ್ಸವ ಮೊದಲಾದ ಉತ್ಸವಗಳಿಗೆ ದಾನ ನೀಡಿರುವುದು ಕಂಡುಬರುತ್ತದೆ.

ಕ್ರಿ.ಶ.೧೫೧೬ರಲ್ಲಿ ಬಳ್ಳಾರಿ ಜಿಲ್ಲಾ ಹೊಸಪೇಟೆ ತಾಲೂಕು ನಾಗೇನಹಳ್ಳಿಯಲ್ಲಿ ಕೃಷ್ಣದೇವರಾಯನು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ತಮ್ಮ ತಾಯಿ ನಾಗಲದೇವಿಗೆ ಪುಣ್ಯವಾಗಲೆಂದು, ನಾಗಸಮುದ್ರವೆಂಬ ಕೆರೆಯನ್ನು ಕಟ್ಟಿಸಿದನು. ಇದೇ ಅವಧಿಯಲ್ಲಿ ನಾಗೇಶ್ವರ ಎಂಬ ಶೈವ ದೇವಸ್ಥಾನವನ್ನು ನಿರ್ಮಿಸಿದನು. ಶೈವ ದೇವಸ್ಥಾನದ ಹತ್ತಿರದಲ್ಲೇ ನಾಗೇಂದ್ರಶಯನವೆಂಬ ವಿಷ್ಣುದೇವಸ್ಥಾನವನ್ನು ನಿರ್ಮಿಸಿದನು. ಈ ದೇವರುಗಳಿಗೆ ಅಂಗರಂಗ ವೈಭೋಗ ಮತ್ತು ದೇವರ ರಥೋತ್ಸವನ್ನು ಮಾಡಿಸಿ ಗ್ರಾಮಕ್ಕೆ

ನಾಗಲಾದೇವಿಪುರವೆಂದು ಹೆಸರಿಸಿ, ಅಗ್ರಹಾರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ದಾನವಾಗಿ ನೀಡಲಾಯಿತು. ರಾಜನು ತನ್ನ ಹತ್ತಿರದ ಸಂಬಂಧಿಗಳ ನೆನಪಿಗೋಸ್ಕರವಾಗಿ ದೇವಸ್ಥಾನಗಳನ್ನು ನಿರ್ಮಿಸಿ, ಆ ದೇವರುಗಳಿಗೆ ರಥೋತ್ಸವ ಮತ್ತು ಅಂಗರಂಗ ಭೋಗ ವೈಭವವನ್ನು ನಡೆಯಲು ದಾನದತ್ತಿಗಳನ್ನು ನೀಡುತ್ತಿದ್ದನ್ನು ಈ ಶಾಸನದಿಂದ ತಿಳಿಯಬಹುದು. ಹೀಗೆ, ರಥೋತ್ಸವಗಳು ವಿಜಯನಗರ ಕಾಲದಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿದ್ದವು.

ವಿಜಯನಗರದಲ್ಲಿ ನಡೆಯುತ್ತಿದ್ದ ಧಾರ್ಮಿಕ ಹಬ್ಬಗಳ ಆಚರಣೆಯ ವಿಧಿವಿಧಾನಗಳನ್ನು ವಿದೇಶಿ ಪ್ರವಾಸಿಗಳು ನಮಗೆ ಒದಗಿಸುವರು ಇವುಗಳನ್ನು ಶಾಸನಗಳ ಸಹಾಯದಿಂದಲೂ ಮೇಲಿನಂತೆ ಸಮೀಕರಿಸಬಹುದು. ಆ ಕಾಲದಲ್ಲಿ ದೇವಾಲಯಕ್ಕೆ ಸಂಬಂಧಿಸಿದಂತೆ ನಡೆಯುತ್ತಿದ್ದ ಅತ್ಯಂತ ವೈಭವೋಪೇರಿತವಾದ ಉತ್ಸವಗಳೆಂದರೆ ರಥೋತ್ಸವಗಳು. ಇವುಗಳು ರಾಜ್ಯದ ಅನೇಕ ಕಡೆಗಳಲ್ಲಿ ನಡೆಯುತ್ತಿದ್ದುದನ್ನು ಶಾಸನಗಳು ದೃಢಪಡಿಸುತ್ತವೆ.

ಡೊಮಿಂಗೊ ಪ್ಯಾಸ್ ನು ತನ್ನ ವರದಿಯಲ್ಲಿ ತಿಳಿಸಿರುವಂತೆ ''ದೇವಾಲಯಗಳಿಗೆ ತೀರ ಹತ್ತಿರದಲ್ಲಿ ಕೆತ್ತನೆಯ ಕೆಲಸ ಮತ್ತು ಆಕೃತಿಗಳಿಂದ ತುಂಬಿದ ವಿಜಯೋತ್ಸವದ ರಥವಿದೆ. ಅದನ್ನು ಪ್ರತಿವರ್ಷ ಉತ್ಸವದ ಕಾಲದಲ್ಲಿ ಅದು ಸಾಗಬಹುದಾದಂತಹ ಬೀದಿಗಳ ಮೂಲಕ ನಗರದಲ್ಲಿ ಎಳೆಯಲಾಗುತ್ತದೆ. ಅದು ದೊಡ್ಡದಿದ್ದು ತಿರುವುಗಳಲ್ಲಿ ಹಾಯದು''[೧೧೬] ಎಂದು ರಥೋತ್ಸವ ಮತ್ತು ಅದರ ಸೌಂದರ್ಯದ ಬಗೆಗೆ ಹೇಳುತ್ತಾನೆ. ಉತ್ಸವಗಳ ಬಗೆಗೆ ''ಈ ಅನಾಗರಿಕರಲ್ಲೂ ನಮ್ಮಲ್ಲಿಯಂತೆ ಉತ್ಸವ ಆಚರಿಸುವ ದಿನಗಳಿವೆಯೆಂಬುದನ್ನು ನೀವು ತಿಳಿಯಬೇಕು. ಮುಖ್ಯ ಉತ್ಸವದ ಕಾಲ ಬಂದಾಗ, ರಾಜ್ಯದ ರಾಜಧಾನಿಯಿಂದ ರಾಜರ ಬೀಸ್ನಗ ನಗರಕ್ಕೆ ಆಗಮಿಸುತ್ತಾನೆ.''[೧೧೭] ಅಲ್ಲದೇ ನಗರದಲ್ಲಿನ ಪ್ರಸಿದ್ಧ ನರ್ತಕಿಯರಿಂದ ದೇವಾಲಯಗಳಲ್ಲಿ ನರ್ತನವನ್ನು ನಡೆಸಲಾಗುತ್ತಿತ್ತು ಎಂಬುದನ್ನು ಪಾಯಾಸ್ ನು ಹೇಳುತ್ತಾನೆ.

ವಿಜಯನಗರ ಕಾಲದಲ್ಲಿ ವಿಶೇಷವಾದ ದೊಡ್ಡ ಹಬ್ಬಗಳಾದ ನವರಾತ್ರಿ, ದೀಪಾವಳಿ, ಶಿವರಾತ್ರಿಗಳಲ್ಲಿ ದೇವಸ್ಥಾನದಲ್ಲಿ ವಿಶೇಷ ರಥೋತ್ಸವಗಳು ನಡೆಯುತ್ತಿದ್ದವು. ನವರಾತ್ರಿಯ ಹಬ್ಬದಲ್ಲಿ ನಿತ್ಯರಥೋತ್ಸವ, ನಿತ್ಯಾಭಿಷೇಕ ಪೂಜೆಗಳು ರಾಜಧಾನಿಯಲ್ಲಿ ನಡೆಯುತ್ತಿದ್ದವು ಎಂದು ರತ್ನಕರನು ಹೇಳುತ್ತಾನೆ.[೧೧೮]

ರಥೋತ್ಸವಗಳು ಕೆಲವು ವಿಶೇಷ ಹಬ್ಬಗಳ ಸಂದರ್ಭದಲ್ಲಿ ಒಂಭತ್ತು ದಿನಗಳವರೆಗೆ ನಡೆಯುತ್ತಿದ್ದವು. ಕೆಲವು ಸಂದರ್ಭದಲ್ಲಿ ಹದಿನೈದು ದಿನಗಳವರೆಗೆ ನಡೆಯುತ್ತಿದ್ದವು. ಆದರೆ ಪ್ರಮುಖವಾದ ರಥೋತ್ಸವವು ವರ್ಷದಲ್ಲಿ ಒಂದೇ ದಿನ ನಡೆಯುತ್ತಿತ್ತು. ಈ ರಥೋತ್ಸವಕ್ಕೆ ಕೂಡಿದಷ್ಟು ಜನತೆ ಬೇರೆ ದಿನಗಳ ರಥೋತ್ಸವಕ್ಕೆ ಸೇರುತ್ತಿರಲಿಲ್ಲ. ವಿಜಯನಗರದ ಪ್ರಮುಖವಾದ ದೇವಸ್ಥಾನಗಳಲ್ಲಿ ವಿಶೇಷ ಸಂದರ್ಭಗಳಲ್ಲಿ

ರಥೋತ್ಸವಗಳು ಜರುಗುತ್ತಿದ್ದವು, ಹಬ್ಬಗಳ ಸಂದರ್ಭದಲ್ಲಿ ಒಂಬತ್ತು, ಹದಿನೈದು ದಿನಗಳವರೆಗೆ ರಥೋತ್ಸವಗಳು ಜರುಗುತ್ತಿದ್ದವು ಎಂದು ಮೊದಲೇ ನೋಡಿದ್ದೇವೆ. ರಥೋತ್ಸವಗಳನ್ನು ನಡೆಸುವುದಕ್ಕೆ ದಾನಿಗಳು ಉದಾರವಾಗಿ ದಾನ ಮಾಡಿದ್ದಾರೆ ಎಂಬುದನ್ನು ಶಾಸನಗಳು, ವಿದೇಶಿ ವರದಿಗಳು ತಿಳಿಸುತ್ತವೆ.

ರಥೋತ್ಸವಗಳು ಧಾರ್ಮಿಕ ಆಚರಣೆಗಾಗಿ ಸೇರುತ್ತಿದ್ದವು. ದೈನಂದಿನ ಬದುಕಿನಲ್ಲಿ ಬೆಂದು ಬಸವಳಿದ ಜನತೆ ದೇವರ ಈ ಉತ್ಸವಗಳಲ್ಲಿ ಭಾಗವಹಿಸಿ ತಮ್ಮ ಮನಶಾಂತಿಯನ್ನು ಪಡೆಯುತ್ತಿದ್ದರು. ಇದರಿಂದ ಸಾಮ್ರಾಜ್ಯ ಜನತೆಯಲ್ಲಿ ಪರಸ್ಪರ ಸ್ನೇಹ, ಗೌರವ ಭಾವನೆ ಮೂಡುತ್ತಿತ್ತು. ಇದರಿಂದ ಇವು ಸಾಮ್ರಾಜ್ಯದ ಶಾಂತಿಗೂ ಕಾರಣವಾಗುತ್ತಿದ್ದವು. ಜಾತ್ರೆಯ ಸಮಯದಲ್ಲಿ ಪುರಾಣಗಳನ್ನು ಮಹಾಕಾವ್ಯಗಳನ್ನು ವಾಚನ ಮಾಡು ಪದ್ಧತಿಯು ವಿಜಯನಗರ ಕಾಲದಲ್ಲಿ ಬೆಳೆದು ಬಂದಿತು. ಇದರಿಂದ "ಗಮಕ" ಎಂಬ ಕಲೆಯು ಅಭಿವೃದ್ಧಿ ಹೊಂದಿತು. ಕಾವ್ಯಗಳನ್ನು ಪುರಾಣಗಳನ್ನು ಕೇಳುವುದರ ಮುಖೇನವಾಗಿ ರಾಜ್ಯದ ಜನತೆ ಧಾರ್ಮಿಕ ಪ್ರಜ್ಞೆಯನ್ನು ಹೊಂದಿರುತ್ತಿದ್ದರು.

ಜಾತ್ರೆ ಎಂದರೆ ಅದೇ ಒಂದು ಅನುಭವ ಪ್ರಪಂಚ. ನೋಡುವ ಕಣ್ಣಿಗೆ ಜಾತ್ರೆಯಲ್ಲಿ ಕಾಣದ ಸಂಗತಿಯಿಲ್ಲ. ಹೀಗಾಗಿ ಜಾತ್ರೆಗಳು ಜನತೆಯಲ್ಲಿ ಮನೋರಂಜನೆಯ ಕೇಂದ್ರಗಳಾಗಿಯೂ, ಕಾರ್ಯ ನಿರ್ವಹಿಸುತ್ತಿದ್ದವು. ವರ್ಷದ ಅನುದಿನವೂ ಕೆಲಸ ಮಾಡುತ್ತಿದ್ದ ಜನತೆ, ರಥೋತ್ಸವಗಳಲ್ಲಿ ಭಾಗವಹಿಸುವುದರ ಮುಖಾಂತರವಾಗಿ ತನ್ನ ದಣಿವನ್ನು ನಿವಾರಿಸಿಕೊಳ್ಳುತ್ತಿದ್ದರು. ಇಲ್ಲಿ ದೇವಾಲಯಗಳಲ್ಲಿ ನಡೆಯುತ್ತಿದ್ದ ರಂಗಭೋಗ ವೈಭವದಲ್ಲಿ ನಡೆಯುತ್ತಿದ್ದ ನಾಟ್ಯ ಪ್ರದರ್ಶನಗಳು, ಜಾತ್ರೆಯ ಸಮಯದಲ್ಲಿ ನಡೆಯುತ್ತಿದ್ದ ನಾಟಕಗಳು, ಜನತೆಗೆ ಮನೋರಂಜನೆಯನ್ನು ನೀಡಿದ್ದವು. ವಿಜಯನಗರದ ಕಾಲದಲ್ಲಿ ಸ್ತ್ರೀಯರೂ ಕೂಡ ನಾಟಕದಲ್ಲಿ ಪಾತ್ರವನ್ನು ಮಾಡುತ್ತಿದ್ದರು. "ನಾಯಿಕೊಂಡ" ಎಂಬ ನಾಟಕದಲ್ಲಿ 'ಪಾತ್ರಿ" ಎಂಬ ಸ್ತ್ರೀಯು ನಾಟಕದಲ್ಲಿ ಭಾಗವಹಿಸಿದನ್ನು ನಮಗೆ ಅಂದಿನ ಸಾಹಿತ್ಯದ ಕೃತಿಗಳಿಂದ ತಿಳಿದುಬರುತ್ತದೆ. ಹೀಗೆ ರಥೋತ್ಸವಗಳು ಮನೋರಂಜನೆಯ ಕೇಂದ್ರಗಳಾಗಿದ್ದವು.

ದೇವಸ್ಥಾನಕ್ಕೆ ಸಂಬಂಧಪಟ್ಟ ರಥೋತ್ಸವಗಳು ವ್ಯಾಪಾರ ಕೇಂದ್ರಗಳಾಗಿಯೂ ಸಹ ಕಾರ್ಯನಿರ್ವಹಿಸುತ್ತಿದ್ದವು. ಒಂಬತ್ತರಿಂದ ಹದಿನೈದು ದಿನಗಳವರೆಗೆ ಕೆಲವೊಂದು ದೊಡ್ಡ ಜಾತ್ರೆಗಳು ಒಂದು ವರ್ಷದವರೆಗೆ ಸೇರುತ್ತಿದ್ದರಿಂದ ಇಲ್ಲಿ ನಡೆಯುವ ವ್ಯಾಪಾರವೂ ಬಹಳ ಬರಾಟೆಯಿಂದ ಕೂಡಿರುತ್ತಿತ್ತು. ಜಾತ್ರೆಯಲ್ಲಿ ಮನೆಗೆ ಬೇಕಾದ ವಸ್ತುಗಳೆಲ್ಲ ದೊರೆಯುತ್ತಿದ್ದುದರಿಂದ ಜನತೆ ತಮಗೆ ಬೇಕಾದ ವಸ್ತುಗಳನ್ನು ಕೊಳ್ಳಲು ಜಾತ್ರೆಯಲ್ಲಿ ಸೇರುತ್ತಿದ್ದರು. ಜಾತ್ರೆಯಲ್ಲಿ ಮಕ್ಕಳ ಆಟಿಕೆಗಳು ದೊರೆಯುತ್ತಿದ್ದರಿಂದ ಜಾತ್ರೆಗಳು ಮಕ್ಕಳನ್ನು ಆಕರ್ಷಿಸುವಲ್ಲಿ ಸಫಲವಾಗಿದ್ದವು.

ವಿಜಯನಗರ ಕಾಲದಲ್ಲಿ ಜಾತ್ರೆ ಎಲ್ಲಾ ಜನತೆಯನ್ನು ಆಕರ್ಷಿಸುತ್ತಿದ್ದನ್ನು ಶಾಸನಗಳು, ಕಾವ್ಯಗಳು, ವಿದೇಶಿಯ ವರದಿಗಳು ನಿರೂಪಿಸುತ್ತವೆ. ಜಾತ್ರೆಗಳು ಧಾರ್ಮಿಕ ಆಚರಣೆಯ ಕೇಂದ್ರಗಳಾಗಿ,

ಮನೋರಂಜನೆಯ ಕೇಂದ್ರಗಳಾಗಿ, ವ್ಯಾಪಾರದ ಕೇಂದ್ರಗಳಾಗಿ ಕಾರ್ಯನಿರ್ವಹಿಸಿ ಅಂದಿನ ಜನತೆಯು ಜೀವನವನ್ನು ನೆಮ್ಮದಿಯಾಗಿರುಸುವ ಪ್ರಮುಖ ಪಾತ್ರವಹಿಸುತ್ತಿದ್ದವು. ಜಾತ್ರೆಯು ಸೇರುವುದಕ್ಕೆ ಮುಖ್ಯವಾದ ಕಾರಣ ಮಾತ್ರ ದೇವಸ್ಥಾನದ ದೇವರ ಉತ್ಸವ ಅಥವಾ ರಥೋತ್ಸವೇ ಆಗಿರುತ್ತಿತ್ತು. ವರ್ಷದಲ್ಲಿ ಒಂದು ನಿರ್ದಿಷ್ಟ ಸಮಯಕ್ಕೆ ಎರೆಡು ದೇವತಾಮೂರ್ತಿಗಳನ್ನು ರಥಗಳ ಮಧ್ಯೆ ಇರಿಸಿ, ನಗರದಲ್ಲಿ ಒಯ್ಯಲಾಗುತ್ತದೆ. ರಥಗಳಲ್ಲಿ ಶ್ರೀಮಂತವಾಗಿ ಅಲಂಕೃತರಾದ ತರುಣಿಯರಿದ್ದು, ದೇವರನಾಮ ಹಾಡುತ್ತಾರೆ. ರಥಗಳನ್ನು ಬೃಹತ್ ಜನಸಮೂಹ ಅನುಸರಿಸುತ್ತದೆ. ಭಕ್ತಿ ಆವೇಶಕ್ಕೊಳಗಾದ ಅನೇಕರು ರಥದ ಚಕ್ರದ ಅಡಿಯಲ್ಲಿ ಸಿಲುಕಿ ತಮ್ಮ ಪ್ರಾಣವನ್ನು ಅರ್ಪಿಸುತ್ತಾರೆ. ಈ ಮಾದರಿಯ ಮೃತ್ಯು ಸ್ವೀಕಾರಾರ್ಹವೆಂದು ಅವರು ಹೇಳುತ್ತಾರೆ. ಇನ್ನೂ ಕೆಲವರು ತಮ್ಮ ಪಕ್ಕೆಯಲ್ಲಿ ತೂತು ಕೊರೆದುಕೊಂಡು ಅದರ ಮೂಲಕ ಹಗ್ಗ ಪೋಣಿಸಿಕೊಂಡು ಅಲಂಕಾರವೆಂಬಂತೆ ರಥಕ್ಕೆ ತೂಗು ಹಾಕಿಕೊಳ್ಳುವರು. ಹೀಗೆ ನೇತಾಡುತ್ತಾ ಮತ್ತು ಅರೆಮೃತ ಸ್ಥಿತಿಯಲ್ಲಿ ತಮ್ಮ ದೇವರ ಮೂರ್ತಿಯೊಂದಿಗೆ ಸಾಗುತ್ತಾರೆ. ಈ ರೀತಿಯ ತ್ಯಾಗ ಅತ್ಯುತ್ತಮ ಮತ್ತು ಎಲ್ಲಕ್ಕಿಂತ ಹೆಚ್ಚು ಸ್ವೀಕೃತವೆಂದು ಅವರು ಪರಿಗಣಿಸುತ್ತಾರೆ ಎಂದು ನಿಕೋಲೊ ಕೊಂಟಿ ತನ್ನ ಪ್ರವಾಸಿ ವರದಿಯಲ್ಲಿ ತಿಳಿಸಿದ್ದಾನೆ.[೧೧೯] ಅಂದರೆ ವಿಜಯನಗರದಲ್ಲಿ ನಡೆಯುತ್ತಿದ್ದ ರಥೋತ್ಸವಗಳು ಬಹುವಿಜೃಂಬಣೆಯಿಂದ ನಡೆಯುತ್ತಿದ್ದವು ಮತ್ತು ಈ ಉತ್ಸವಗಳಲ್ಲಿ ಅಪಾರ ಜನತೆ ಭಾಗವಹಿಸುತ್ತಿತ್ತು ಎಂಬುದನ್ನು ಇಲ್ಲಿ ತಿಳಿಸಲಾಗಿದೆ.

**ಹಬ್ಬಗಳು**

ನಮ್ಮದು ದೇವಾಲಯ ಸಂಸ್ಕೃತಿಯ ನಾಡು. ನಮ್ಮ ಹಿರಿಯರು ತಮಗೆ ವಾಸಿಸಲು ತೀರಾ ಸಾಮಾನ್ಯವಾದ ಮನೆಕಟ್ಟಿಕೊಂಡರೂ ಊರಿನಲ್ಲಿರುವ ದೇವಾಲಯವನ್ನು ಭವ್ಯವಾಗಿ ಕಲಾತ್ಮಕವಾಗಿ ಶ್ರೀಮಂತವಾಗಿ ಕಟ್ಟುತ್ತಿದ್ದರು. ದೇವಲಯಗಳು ಕೇವಲ ಪೂಜಾ ಸ್ಥಾನಗಳಾಗಿರದೆ, ಸಮಗ್ರ ಮಾನವನ ಜೀವನದ ಬಿಂಬಕಗಳಾಗಿದ್ದವು. ಭಾರತೀಯರು ಜೀವನದ ಪ್ರತಿಯೊಂದು ಹಂತದಲ್ಲಿ ಈ ದೇವಾಲಯದೊಂದಿಗೆ ನಂಟನ್ನು ಬೆಳೆಸಿಕೊಂಡಿದ್ದರು. ಬಾಲ್ಯದಲ್ಲಿ ಮಗುವಿನ ವಿದ್ಯಾಭ್ಯಾಸ ಆರಂಭಿಸುವುದರಿಂದ ಹಿಡಿದು, ಹಬ್ಬದ ಸಮಯದಲ್ಲಿ ಜರುಗುತ್ತಿದ್ದ ಧಾರ್ಮಿಕ ಮನೋರಂಜನೆವರೆಗೆ ದೇವಾಲಯಗಳು ಸಮಾಜದಲ್ಲಿ ವಿಶಿಷ್ಮ ಪಾತ್ರವನ್ನು ನಿರ್ವಹಿಸುತ್ತಿದ್ದವು.

ಅಂದರೆ ಹಬ್ಬಗಳು ಮನೆ ಮನೆಗಳಲ್ಲೂ ಆಚರಿಸುವ ಜೊತೆಯಲ್ಲಿ ದೇವಸ್ಥಾನಗಳಲ್ಲಿ ವಿಶೇಷ ಪೂಜೆಗಳನ್ನು ಏರ್ಪಡಿಸುವ ಮುಖೇನ ಹಬ್ಬಾದಿ ಉತ್ಸವಗಳನ್ನು ಆಚರಿಸುತ್ತಿದ್ದರು. ಯಾವುದೋ ಒಂದು ಒಳ್ಳೆಯ ಉದ್ದೇಶದಿಂದ ತಮ್ಮ ಪೂರ್ವಿಕರು ಆಚರಿಸಿಕೊಂಡು ಬಂದಿದ್ದ ಈ ಹಬ್ಬಗಳನ್ನು ಈ ಕಾಲದ ಜನರೂ ಮುಂದುವರಿಸಿದರು. ವ್ಯಕ್ತಿ, ಸ್ವಾರ್ಥವನ್ನು ಸ್ವಲ್ಪಮಟ್ಟಿಗಾದರೂ ಬದಿಗಿರಿಸಿ ಹಬ್ಬಗಳನ್ನು ಆಚರಿಸುವುದರಲ್ಲಿ ಮಗ್ನವಾಗಿರುತ್ತಿದ್ದನು.[೧೨೦] ಹಬ್ಬದ ಸಂದರ್ಭದಲ್ಲಿ ಅನೇಕ ಸಾರ್ವಜನಿಕ

ಶುಭಕಾರ್ಯಗಳು ನಡೆಯಲಿ ಎಂದು ರಾಜರು, ದಾನಿಗಳು ಆಸ್ತಿಕರು ಅನೇಕ ದತ್ತಿಗಳನ್ನು ಬಿಟ್ಟಿದ್ದಾರೆ. ವಿಜಯನಗರದ ದೊರೆಗಳು ದೇವಾಲಯಗಳಲ್ಲಿ ಜರುಗುವ ವಿಶೇಷ ಹಬ್ಬಗಳಲ್ಲಿ ಉತ್ಸವಗಳಿಗಾಗಿ ಮತ್ತು ಪೂಜೆಗಳಿಗಾಗಿ ದತ್ತಿಗಳನ್ನು ನೀಡಿದ್ದಾರೆ.[೧೨೧] ಈ ಕಾಲದಲ್ಲಿ ಹಿಂದೂಗಳಲ್ಲಿ ಆಚರಣೆಯಲ್ಲಿದ್ದ ಹಬ್ಬಗಳ ಆಚರಣೆ ತಿಳಿಯಬೇಕಾದರೆ ಶಾಸನಗಳಲ್ಲಿಗೇ ಮೊರೆ ಹೋಗಬೇಕು. ಶಾಸನಗಳಲ್ಲಿ ದೇವಾಲಯಕ್ಕೆ ಸಂಬಂಧಿಸಿದಂತೆ ಬಿಟ್ಟಿರುವ ಅನೇಕ ದಾನ ಶಾಸನಗಳನ್ನು ಪರಿಶೀಲಿಸಿದರೆ, ನಮ್ಮವರು ಎಷ್ಟೆಷ್ಟು ವಿಧವಾದ ಹಬ್ಬ ಹುಣ್ಣಿಮೆಗಳನ್ನು ಆಚರಿಸುತ್ತಿದ್ದರು ಎಂಬುದರ ಸ್ವರೂಪ ಗೊತ್ತಾಗುತ್ತದೆ.

ಆ ಕಾಲದಲ್ಲಿ ಆಚರಣೆಗೊಳ್ಳುತ್ತಿದ್ದ ಹಬ್ಬಗಳೆಂದರೆ ಕಟಿಹಬ್ಬಿ,[೧೨೨] ದೀಪಾವಳಿ,[೧೨೩] ಕಾರ್ತೀಕ,[೧೨೪] ಶಿವರಾತ್ರಿ ಹಬ್ಬ,[೧೨೫] ತುಡಿಯ ಹಬ್ಬ[೧೨೬] ಎಂಬ ಹಬ್ಬಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಕಾರ್ತೀಕ[೧೨೭] ವಸಂತೋತ್ಸವ,[೧೨೮] ಶಿವರಾತ್ರಿ,[೧೨೯] ಮಹಾನವಮಿ,[೧೩೦] ದೀಪಾವಳಿ[೧೩೧] ಎಂಬ ಹಬ್ಬಗಳು ಸಾಹಿತ್ಯಿಕ ಕೃತಿಗಳಲ್ಲಿ ಉಲ್ಲೇಖಗೊಂಡಿವೆ.

### ಶಿವರಾತ್ರಿ

ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಆಚರಿಸಲ್ಪಡುತ್ತಿದ್ದ ಹಬ್ಬವೆಂದರೆ ಶಿವರಾತ್ರಿ. ಶಿವರಾತ್ರಿ ಹಬ್ಬವು ಶಿವನನ್ನು ಕುರಿತು ಪೂಜೆ ಮಾಡಿ ಆತನನ್ನು ಒಲಿಸಿಕೊಳ್ಳುವ ಹಬ್ಬವೆಂದು ಪ್ರಚಲಿತದಲ್ಲಿದೆ. ಪುರಾಣಗಳು ಶಿವನನ್ನು ಒಲಿಸಿಕೊಂಡ ಹಲವರನ್ನು ಹೆಸರಿಸುತ್ತವೆ ಅವರಲ್ಲಿ ಬೇಡರ ಕಣ್ಣಪ್ಪ ಎಂಬ ಶಿವಭಕ್ತ ಕೂಡ ಒಬ್ಬನಾಗಿದ್ದಾನೆ. ಈತನ ಬಗೆಗಿನ ಹಲವಾರು ಶಿಲ್ಪದೃಶ್ಯಗಳನ್ನು ದೇವಾಲಯಗಳಲ್ಲಿ ಕಾಣಬಹುದು. ವಿಜಯನಗರ ಕಾಲದಲ್ಲಿ ನಿರ್ಮಾಣವಾದ ಬೆಂಗಳೂರಿನ ಅಲಸೂರಿನ ಸೋಮೇಶ್ವರ ದೇವಾಲಯದಲ್ಲಿ ಬೇಡರ ಕಣ್ಣಪ್ಪನು ಶಿವಲಿಂಗವನ್ನು ಪೂಜಿಸುವ ದೃಶ್ಯವನ್ನು ನವರಂಗದ ಕಂಬಗಳಲ್ಲಿ ಕಾಣಬಹುದು. ಇದೇ ರೀತಿಯಲ್ಲಿ ಬಳ್ಳಾರಿ ಜಿಲ್ಲಾ ಹೊಸಪೇಟೆ ತಾಲೂಕು ತಿಮ್ಮಲಾಪುರದ ತ್ರಿಕುಟಾಚಲ ಶಿವ ದೇವಸ್ಥಾನದಲ್ಲಿ ಶಿವನಿಗೆ ತನ್ನ ಕಣ್ಣನ್ನು ಅರ್ಪಿಸುವ ಚಿತ್ರವನ್ನು ಕೆತ್ತಲಾಗಿದೆ.

ಕ್ರಿ.ಶ.೧೫೧೦ರಲ್ಲಿ ಶ್ರೀ ಕೃಷ್ಣ ದೇವರಾಯರು ವಿಜಯನಗರ ರಾಜ್ಯವನ್ನು ಆಳುತ್ತಿರುವ ಕಾಲದಲ್ಲಿ ಶಿವರಾತ್ರಿಯ ಪುಣ್ಯಕಾಲದಲ್ಲಿ ತನಗೆ ಪುಣ್ಯಲಭಿಸಲಿ ಎಂದು ಮೇಲುಕಣ ಗ್ರಾಮವನ್ನು ದಾನ ಬಿಟ್ಟನು. ಶಾಸನವು ಉಲ್ಲೇಖಿಸುವಂತೆ, ಮೇಲುಕಣವೆಂಬ ಗ್ರಾಮವನ್ನು ಬಳ್ಳಾರಿ ಜಿಲ್ಲಾ ಮೋಕಾದ ಮಲ್ಲೇಶ್ವರ ದೇವಸ್ಥಾನಕ್ಕೆ ದಾನ ನೀಡಿದನೆಂದು ಮಾಹಿತಿ ನೀಡುತ್ತದೆ. ಶಿವರಾತ್ರಿಯ ಆಚರಣೆಯು ಮಾಘಬಹುಳದಲ್ಲಿ ಬರುವುದನ್ನು ಶಾಸನದಲ್ಲಿ ತಿಳಿಸಿರುವುದು ಒಂದು ವಿಶೇಷ. ಇದೇ ರೀತಿಯಲ್ಲಿ ಶಿವರಾತ್ರಿಯು ಪುಣ್ಯಕಾಲ ಎಂದು ಹೆಸರಿಸಿರುವುದರಿಂದ ಅದು ಖಂಡಿತವಾಗಿಯೂ ಶಿವರಾತ್ರಿಯಾಗಿರಬೇಕು ಎಂದು ಊಹಿಸಬಹುದಾಗಿದೆ.

ಮಾಘ ಬಹುಳ ತ್ರಯೋದಶಿಯ ದಿನದಂದು ಮಾಹಾಶಿವರಾತ್ರಿಯನ್ನು ಆಚರಿಸುವ ಪದ್ಧತಿಯನ್ನು ಭಾರತೀಯರಲ್ಲಿ ಕಾಣಬಹುದು ಮುಂದೆ ಮೂರು ದಿನಗಳಲ್ಲಿ ಶಿವರಾತ್ರಿಯ ಅಮವಾಸೆ ಬರುವುದು. ಮಹಾಶಿವರಾತ್ರಿಯಂದು ಸಾಮ್ರಾಜ್ಯದಲ್ಲಿ ಬಹಳ ವಿಶೇಷವಾದ ಪೂಜಾದಿ ಉತ್ಸವಗಳನ್ನು ಶಿವನ ದೇವಸ್ಥಾನದಲ್ಲಿ ನಡೆಯುತ್ತವೆ. ಹಲವಾರು ಶಾಸನಗಳು ಇದಕ್ಕೆ ಸಾಕ್ಷಿಯಾಗಿವೆ. ಶಿವರಾತ್ರಿಯ ಪುಣ್ಯಕಾಲದಂದು ದಾನ ಬಿಡುವುದು ರಾಜನಿಗೆ ಶುಭ ಸೂಚನೆಯ ಸಂಕೇತವೆಂದು ತಿಳಿದಿದ್ದರು.

ಕ್ರಿ.ಶ.೧೩೬೪ರಲ್ಲಿ ವಿಜಯನಗರವನ್ನು ವೀರಬುಕ್ಕಣೊಡಯನು ವಿಜಯನಗರವನ್ನು ಆಳುತ್ತಿರಲು ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ತಾಲೂಕಿನ, ಕೋಟೇಶ್ವರದ ಕೋಟೇಶ್ವರ ದೇವರಿಗೆ ಶಿವರಾತ್ರಿಯ ಪೂಜೆಗೆ ದಾನ ನೀಡಿದ್ದನ್ನು ಶಾಸನವು ಉಲ್ಲೇಖಿಸಿದೆ. ಇದರಿಂದಾಗಿ ಶಿವರಾತ್ರಿ ಹಬ್ಬದ ಆಚರಣೆಯು ಆ ದೇವಸ್ಥಾನದಲ್ಲಿ ನಡೆಯುತ್ತಿತ್ತು ಎಂಬುದು ತಿಳಿದುಬರುವುದು. ಅಂದು ನಡೆಯುವ ರಂಗಭೋಗಕ್ಕೂ ವಿಶೇಷ ಪೂಜೆಗಳಿಗೂ, ನಿತ್ಯ ದೀವಿಗೆಗೂ, ದೇವರ ಮಾಲೆಗೂ ಕೂಡಿ ಹನ್ನೆರೆಡು ಹೊನ್ನನ್ನೂ ದಾನ ಮಾಡಿದ್ದನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಶಿವರಾತ್ರಿಯ ಉಲ್ಲೇಖಗಳು ಸಾಹಿತ್ಯಿಕ ಕೃತಿಗಳಲ್ಲೂ ಕಂಡುಬರುತ್ತವೆ. ಸಿದ್ದೇಶ್ವರ ಪುರಾಣದಲ್ಲಿ ಶಿವರಾತ್ರಿಯನ್ನು ಆಚರಿಸುವ ಪದ್ಧತಿಯನ್ನು ವಿವರಿಸಲಾಗಿದೆ. ಶಿವರಾತ್ರಿಯು ಉಪವಾಸ ಮತ್ತು ಜಾಗರಣೆಗೆ ಪ್ರಸಿದ್ಧವಾದ ಹಬ್ಬಗಳೆಂದು ಹೇಳಲಾಗಿದೆ.[೧೩೨] ಹೀಗೆ ವಿಜಯನಗರದ ಕಾಲದಲ್ಲಿ ಶೈವ ದೇವಸ್ಥಾನದಲ್ಲಿ ವಿಶೇಷ ಪೂಜಾದಿ ಉತ್ಸವಗಳು ನಡೆಯುತ್ತಿದ್ದವು ಎಂಬುದನ್ನು ಶಾಸನಗಳು, ಸಾಹಿತ್ಯಿಕ ಕೃತಿಗಳಿಂದ ತಿಳಿದುಬರುತ್ತದೆ.[೧೩೩]

**ದೀಪಾವಳಿ**

ವಿಜಯನಗರ ಕಾಲದಲ್ಲಿ ಆಚರಣೆಗೊಳ್ಳುತ್ತಿದ್ದ ಮತ್ತೊಂದು ಮಹತ್ವದ ಹಬ್ಬವೆಂದರೆ ದೀಪಾವಳಿ. ದೀಪಾವಳಿ ಎಂದರೆ ಹೆಸರಿಗೆ ತಕ್ಕಂತೆ ದೀಪಗಳ ಹಬ್ಬ. ದೀಪಾವಳಿಯು ಅಶ್ವಜಮಾಸದ ತ್ರಯೋದಶಿಗೆ ಪ್ರಾರಂಭವಾಗಿ ಐದು ದಿನಗಳವರೆಗೆ ನಡೆಯುತ್ತದೆ. ಪ್ರತಿ ಮನೆಗಳಲ್ಲಿ ಈ ಹಬ್ಬದ ದಿನದಂದು ದೀಪವನ್ನು ಬೆಳಗಿಸುತ್ತಾರೆ. ದೇವಸ್ಥಾನಗಳಲ್ಲಿ ವಿಶೇಷವಾದ ಪೂಜೆಗಳನ್ನು ಮಾಡಿಸುತ್ತಾರೆ. ವಿಜಯನಗರ ಕಾಲದಲ್ಲಿ ದೀಪಾವಳಿಯ ಹಬ್ಬದಂದು ವಿಶೇಷ ಪೂಜೆಗಾಗಿ ದಾನ ದತ್ತಿಗಳನ್ನು ನೀಡಿರುವುದನ್ನು ಶಾಸನಗಳು ವಿವರಿಸುತ್ತವೆ.[೧೩೪] ಸಾಹಿತ್ಯಿಕ ಕೃತಿಗಳಲ್ಲೂ ದೀಪಾವಳಿಯನ್ನು ಕುರಿತ ಮಾಹಿತಿಗಳು ದೊರೆಯುತ್ತವೆ. ಪ್ರವಾಸಿವರದಿಗಳಲ್ಲಿ ಈ ಹಬ್ಬದ ಉಲ್ಲೇಖಗಳು ದೊರೆಯುತ್ತಿದ್ದು ನಿಕೋಲಕೊಂಟೆ, ಅಬ್ದುಲ್ ರಜಾಕ್, ಡೊಮೆಗೊ ಪಾಯಾಸ್ ಈ ಹಬ್ಬದ ಆಚರಣೆಯನ್ನು ಕುರಿತು ತಮ್ಮ ವರದಿಗಳಲ್ಲಿ ಉಲ್ಲೇಖಿಸಿದ್ದಾರೆ. ಶಾಸನಗಳು ದೀಪಾವಳಿಯ ವಿಶೇಷ ಪೂಜೆಗೆ ದಾನ ಬಿಟ್ಟಿದ್ದನ್ನು ತಿಳಿಸುತ್ತವೆ.

ಕ್ರಿ.ಶ.೧೪೪೨ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ತಾಲೂಕು ಬಸರೂರಿನಲ್ಲಿ ಪ್ರೌಢದೇವರಾಯನು ವಿಜಯನಗರದಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದ ಅವಧಿಯಲ್ಲಿ ಇವರ ಆದೇಶದಂತೆ ಚಂದರಸ

ಒಡೆಯರು ಬಾರಕೂರು ರಾಜ್ಯವನ್ನು ಆಳುವ ಸಮಯದಲ್ಲಿ, ಕೋಟೆಯಣ್ಣ ಸೆಟ್ಟಿಯು ಮಹಾದೇವರ ಸನ್ನಿದಿಗೆ ರುದ್ರಪೂಜೆಗಾಗಿ, ದೀಪಾವಳಿಯ ಹಬ್ಬದಲ್ಲಿನ ರಂಗಪೂಜೆಗೆ ದಾನ ನೀಡಿದ್ದನ್ನು ಉಲ್ಲೇಖಿಸಿದೆ.[೧೩೫] ದೇವಸ್ಥಾನದಲ್ಲಿ ದೀಪಾವಳಿಯ ದಿವಸದಂದು ವಿಶೇಷವಾದ ಪೂಜೆ ನಡೆಯುತ್ತಿತ್ತು ಎಂಬುದನ್ನು ಈ ಶಾಸನವು ನಿರ್ದಿಷ್ಟವಾಗಿ ತಿಳಿಸುತ್ತದೆ.

ಇದೇ ರಾಜನ ಆಳ್ವಿಕೆಯ ಕ್ರಿ.ಶ.೧೪೫೦ರಲ್ಲಿ ದಕ್ಷಿಣ ಕನ್ನಡದ ಮಂಗಳೂರು ತಾಲೂಕಿನ ಬಂಟ್ವಾಳದಲ್ಲಿ ದೀಪಾವಳಿ ಹಬ್ಬದ ಪ್ರಯುಕ್ತ ದಾನ ನೀಡಲಾಗಿದೆ. ಶಾಸನದಲ್ಲಿ ದೇವರ ಹೆಸರು ಅಳಿಸಿ ಹೋಗಿದೆ.[೧೩೬] ದೀಪಾವಳಿಯ ಹಬ್ಬಕ್ಕಾಗಿ ಪೂಜೆಯ ನೈವೇದ್ಯಕ್ಕೆ ನೀಡಿದ ದಾನ ಎಂದು ಉಲ್ಲೇಖಿಗೊಂಡಿರುವುದನ್ನು ಕಾಣಬಹುದು.

ಕ್ರಿ.ಶ.೧೪೭೨ರಲ್ಲಿ ಇದೆ ಬಸರೂರನ್ನು ಬಾರಕೂರಿನ ವಿಠ್ಠರಸ ಒಡೆಯನು ಆಳುತ್ತಿದ್ದನು. ಇದೇ ಅವಧಿಯಲ್ಲಿ ವಿಜಯನಗರದ ಸಿಂಹಾಸನವನ್ನು ವಿರುಪಾಕ್ಷ ಮಹಾರಾಯನು ವಿಜಯನಗರ ಸಾಮ್ರಾಜ್ಯ ನೋಡಿಕೊಳ್ಳುತ್ತಿದ್ದನು. ಆಗ ಪಡುವಣ ಕೇರಿಯ ಶೆಟ್ಟಿಗಳು ಕಾಶಿವಿಶ್ವನಾಥ ದೇವರ ದೀಪಾವಳಿಯ ಹಬ್ಬಕ್ಕೆ ಮತ್ತು ದೀಪಾವಳಿಯ ಹಬ್ಬದಂದು ನಡೆಯುವ ಮೂರು ದಿನದ ರಂಗಪೂಜೆಯನ್ನು ನಡೆಸುವುದಕ್ಕಾಗಿ ದಾನ ನೀಡಿದ್ದನ್ನು ಶಾಸನಗಳು ಉಲ್ಲೇಖಿಸಿವೆ.[೧೩೭]

ಕ್ರಿ.ಶ.೧೪೭೨ರಲ್ಲಿ ಕುಂದಾಪುರ ತಾಲೂಕಿನ ಬಸರೂರಿನಲ್ಲಿ ವಿರೂಪಾಕ್ಷನು ವಿಜಯನಗರವನ್ನು ಆಳುತ್ತಿದ್ದ ಕಾಲದಲ್ಲಿ ವಿಠ್ಠರಸ ಒಡೆಯರು ಬಾರಕೂರನ್ನು ಆಳುವ ಸಂದರ್ಭದಲ್ಲಿ ವಿಶ್ವನಾಥ ದೇವರಿಗೆ ಬಸರೂರಿನ ಪಡುವಣ ಕೇರಿಯ ಹಲವಾರು ಶೆಟ್ಟಿಕಾರರು ದೀಪಾವಳಿ ಹಬ್ಬದ ಮೂರು ದಿನದ ರಂಗಪೂಜೆಯನ್ನು ನೆರವೇರಿಸುದಕ್ಕಾಗಿ ದಾನ ನೀಡಿದ್ದನ್ನು ಶಾಸನ ಉಲ್ಲೇಖಿಸಿದೆ.[೧೩೮]

ಹೀಗೆ ಶಾಸನಗಳು ವಿಜಯನಗರ ಕಾಲದಲ್ಲಿ ನಡೆಯುತ್ತಿದ್ದ ದೀಪಾವಳಿ ಹಬ್ಬನ್ನು ಆಚರಿಸುವುದಕ್ಕೆ ದಾನಬಿಟ್ಟುದ್ದನ್ನು ಉಲ್ಲೇಖಿಸಿವೆ. ಇನ್ನೊಂದು ವಿಶೇಷವೆಂದರೆ, ಆ ಕಾಲದಲ್ಲಿ ದಾನ ನೀಡುವ ಪುಣ್ಯಕಾಲಗಳಲ್ಲಿ ದೀಪಾವಳಿಯು ಒಂದು ಪುಣ್ಯ ಕಾಲವಾಗಿದ್ದು ಅಂದು ದಾನ ನೀಡಿದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಪ್ರವಾಸಿ ವರದಿಗಳು ಕೂಡ ದೀಪಾವಳಿ ಹಬ್ಬದ ಕುರಿತು ವಿವರವಾದ ಮಾಹಿತಿಯನ್ನು ನೀಡುತ್ತವೆ. ವಿಜಯನಗರ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದ 'ನಿಕೋಲೋಕೊಂಟಿ' ತನ್ನ ಪ್ರವಾಸಿವರದಿಯಲ್ಲಿ ವರ್ಷದಲ್ಲಿ ನಾಲ್ಕು ಸಲ ವಿಜಯನಗರದಲ್ಲಿ ವಿಶೇಷ ವೈಭವದ ಉತ್ಸವಗಳನ್ನು ಆಚರಿಸುತ್ತಾರೆ ಎಂದು ಹೇಳಿದ್ದಾನೆ.[೧೩೯] ಇದರಲ್ಲಿ ದೀಪಾವಳಿಯು ಒಂದು ಪ್ರಮುಖವಾದ ಹಬ್ಬವಾಗಿದೆ ಎಂದು ಹೇಳುತ್ತಾನೆ. ದೀಪಾವಳಿಯ ಹಬ್ಬದಂದು ಎಲ್ಲಾ ವಯಸ್ಸಿನ ಪುರುಷ ಸ್ತ್ರೀಯರು ಹೊಸ ಬಟ್ಟೆಯನ್ನು ತೊಡುತ್ತಾರೆ. ಇದೇ ಹಬ್ಬದಲ್ಲಿ ಜನರು ತಮ್ಮ ದೇವಾಲಯಗಳ ಒಳಗೆ ಮತ್ತು ಮಾಳಿಗೆಯ ಮೇಲೆ ಸೂಸಿ ಮಣ್ಣಿನ

ಎಣ್ಣೆಯ ಅಸಂಖ್ಯ ದೀಪಗಳನ್ನು ಹಚ್ಚಿ ಅವುಗಳನ್ನು ಹಗಲೂ ರಾತ್ರಿ ಉರಿಸುತ್ತಾರೆ ಎಂದು ಹೇಳುತ್ತಾನೆ.[೧೪೦]

ಶಾಸನಗಳು ನಿರೂಪಿಸುವಂತೆ ಬಸರೂರಿನ ಮಹಾದೇವರ ದೇವರಿಗೆ ಬಸರೂರು ಕಾಶಿವಿಶ್ವನಾಥ ದೇವಸ್ಥಾನಗಳಿಗೆ ದೀಪಾವಳಿಯಂದು ದಾನ ನೀಡಿರುವುದನ್ನು ಉಲ್ಲೇಖಿಸಲಾಗಿದೆ. ಅಂದಿನ ಕಾಲದಲ್ಲಿ ಶೈವ ದೇವಾಲಯಗಳಲ್ಲಿ ದೀಪಾವಳಿ ಹಬ್ಬವು ಆಚರಣೆಗೊಳ್ಳುತ್ತಿತ್ತು ಎಂಬುದನ್ನು ಇವು ಸ್ಪಷ್ಟವಾಗಿ ನಿರೂಪಿಸುತ್ತಿವೆ. ಆ ಕಾಲದಲ್ಲಿ ವ್ಯಾಪಾರಸ್ಥರು ರಾಜರು ಪ್ರಾಂತೀಯ ಅಧಿಕಾರಿಗಳು ಹಬ್ಬಾದಿ, ಉತ್ಸವಗಳಿಗೆ ದಾನ ಬಿಟ್ಟಿದ್ದನ್ನು ಕಾಣಬಹುದು. ಹೀಗಾಗಿ ವಿಜಯನಗರ ಕಾಲದಲ್ಲಿ ದೀಪಾವಳಿ ಹಬ್ಬವು ತನ್ನದೇ ಆದ ಮಹತ್ವವನ್ನು ಉಳಿಸಿಕೊಂಡಿತ್ತು.

## ಕಟಿಹಬ್ಬ ಮತ್ತು ತುಡಿ ಹಬ್ಬ

ವಿಜಯನಗರ ಕಾಲದ ಶೈವ ದೇವಸ್ಥಾನಗಳಲ್ಲಿ ಆಚರಣೆಗೊಳ್ಳುತ್ತಿದ್ದ ಕಟಿಹಬ್ಬ ಮತ್ತು ತುಟಿಹಬ್ಬ ಎಂಬ ಹಬ್ಬ ಪ್ರಮುಖವಾದವುಗಳು. ಈ ಎರೆಡು ಹಬ್ಬಗಳು ತುಳುನಾಡಿಗೆ ಸಂಬಂಧಿಸಿದ ಹಬ್ಬಗಳಾಗಿದ್ದಿರಬಹುದು. ಈ ಎರೆಡೂ ಹಬ್ಬಗಳು ಸಾಮೂಹಿಕವಾಗಿ ಆಚರಣೆಗೊಳ್ಳುತ್ತಿದ್ದ ಹಬ್ಬಗಳಾಗಿವೆ.[೧೪೧]

ಕ್ರಿ.ಶ.೧೩೭೩ರಲ್ಲಿ ಬುಕ್ಕನ ಆಳ್ವಿಕೆಯ ಕಾಲದಲ್ಲಿ ಗೋಪರ ಒಡೆಯನು ಬಾರಕೂರು ರಾಜ್ಯವನ್ನು ಆಳುತ್ತಿದ್ದ ಸಮಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕೋಟೇಶ್ವರ ದೇವಸ್ಥಾನಕ್ಕೆ ಭೂದಾನವನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ.[೧೪೨] ನಂದಿನಾಥ, ಭೃಂಗನಾಥ, ವೀರಭದ್ರದೇವ ಮತ್ತು ಗಣಕುಮಾರ ಹೆಗ್ಗಡೆ ಎಂಬ ವ್ಯಕ್ತಿಗಳು ಕೋಟೇಶ್ವರದಲ್ಲಿ ಕೆಲವು ಭೂಮಿಗಳನ್ನು ಕ್ರಯಕ್ಕೆ ಕೊಂಡು ಕಾಟಿಯ ಹಬ್ಬದಂದು ಅಲ್ಲಿನ ಕೋಟೇಶ್ವರ ದೇವಾಲಯದಲ್ಲಿನ 'ಉಭಯ ಜಂಗಮರ ಆರೋಗಣೆಗಾಗಿ ದೇವಾಲಯಕ್ಕೆ ದಾನ ನೀಡಿದರು. ಅದನ್ನು ದಿವಾಕರ ಧನಿಯರಿಗೆ ವಹಿಸಿ ಪ್ರತಿವರ್ಷ ಹನ್ನೆರೆಡು ಮೂಟೆ ಅಕ್ಕಿಯನ್ನು ಆರೋಗಣೆಗಾಗಿ ಬಳಸುವಂತೆ ಸೂಚಿಸಿ, ಮೇಲೆ ಬಾರಕೂರು ಗದ್ಯಾಣ ೧೦೦ ಹೊನ್ನುಗಳನ್ನು ನೀಡಲಾಯಿತು. ಇದರಿಂದ ಆ ಕಾಲದ ಹಬ್ಬಗಳಲ್ಲಿ ಕಟಿಯ ಹಬ್ಬವು ಪ್ರಸಿದ್ಧಿ ಪಡೆದ ಹಬ್ಬವಾಗಿ ತುಳು ಪ್ರದೇಶದಲ್ಲಿ ಆಚರಣೆಗೊಳ್ಳುತ್ತಿತ್ತು ಎಂಬುದನ್ನು ತಿಳಿದುಕೊಳ್ಳಬಹುದು.

ತುಳು ಪ್ರದೇಶದಲ್ಲಿ ಆಚರಣೆಗೊಳ್ಳುತ್ತಿದ್ದ ಮತ್ತೊಂದು ಪ್ರಮುಖ ಹಬ್ಬವೆಂದರೆ ತುಡಿಯಹಬ್ಬ. ಈ ಹಬ್ಬವು ಕೂಡ ಸಾಮಾಜಿಕವಾಗಿ ಆಚರಣೆಗೊಳ್ಳುವ ಹಬ್ಬವಾಗಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕೋಟೇಶ್ವರ ಗ್ರಾಮದಲ್ಲಿ ನಡೆಯುವ ಹಬ್ಬಗಳಲ್ಲಿ ಅತ್ಯಂತ ಅಪೂರ್ವವಾದದ್ದು ತುಡಿಯಹಬ್ಬ.

ಕ್ರಿ.ಶ.೧೫೫೦ರ ಕೋಟೇಶ್ವರದ ಶಾಸನವು ಸದಾಶಿವರಾಯನು ವಿಜಯನಗರ ಸಾಮ್ರಾಜ್ಯವನ್ನು ಆಳ್ವಿಕೆ ಮಾಡುವ ಕಾಲದ್ದಾಗಿದೆ. ಈ ಕಾಲದಲ್ಲಿ ಕೋಟೇಶ್ವರವಿರುವ ಬಾರಕೂರು ರಾಜ್ಯವನ್ನು ಏಕದಳಖಾನನೆಂಬ ಮುಸ್ಲಿಂ ರಾಜ್ಯಪಾಲನು ಆಳುತ್ತಿದ್ದನು. ತುಡಿಯ ಹಬ್ಬ ಆಚರಣೆಗೊಳ್ಳುತ್ತಿದ್ದ ಸಮಯದಲ್ಲಿ ಬ್ರಾಹ್ಮಣರಿಗೂ ಮತ್ತು ಶೂದ್ರರಿಗೂ ವಿವಾದ ಉಂಟಾಗಿ ಬ್ರಾಹ್ಮಣರು ಶೂದ್ರರು ಹೆಣಗಳು ದೇವಾಲಯದ ಆವರಣದೊಳಗೆ ಬಿದ್ದುಬಿಟ್ಟವು. ಇದೇ ಸಮಯದಲ್ಲಿ ಗೋಹತ್ಯೆಯಂತಹ ಪಾಪ ಕಾರ್ಯವೂ ನಡೆಯಿತು. ಇದು ಬ್ರಾಹ್ಮಣರ ಮತ್ತು ಶೂದ್ರರ ನಡುವೆ ಧಾರ್ಮಿಕ ಕಾರ್ಯದಲ್ಲಿ ಭಾಗವಹಿಸುವ ಕುರಿತಾಗಿ ನಡೆದ ಗಲಭೆಯಾಗಿರಬಹುದು.[೧೪೪] ಪರಿಣಾಮವಾಗಿ ದೇವಾಲಯದ ಬಾಗಿಲು ಮುಚ್ಚಿ ಆರು ತಿಂಗಳ ಕಾಲ ಕೋಟೇಶ್ವರ ದೇವಸ್ಥಾನದಲ್ಲಿ ಪೂಜೆ ಪುನಸ್ಕಾರಗಳು ಸ್ಥಗಿತಗೊಂಡಿದ್ದವು. ಇದು ರಾಜನಿಗೆ ತಿಳಿಯಲಾಗಿ ಆತನು ತನ್ನ ರಾಜ್ಯಪಾಲ ಏಕದಳಖಾನ ಒಡೆಯನ ಮುಖೇನ ಕೋಟೇಶ್ವರ ದೇವಾಲಯದ ಶುದ್ಧಿಕರಣ ಮಾಡಿಸಿದನು ಹಾಗೂ ಕೋಟೇಶ್ವರ ದೇವರಿಗೆ ಪೂಜೆ ನೆರವೇರುವಂತೆ ಮಾಡಿ ಮುವ್ವತ್ತೈದು ವರಹಗಳನ್ನು ಹುದರುಹಳ್ಳಿಯ ಗ್ರಾಮದಿಂದ ಬರಬೇಕಾದ ತೆರಿಗೆಯನ್ನು ದೇವಸ್ಥಾನಕ್ಕೆ ಕಾಣಿಕೆಯಾಗಿ ನೀಡಿದನು.[೧೪೫] ಆಡಳಿತ ಅಧಿಕಾರಿಯು ಅನ್ಯ ಧರ್ಮದವನಾದರೂ ಹಿಂದೂಗಳ ನಡುವೆ ನಡೆದ ಕೋಟೇಶ್ವರ ದೇವಸ್ಥಾನದಲ್ಲಿನ ಧಾರ್ಮಿಕ ದೊಂಬಿಯಿಂದುಂಟಾದ ಪರಿಣಾಮವನ್ನು ಹೋಗಲಾಡಿಸಿದ್ದು, ವಿಜಯನಗರ ಇತಿಹಾಸದಲ್ಲೊಂದು ಮೈಲುಗಲ್ಲೆಂದು ಹೇಳಬಹುದು. ಬಾರಕೂರು ರಾಜ್ಯವನ್ನು ಆಳಿದ ಏಕಮಾತ್ರ ಮುಸ್ಲಿಂ ಅಧಿಕಾರಿ ಏಕದಖಾನ ಒಡೆಯನಾಗಿದ್ದಾನೆ.[೧೪೬] ತುಡಿಯ ಹಬ್ಬದಲ್ಲಿ ಸಾರ್ವಜನಿಕರೆಲ್ಲರೂ ಭಾಗವಹಿಸುವ ಹಬ್ಬವಾಗಿರಬೇಕೆಂದು ಇದರಿಂದ ಊಹಿಸಲು ಅವಕಾಶವಿದೆ. ಅದಕ್ಕೆ ತಡೆ ಉಂಟಾದರಿಂದಲೇ, ಬ್ರಾಹ್ಮಣರು ಮತ್ತು ಶೂದ್ರರ ನಡುವೆ ಜಗಳವಾಗಿರಬೇಕು. ಒಟ್ಟಾರೆ ತುಡಿ ಹಬ್ಬವು ವಿಜಯನಗರ ಕಾಲದಲ್ಲಿ ತುಳು ನಾಡಿನಲ್ಲಿ ಆಚರಣೆಗೊಳ್ಳುತ್ತಿದ್ದ ಒಂದು ಪ್ರಮುಖ ಹಬ್ಬವಾಗಿತ್ತು ಎನ್ನುವುದು ಖಚಿತವಾದದ್ದು. ತುಡಿಯ ಹಬ್ಬ ಎಂದರೆ "ಕಾರ್ತಿಕ ಮಾಸದ ದೀಪೋತ್ಸವ.[೧೪೭] ಇದರೊಂದಿಗೆ ಕೆಲವು ವಿಶಿಷ್ಟವಾದ ತುಳುನಾಡಿನ ಪೂಜೆಗಳು ಸೇರಿ ತುಡಿ ಹಬ್ಬವನ್ನು ಆಚರಿಸಲಾಗುತ್ತಿದೆ. ತುಳುನಾಡಿನಲ್ಲಿ ಈ ಹಬ್ಬಕ್ಕೆ ತುಡಿ ಹಬ್ಬ ಎಂದು ಕರೆಯಲಾಗುತ್ತದೆ.

## ಪಂಚ ಪರ್ವ

ಶಾಸನಗಳಲ್ಲಿ ಕಾಣಿಸಿಕೊಳ್ಳುವಂತೆ ಪರ್ವು ಎಂಬ ಹಬ್ಬ ವಿಜಯನಗರ ಕಾಲದ ದೇವಸ್ಥಾನದಲ್ಲಿ ಆಚರಣೆಗೊಳ್ಳುತ್ತಿತ್ತು. "ಪರ್ವ" ಎಂಬ ಶಬ್ದ ಕ್ರಿ.ಶ.೧೧೪೮ರ ಶಾಸನದಲ್ಲಿ ಕಾಣಿಸಿಕೊಳ್ಳುತ್ತದೆ.[೧೪೮] ಪರ್ವ ಎಂಬ ಶಬ್ದ ಸಂಸ್ಕೃತ ಮೂಲದ್ದು. ಇದು ಕನ್ನಡದಲ್ಲಿ "ಪರವ್ವ", ಎಂದು ಕರೆಸಿಕೊಳ್ಳುತ್ತದೆ.[೧೪೯] ಆದರೆ ವಿಜಯನಗರ ಕಾಲದ ಶಾಸನಗಳಲ್ಲಿ ಪಂಚ ಪರ್ವ ಎಂಬ ಹೆಸರಿನಿಂದ ಈ ಹಬ್ಬವನ್ನು ಕರೆಯಲಾಗುತ್ತಿತ್ತು. ಈ ಪರ್ವವನ್ನು ಗ್ರಾಮದ ಜನರೆಲ್ಲರೂ ಸೇರಿ ಧನ ಧಾನ್ಯವನ್ನು ಜನರಿಂದ

ಸಂಗ್ರಹಿಸಿ, ದೇವಸ್ಥಾನವನ್ನು ಸಾವಿರಾರು ಕೊಡ ನೀರಿನಿಂದ ಶುಭ್ರಗೊಳಿಸಿದ ಮೇಲೆ ಸಂಗ್ರಹಿಸಿದ ಧಾನ್ಯದಿಂದ ಅಡುಗೆ ಮಾಡಿ ದೇವರಿಗೆ ನೈವೇದ್ಯ ಮಾಡುತ್ತಾರೆ. ಕೊನೆಯಲ್ಲಿ ಗ್ರಾಮಸ್ಥರೆಲ್ಲ ಸೇರಿ ಸಹಭೋಜನ ಮಾಡುವುದರ ಮುಖೇನ ಪರ್ವ ಕಾರ್ಯಕ್ರಮಗಳು ಕೊನೆಗೊಳ್ಳುತ್ತವೆ. ಈ ಪರ್ವಕ್ಕಾಗಿ ಅನೇಕರು ದಾನ ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸಿವೆ. ಕ್ರಿ.ಶ. ೧೫೧೩ರ ಹಂಪೆಯ ಶಾಸನವೊಂದು ಪಂಚಪರ್ವವನ್ನು ಉಲ್ಲೇಖಿಸಿದೆ. ಕೃಷ್ಣದೇವರಾಯನ ಆಳ್ವಿಕೆಯ ಕಾಲದ ಶಾಸನ ನಿರೂಪಿಸುವಂತೆ ಪ್ರಸನ್ನ ವಿರುಪಾಕ್ಷ ದೇವರ ಅಮೃತಪಡಿ ನೈವೇದ್ಯ ಅಂಗಭೋಗ ರಂಗಭೋಗಕ್ಕೆ ನಿತ್ಯ ನೈಪಿತ್ಯ ದೀಪಾರಾಧನೆ ಮತ್ತು "ಪಂಚಪರ್ವ" ಮೊದಲಾದ ಪುಣ್ಯ ಕಾಲಗಳಲ್ಲಿ ಮಾಡುವ ಮಹಾ ಪೂಜೆಗೆ, ನೈವೇದ್ಯಕ್ಕೆ ಗ್ರಾಮವನ್ನು ದತ್ತಿ ಬಿಡಲಾಗಿದೆ.[೧೫೦] ಗ್ರಾಮದ ಹೆಸರನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಹಂಪೆಯ ಪ್ರಸನ್ನ ವಿರುಪಾಕ್ಷ ದೇವಸ್ಥಾನದಲ್ಲಿ ಜಲಾವೃತವಾಗಿರುವ ನೆಲಮಟ್ಟದ ದೇವಾಲಯದಲ್ಲಿ ಪ್ರತಿವರ್ಷ ಪಂಚಪರ್ವವನ್ನು ಆಚರಿಸಲಾಗುತ್ತಿತ್ತು ಎಂಬುದನ್ನು ಶಾಸನವು ತಿಳಿಸುತ್ತದೆ. ಕೃಷ್ಣದೇವರಾಯನು ಪಂಚಪರ್ವ ನಡೆಯುವುದಕ್ಕೆ ದಾನವನ್ನು ನೀಡುವ ಮುಖೇನ ಈ ಆಚರಣೆಯು ಆಚಂದ್ರಕಾನವಾಗಿ ನಡೆಯುವಂತೆ ದಾನ ನೀಡಿದನ್ನು ಶಾಸನವು ಉಲ್ಲೇಖಿಸಿದೆ. ಕೃಷ್ಣದೇವರಾಯನ ಕಾಲದಲ್ಲೆ ಹಂಪೆಯ ಅಧಿದೈವವಾದ ಶ್ರೀ ವಿರುಪಾಕ್ಷ ದೇವಸ್ಥಾನದಲ್ಲಿ ಕ್ರಿ.ಶ.೧೫೧೩ನೇ ದಿನಾಂಕದಂದು ಹುಟ್ಟಿದ ಶಾಸನವು ನಿರೂಪಿಸುವಂತೆ ರಾಜರು ಅಮೃತಪಡಿ, ನೈವೇದ್ಯ ಅಂಗರಂಗ ವೈಭೋಗ ಮಕರ ಸಂಕ್ರಾಂತಿಯ ರಥೋತ್ಸವ, ದೀಪಾರಾಧನೆ ಮತ್ತು ಪಂಚಪರ್ವ ಮೊದಲಾದ ಪುಣ್ಯ ಪೂಜಾ ಕಾರ್ಯಗಳಿಗೂ ಒಟ್ಟು ಹದಿನೇಳು ಗ್ರಾಮಗಳನ್ನು ದಾನ ಬಿಟ್ಟಿರುವುದನ್ನು ಶಾಸನವು ಉಲ್ಲೇಖಿಸುತ್ತದೆ.[೧೫೧] ಕೃಷ್ಣದೇವರಾಯರು ತಮ್ಮ ತಂದೆ ತಾಯಿಯರಿಗೆ ಪುಣ್ಯವಾಗಲೆಂದು ಈ ದಾನವನ್ನು ನೀಡಿರುತ್ತಾರೆ. ವಿಜಯನಗರ ಕಾಲದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದ ವಿರೂಪಾಕ್ಷ ದೇವಸ್ಥಾನದಲ್ಲೂ ಪಂಚಪರ್ವದ ಆಚರಣೆ ಇದ್ದುದ್ದನ್ನು ಶಾಸನವು ತಿಳಿಸುತ್ತದೆ. ಕ್ರಿ.ಶ. ೧೫೫೨ರಲ್ಲಿ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಆದವಾನಿ ರಾಜ್ಯಾಪಾಲನಾದ ಸುಂಕದ ಬನದರಸರ ಮಗನಾದ ಕರಿಬೇಡ ಸಂಕರಸನು ಕಂಪ್ಲಿಯ ಮಾಗಾಣಿಯಲ್ಲಿರುವ ಪಂಪಾವಿರೂಪಾಕ್ಷ ದೇವರ ಗುಡಿಯಲ್ಲಿ ಒಂದು ಅಂಕಣ ಕಲ್ಲು ಮಾಳಿಗೆಯನ್ನು ಕಟ್ಟಿಸಿ ಹಂಪಾ ದೇವಿಯನ್ನು ಪ್ರತಿಷ್ಠೆ ಮಾಡಿದ. ವಿವಿಧ ದಾನಗಳನ್ನು ಈ ದೇವಸ್ಥಾನಕ್ಕೆ ನೀಡಲಾಗಿದೆ. ಕಾರ್ತಿಕ ದೀಪಾರಾಧನೆ, ಪಂಚಪರ್ವ ಮುಂತಾದ ದೇವತಾ ಕಾರ್ಯಗಳಿಗೆ ದಾನ ನೀಡಿರುವುದನ್ನು ಶಾಸನವು ಉಲ್ಲೇಖಿಸುತ್ತದೆ.[೧೫೨] ಕಂಪಲಿಯಲ್ಲಿ ಪಂಪಾಪತಿ ದೇವಸ್ಥಾನದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದ ಹಬ್ಬಗಳಲ್ಲಿ "ಪಂಚಪರ್ವವು" ಒಂದು ಹಬ್ಬವಾಗಿದೆ.

ಹೀಗೆ ಪಂಚ ಪರ್ವವು ವಿಜಯನಗರ ಕಾಲದ ಶೈವ ದೇವಸ್ಥಾನಗಳಲ್ಲಿ ವಿಶಿಷ್ಟವಾಗಿ ಆಚರಣೆಗೊಳ್ಳುತ್ತಿದ್ದ ಒಂದು ಪ್ರಸಿದ್ಧವಾದ ಹಬ್ಬವಾಗಿದೆ. ಊರಿನ ಜನರೆಲ್ಲ ಸೇರಿ ಈ ಹಬ್ಬನ್ನು ಆಚರಿಸುತ್ತಿದ್ದರು.

ಮುಖ್ಯವಾಗಿ ಊರಿನ ಮುಖ್ಯಸ್ಥರಾದ ಪಂಚಮರು ಈ ಪರ್ವದ ಉಸ್ತುವಾರಿ ವಹಿಸಿಕೊಳ್ಳುತ್ತಿದ್ದರಿಂದ ಈ ಹಬ್ಬಕ್ಕೆ ಪಂಚಪರ್ವ ಎಂದು ಹೆಸರು ಬಂದಿರಬಹುದು. ಸಮಾಜದಲ್ಲಿ ಬಡವ ಬಲ್ಲಿದ ಎಂಬ ಭೇದ ಭಾವ ಮರೆತು ಸಹಭೋಜನವನ್ನು ಮಾಡುವ ಮುಖೇನ ಸಾಮ್ರಾಜ್ಯ ಎಲ್ಲಾ ಪ್ರಜೆಗಳು ಸಮಾನರು ಎಂದು ಪರಿಗಣಿಸಿ ಪಂಚಪರ್ವ ಅಂದಿನ ಕಾಲದಲ್ಲಿ ಕೆಲಸ ಮಾಡುತ್ತಿತ್ತು ಎಂಬುದು ಗಮನಿಸಬೇಕಾದ ಅಂಶವಾಗಿದೆ. ವಿಜಯನಗರದ ಶೈವ ದೇವಸ್ಥಾನಗಳಲ್ಲಿ ಆಚರಣೆಗೊಳ್ಳುವ ವಿಶೇಷ ಹಬ್ಬ ಈ ಪಂಚಪರ್ವ.

## ಮಹಾನವಮಿ

ವಿಜಯನಗರ ಕಾಲದಲ್ಲಿ ಆಚರಣೆಗೊಳ್ಳುತ್ತಿದ್ದ ಹಬ್ಬಗಳಲ್ಲಿ ಮಹಾನವಮಿಯ ಒಂದು ಆಶ್ವೀಜಮಾಸದಲ್ಲಿ ಬರುವ ನವರಾತ್ರಿ ಅಥವಾ ದಸರಾ ಹಿಂದೂಗಳಲ್ಲಿ ಬಹುದೊಡ್ಡ ಹಬ್ಬ.[೧೫೩] ದಸರಾ ಹಬ್ಬವನ್ನು ಬಹು ವಿಜೃಂಭಣೆಯಿಂದ ವಿಜಯನಗರ ಕಾಲದಲ್ಲಿ ಆಚರಿಸಲಾಗುತ್ತಿತ್ತು. ವಿಜಯನಗರದ ರಾಜರು, ಸಾಮಂತರು, ಅಧಿಕಾರಿಗಳು, ದೇವಾಲಯದಲ್ಲಿ ಜರುಗುವ ಮಹಾನವಮಿ ಹಬ್ಬಕ್ಕೆ ದಾನ, ದತ್ತಿಗಳನ್ನು ಬಿಟ್ಟಿದ್ದಾರೆ. ಇದನ್ನು ಶಾಸನಗಳು ವಿದೇಶಿಯರ ವರದಿಗಳು ಹಾಗೂ ಸಾಹಿತ್ಯಿಕ ಕೃತಿಗಳು ಉಲ್ಲೇಖಿಸಿವೆ. ವಿಜಯನಗರದ ಆಳ್ವಿಕೆಯ ನಂತರ ಮೈಸೂರು ಅರಸರು ದಸರಾ ಹಬ್ಬವನ್ನು ಮುಂದುವರಿಸಿದರು. ವಿಜಯನಗರ ಕಾಲದಲ್ಲಿ ಮಹಾನವಮಿ ಹಬ್ಬವು ನಾಡ ಹಬ್ಬವಾಗಿ ವೈಭವದಿಂದ ಆಚರಣೆಗೊಳ್ಳುತ್ತಿತ್ತು. ಇಂದಿಗೂ ಹಂಪೆಯಲ್ಲಿ ಉಳಿದುಬಂದಿರುವ ಮಹಾನವಮಿ ದಿಬ್ಬವು ಎತ್ತರದ ಚೌಕಾಕಾರದ ಪ್ರಾಂಗಣವನ್ನು ಹೊಂದಿದೆ. ಇದು ನವರಾತ್ರಿ ಉತ್ಸವದ ಕೇಂದ್ರವಾಗಿತ್ತು. ಇಂದಿಗೂ ಈ ಕಟ್ಟೆಯನ್ನು ಮಹಾನವಮಿ ದಿಬ್ಬವೆಂದೇ ಕರೆಯಲಾಗುತ್ತಿದೆ.

ವಿದೇಶಿಯ ಪ್ರವಾಸಿಯಾದ ನಿಕೋಲೊಕೊಂಟಿ ಹೇಳುವಂತೆ ವರ್ಷದಲ್ಲಿ ಆಚರಿಸಲ್ಪಡುವುದು ನಾಲ್ಕು ಪ್ರಮುಖ ಹಬ್ಬವೆಂದು ಹೇಳುತ್ತಾನೆ. ಅದರಲ್ಲಿ ಮಹಾನವಮಿ ಹಬ್ಬವು ಒಟ್ಟು ಒಂಬತ್ತು ದಿನಗಳವರೆಗೆ ನಡೆಯುತ್ತದೆ ಎಂದು ತಿಳಿಸಿದ್ದಾನೆ.[೧೫೪] ಸಾಲತೊರೆಯವರು ಹೇಳುವಂತೆ ಈ ಹಬ್ಬಕ್ಕೆ ಧಾರ್ಮಿಕ ವಾತಾವರಣವಿದ್ದರೂ ರಾಜಕೀಯ ಮಹತ್ವವಿತ್ತು.[೧೫೫] ಅಬ್ದುಲ್ ರಜಾಕನು ಈ ಉತ್ಸವವು ವಿಜಯನಗರದಲ್ಲಿ ಮೂರು ದಿನಗಳ ಕಾಲ ನಡೆಯುತ್ತಿತ್ತೆಂದು ಹೇಳಿದ್ದಾನೆ.[೧೫೬] ಆದರೆ ವಿದೇಶಿಯ ಪ್ರವಾಸಿಗಳಾದ ಪೇಸ್ ಮತ್ತು ನ್ಯೂನೀಚ್ ರು ಈ ನವರಾತ್ರಿ ಹಬ್ಬವು ಒಂಬತ್ತು ದಿನಗಳ ಹಬ್ಬವಾಗಿತ್ತು. ಪ್ರತಿಯೊಂದು ದಿನವೂ ಪೂಜಾದಿ ಉತ್ಸವಗಳು ಪ್ರದರ್ಶನಗಳು ಸಭೆ ಸಮಾರಂಭಗಳು ನಡೆಯುತ್ತಿದ್ದವು ಎಂದು ತಿಳಿಸಲಾಗಿದೆ.[೧೫೭] ರತ್ನಾಕರವರ್ಣಿ ನವರಾತ್ರಿ ಹಬ್ಬದ ಸೊಗಸನ್ನು ತನ್ನ ಕಾವ್ಯದಲ್ಲಿ ವಿಸ್ತಾರವಾಗಿ ಹೇಳಿದ್ದಾನೆ.

ಕ್ರಿ.ಶ.೧೫೫೨ರ ಸದಾಶಿವರಾಯನ ಕಾಲದ ಕಂಪ್ಲಿಯ ಶಾಸನವು ನವರಾತ್ರಿಯ ವಿಶೇಷ ಪೂಜೆಗೆ ದಾನ ನೀಡಿದ್ದನ್ನು ಉಲ್ಲೇಖಿಸಲಾಗಿದೆ.[೧೫೮] ಇದು ಅಂದಿನ ಕಾಲದ ಶಿವಾಲಯಗಳಲ್ಲಿ ವಿಶೇಷ ಪೂಜೆಗಳು ನವರಾತ್ರಿಯ ಕಾಲದಲ್ಲಿ ನಡೆಯುತ್ತಿದ್ದವು ಎಂಬುದನ್ನು ತಿಳಿಸಲಾಗಿದೆ.

ಹೀಗೆ ನವರಾತ್ರಿಯು ವಿಜಯನಗರದ ಕಾಲದಲ್ಲಿ ಪ್ರಾಮುಖ್ಯತೆಯನ್ನು ಹೊಂದಿದ ಪ್ರಮುಖ ಹಬ್ಬಗಳಲ್ಲಿ ಮಹಾನವಮಿ ಹಬ್ಬವು ಒಂದಾಗಿತ್ತು ಎಂಬುದನ್ನು ಈ ಶಾಸನಗಳು ವಿದೇಶಿಯ ಪ್ರವಾಸಿಗಳ ವರದಿಗಳಿಂದ ತಿಳಿದುಬರುತ್ತದೆ. ಮಹಾನವಮಿ ದಿಬ್ಬವಂತು ಗತಕಾಲದ ವೈಭವವನ್ನು ಸಾಕ್ಷೀಕರಿಸುವಂತೆ ಇಂದಿಗೂ ಹಂಪೆಯಲ್ಲಿ ಸ್ಮಾರಕವಾಗಿ ನಿಂತಿದೆ.

**ಹೋಳಿಹಬ್ಬ**

ವಿಜಯನಗರ ಕಾಲದಲ್ಲಿ ಆಚರಿಸಲ್ಪಡುತ್ತಿದ್ದ ಮತ್ತೊಂದು ಪ್ರಮುಖ ಹಬ್ಬವೆಂದರೆ ಹೋಳಿಹಬ್ಬ. ಇತಿಹಾಸ ರಚನೆಯ ಎಲ್ಲಾ ಆಕರಗಳಲ್ಲೂ ಈ ಹಬ್ಬದ ಬಗೆಗಿನ ಉಲ್ಲೇಖಗಳು ದೊರೆಯುತ್ತವೆ. ಭಾರತದ ಅನೇಕ ಭಾಗಗಳಲ್ಲಿ ಹೋಳಿ ಹಬ್ಬದ ಆಚರಣೆ ಇತ್ತು. ಸೂರತ್ತಿನಲ್ಲಿ ಹೋಳಿಹಬ್ಬವನ್ನು ಆಚರಿಸುತ್ತಿತ್ತು ಎಂದು ಪಿಯಟ್ರೊ-ಡೆಲ್ಲ-ವಲ್ಲೆ ವಿವರಿಸುತ್ತಾರೆ.[೧೫೯] ಬಹುಹಿಂದಿನಿಂದಲೂ ಭಾರತದಲ್ಲಿ ಈ ಹಬ್ಬವು ಆಚರಣೆಯಲ್ಲಿತ್ತು ಎಂಬುದಕ್ಕೆ ಶಾಸನ ಆಧಾರಗಳಿವೆ.[೧೬೦]

ನಮ್ಮ ನಾಡಿನಲ್ಲಿ ಆಚರಣೆಗೊಳ್ಳುವ ಸಾಮೂಹಿಕ ಹಬ್ಬವೆಂದರೆ ಹೋಳಿಹಬ್ಬ ಈ ಹಬ್ಬಕ್ಕೆ ಪೌರಾಣಿಕ ಪರಂಪರೆಯೂ ಇದೆ. ಐತಿಹಾಸಿಕ ಪರಂಪರೆಯೂ ಇದೆ. ವಿಜಯನಗರ ಕಾಲದಲ್ಲಿ ಈ ಹಬ್ಬಕ್ಕೆ ವಿಶೇಷ ಪ್ರಶಾಸ್ತ್ಯವಿದ್ದಿತೆಂಬುದಕ್ಕೆ ಐತಿಹಾಸಿಕ ಪ್ರಮಾಣಗಳಿವೆ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಪೋರ್ಚುಗೀಸ್ ರಾಯಭಾರಿಯಾಗಿ ಬಂದಿದ್ದ ಡಾಮಿಂಗೊ ಪಯಾಸ್ ವಿಜಯನಗರದ ರಾಜನಾದ ಕೃಷ್ಣದೇವರಾಯನು ಈ ಹಬ್ಬದ ಓಕುಳಿಯಾಟದಲ್ಲಿ ಭಾಗವಹಿಸುತ್ತಿದ್ದನೆಂಬ ಸಂಗತಿಯನ್ನು ವರದಿಯಲ್ಲಿ ತಿಳಿಸಿದ್ದಾನೆ.[೧೬೧]

ಭಾರತದಾದ್ಯಂತ ಆಚರಣೆಗೊಳ್ಳುವ ಈ ಹಬ್ಬಕ್ಕೆ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಈ ಹಬ್ಬಕ್ಕೆ ಕಾಮನಹಬ್ಬ, ಕಾಮನ ಹುಣ್ಣಿಮೆ, ಹೋಳಿ ಹುಣ್ಣಿಮೆ,[೧೬೨] ವಸಂತನ ಹಬ್ಬ,[೧೬೩] ಬಸಂತನ ಹಬ್ಬ,[೧೬೪] ವಸಂತೋತ್ಸವ ಎಂಬ ಅನೇಕ ಹೆಸರುಗಳಿಂದ ಕರೆಸಿಕೊಳ್ಳುತ್ತದೆ.

ಈ ಹಬ್ಬವನ್ನು ಶೈವದೇವಸ್ಥಾನದಲ್ಲಿ ಆಚರಿಸಲಾಗುತ್ತಿತ್ತು ಎಂಬುದಕ್ಕೆ ಶಾಸನಗಳು ಉಲ್ಲೇಖಿಸುತ್ತವೆ. ವಿಜಯನಗರದಲ್ಲಿ ಆಚರಣೆಗೊಳ್ಳುವ ಹಬ್ಬಗಳಲ್ಲಿ ದಸರಾವನ್ನು ಬಿಟ್ಟರೆ ಇದು ಎರಡನೆಯ ದೊಡ್ಡ ಹಬ್ಬವಾಗಿದೆ.

ನಿಕೊಲೊಕೊಂಟಿ ವಿಜಯನಗರ ಒಂದು ಹಬ್ಬದಲ್ಲಿ ರಾಜರಾಣಿಯರೂ ಸೇರಿದಂತೆ ಎಲ್ಲ ದಾರಿಹೋಕರ ಮೇಲೆ ಆ ಉದ್ದೇಶಕ್ಕಾಗಿಯೇ ರಸ್ತೆ ಬದಿಯಲ್ಲಿ ಇರಿಸಿದ ಕೆಸರು ನೀರನ್ನು ಸಿಂಪಡಿಸುತ್ತಾರೆ. ಇದನ್ನು ಎಲ್ಲರೂ ಬಹಳ ನಗೆಯೊಂದಿಗೆ ಸ್ವೀಕರಿಸುತ್ತಾರೆ ಎಂದು ಹೇಳುತ್ತಾನೆ.[೧೬]

ಹೀಗೆ ವಿಜಯನಗರದಲ್ಲಿ ನಡೆಯುತ್ತಿದ್ದ ವಸಂತೋತ್ಸವವನ್ನು ಕನಕದಾಸರು ತಮ್ಮ ಕೃತಿ ಮೋಹನ ತರಂಗಿಣಿಯಲ್ಲಿ ಒಂದು ಪ್ರಕರಣದಲ್ಲಿ ವರ್ಣಿಸಿರುವರು.[೧೬] ಈ ರೀತಿಯಲ್ಲಿ ವಿಜಯನಗರದಲ್ಲಿ ತುಂಬ ವೈಭವದಿಂದ ಹೋಳಿ ಹಬ್ಬವು ಆಚರಣೆಗೊಳ್ಳುತ್ತಿತ್ತು ಎಂಬುದನ್ನು ತಿಳಿದುಕೊಳ್ಳಬಹುದು.

**ಅಡಿಟಿಪ್ಪಣಿಗಳು**

೧. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ೧೯೮೬, ಪು.೨೦೫

೨. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ,** ಡಿ.ವಿ.ಕೆ.ಮೂರ್ತಿ, ಬೆಂಗಳೂರು, ಪು.೨೧೮

೩. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೦೭

೪. ಹಿರೇಮಠ ಎಸ್.ಎಸ್., **ಪಾಶುಪತ ದರ್ಶನ,** ಸಮತಾ ಪ್ರಕಾಶನ, ಹರಪನಹಳ್ಳಿ, ೨೦೦೩, ಪು.೫೨

೫. SII, Vol.IX, Part I, No.137

೬. ಹಿರೇಮಠ ಎಸ್.ಎಸ್., ಪೂರ್ವೋಕ್ತ, ಪು.೫೩

೭. ತಿಪ್ಪೇರುದ್ರಸ್ವಾಮಿ ಎಚ್., ಪೂರ್ವೋಕ್ತ, ಪು.೨೩೧

೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೮೯

೯. ಬಸವರಾಜ ಮಲಶೆಟ್ಟಿ(ಸಂ), ಎನೆಗಿಂತ **ಕಿರಿಯರಿಲ್ಲ,** ಸಿ.ಟಿ.ಎಂ.ಕೊಟ್ರಯ್ಯ, *ಹಂಪೆಯಲ್ಲಿ ವೀರಶೈವ ಪ್ರಾಚೀನ ಕುರುಹುಗಳು,* ೧೯೯೮, ಪು.೨೭೭

೧೦. Vijayanaraja Progress of Research 1985, Mysore, P.23

೧೧. ಬಸವರಾಜ ಮಲಶೆಟ್ಟಿ, ಪೂರ್ವೋಕ್ತ, ಪು.೨೭೮

೧೨. ಬಸಪ್ಪ ಸಿ.(ಸಂ), **ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ,** ಮೈಸೂರು, ೧೯೬೦, ಪು.೪೩೪

೧೩. ಬಸವರಾಜ ಮಲಶೆಟ್ಟಿ, ಪೂರ್ವೋಕ್ತ, ಪು.೨೮೦

೧೪. ತಿಪ್ಪೇರುದ್ರಸ್ವಾಮಿ ಎಚ್., ಪೂರ್ವೋಕ್ತ, ಪು.೨೨೪

೧೫. Jevoor S.V., History of Education in Karnataka

೧೬. ವೆಂಕಟರತ್ನಂ ಎ.ವಿ., **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೫೨

೧೭. MAR, 1928, No.113

೧೮. SII, IX(ii), No.514, ಕ್ರಿ.ಶ.೧೫೪೯

೧೯. ದೇಸಾಯಿ ಪಿ.ಬಿ., **ಕನ್ನಡ ನಾಡಿನ ಚರಿತ್ರೆ ಭಾಗ ೧,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು.

೨೦. ವೆಂಕಟರತ್ನಂ ಎ.ವಿ., ಪೂರ್ವೋಕ್ತ, ಪು.೨೯

೨೧. SII, IX(ii), No.457, ಕ್ರಿ.ಶ.೧೪೫೫

೨೨. ವೆಂಕಟರತ್ನಂ ಎ.ವಿ., ಪೂರ್ವೋಕ್ತ, ಪು.೩೨

೨೩.. Dikshit G.S., **Local Self Government in Mediaeval Karnataka,** Pp.28-35

೨೪. SII, IX(ii), No.573, ಕ್ರಿ.ಶ.೧೫೩೫

೨೫. ವೆಂಕಟರತ್ನಂ ಎ.ವಿ., ಪೂರ್ವೋಕ್ತ, ಪು.೮೮

೨೬. ವೆಂಕಟರತ್ನಂ ಎ.ವಿ., ಪೂರ್ವೋಕ್ತ, ಪು.೯೦

೨೭. EC, VII, SK No.219

೨೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೨೧೫

೨೯. SII, IX(ii), No.407, ಕ್ರಿ.ಶ.೧೩೬೪

೩೦. SII, IX(ii), No.441, ಕ್ರಿ.ಶ.೧೪೨೫

೩೧. SII, IX(ii), No.409, ಕ್ರಿ.ಶ.೧೩೬೫

೩೨. SII, IX(ii), No.415, ಕ್ರಿ.ಶ.೧೩೭೩

೩೩. SII, IX(ii), No.417, ಕ್ರಿ.ಶ.೧೩೭೭

೩೪. SII, IX(ii), No.419, ಕ್ರಿ.ಶ.೧೩೮೦

೩೫. SII, IX(ii), No.419, ಕ್ರಿ.ಶ.೧೩೮೦

೩೬. SII, IX(ii), No.441, ಕ್ರಿ.ಶ.೧೪೨೫

೩೭. SII, IX(ii), No.448, ಕ್ರಿ.ಶ.೧೪೪೭

೩೮. SII, IX(ii), No.449, ಕ್ರಿ.ಶ.೧೪೪೪

೩೯. SII, IX(ii), No.437 ಕ್ರಿ.ಶ.೧೪೭೨

೪೦. SII, IX(ii), No.473, ಕ್ರಿ.ಶ.

೪೧. SII, IX(ii), No.503, ಕ್ರಿ.ಶ.೧೫೧೬

೪೨. SII, IX(ii), No.511, ಕ್ರಿ.ಶ.೧೫೧೯

೪೩. SII, IX(ii), No.524, ಕ್ರಿ.ಶ.೧೫೨೮

೪೪. ತಿಪ್ಪೇರುದ್ರಸ್ವಾಮಿ ಎಚ್., ಪೂರ್ವೋಕ್ತ, ಪು.೨೬೦

೪೫. KI, ಹೊಸಕೋಟೆ, ಕ್ರಿ.ಶ.೧೫೬೪

೪೬. EC, X ಮುಳುಬಾಗಿಲು ೭, ಕ್ರಿ.ಶ.೧೪೩೧

೪೭. MAR, 1931, No.56

೪೮. SII, IX(ii), No.479, ಕ್ರಿ.ಶ.೧೫೧೦

೪೯. ಕವಿಶಾಸಂ ೨, ಸಂಖ್ಯೆ ೩೩, ಕ್ರಿ.ಶ.೧೫೧೩

೫೦. ಕವಿಶಾಸಂ ೨, ಸಂಖ್ಯೆ ೩೪, ಕ್ರಿ.ಶ.೧೫೧೦

೫೧. SII, IX(ii), No.565, ಕ್ರಿ.ಶ.೧೫೩೪

೫೨. SII, IX(ii), No.606, ಕ್ರಿ.ಶ.೧೫೪೩

೫೩. SII, IX(ii), No.647, ಕ್ರಿ.ಶ.೧೫೫೨

೫೪. ನರಸಿಂಹಮೂರ್ತಿ ಎ.ವಿ., **ವಿಜಯನಗರದ ನಾಣ್ಯ ಸಂಪತ್ತು**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೬, ಪು.೩೬

೫೫. SII, IX(ii), No.407 ಕ್ರಿ.ಶ.೧೩೬೪

೫೬. SII, IX(ii), No.417, ಕ್ರಿ.ಶ.೧೩೭೭

೫೭. SII, IX(ii), No.425, ಕ್ರಿ.ಶ.೧೪೦೦

೫೮. SII, IX(ii), No.451, ಕ್ರಿ.ಶ.೧೪೪೭

೫೯. SII, IX(ii), No.455, ಕ್ರಿ.ಶ.೧೪೫೧

೬೦. SII, IX(ii), No.456, ಕ್ರಿ.ಶ.೧೪೫೧

೬೧. SII, IX(ii), No.407, ಕ್ರಿ.ಶ.೧೩೬೪

೬೨. SII, IX(ii), No.418, ಕ್ರಿ.ಶ.೧೩೭೯

೬೩. SII, IX(ii), No.479 ಕ್ರಿ.ಶ.೧೫೧೦

೬೪. SII, IX(ii), No.473, ಕ್ರಿ.ಶ.೧೪೮೭

೬೫. SII, IX(ii), No. , ಕ್ರಿ.ಶ.೧೦೪೫

೬೬. ಮರುಳಯ್ಯ ಸಾ.ಶಿ., **ಅಭಿಜ್ಞ**, ಅಭಿನಂದನಾ ಗ್ರಂಥ, ಜಯಾ ರಾಜಶೇಖರ್(ಸಂ), ಸಾ.ಶಿ.ಮರುಳಯ್ಯ ಅಭಿನಂದನಾ ಸಮಿತಿ, ಬೆಂಗಳೂರು, ಜೆ.ಎಂ.ನಾಗಯ್ಯ ದೇವಾಲಯ ಆಡಳಿತ ಲೇಖನ, ಪು.೪೭೮

೬೭. EC, ಶಿಡ್ಲೆಘಟ್ಟ ೨೭೬

೬೮. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೪೨

೬೯. EC, XII, CK.30 ಕ್ರಿ.ಶ.೧೧೪೯

೭೦. Saletore B.A., **The Sthanikas and Their Historical Importance**(Reprinted from the Journal of the Bombay University VII, P.51

೭೧. ವೆಂಕಟರತ್ನಂ ಎಂ.ವಿ., ಪೂರ್ವೋಕ್ತ, ಪು.೧೫೪

೭೨. E.I., XV, No.8, ಕ್ರಿ.ಶ.೧೦೫೮

೭೩. ಮರುಳಯ್ಯ ಸಾ.ಶಿ, ಪೂರ್ವೋಕ್ತ, ಪು.೨೮೪

೭೪. SII, IX(ii), No.473, ಕ್ರಿ.ಶ.೧೪೮೭

೭೫. Venkataramanayya N., **Studies in the History of the Third Dynasty of Vijayanagara** P.332

೭೬. SII, IX(ii), No.267, ಕ್ರಿ.ಶ.೧೧೬೦

೭೭. HPC, No.54, ಕ್ರಿ.ಶ.೧೧೧೯

೭೮. HPC, No.52, ಕ್ರಿ.ಶ.೧೧೧೮

೭೯. ಕಲಬುರ್ಗಿ ಎಂ.ಎಂ., **ಶಾಸನಗಳಲ್ಲಿ ಶಿವಶರಣರು,** ಪು.೧೧೪

೮೦. SII, IX(ii), No.211, ಕ್ರಿ.ಶ.೧೧೨೬

೮೧. SII, IX(ii), No.192, ಕ್ರಿ.ಶ.೧೧೧೫

೮೨. SII, IX(ii), No.564, ಕ್ರಿ.ಶ.೧೫೩೪

೮೩. SII, IX(ii), No.564, ಕ್ರಿ.ಶ.೧೫೩೪

೮೪. SII, IX(ii), No.113, ಕ್ರಿ.ಶ.೧೦೫೪

೮೫. SII, IX(ii), No.473, ಕ್ರಿ.ಶ.೧೪೮೭

೮೬. ಕವಿಶಾಸನ ೧, ಸಂಖ್ಯೆ ೨೮, ಕ್ರಿ.ಶ.೧೫೧೬

೮೭. EC, XII, KG.18, ಕ್ರಿ.ಶ.೧೪೨೯

೮೮. SII, IX(ii), No.564 ಕ್ರಿ.ಶ.೧೫೩೪

೮೯. SII, IX(ii), No.564, ಕ್ರಿ.ಶ.೧೫೩೪

೯೦. MAR, 1928 No.56

೯೧. EC, NG.147, ಕ್ರಿ.ಶ.೧೩೬೮

೯೨. SII, IX(ii), No.451, ಕ್ರಿ.ಶ.೧೪೪೭

೯೩. SII, IX(ii), No.409, ಕ್ರಿ.ಶ.೧೩೬೫

೯೪. IA, IX, P.124, ಕ್ರಿ.ಶ.೭೭೮

೯೫. EL XV, NOE, ಕ್ರಿ.ಶ.೧೦೫೪

೯೬. KL V, No.123, ಕ್ರಿ.ಶ.೧೫೬೩

೯೭. EL XV, No.F, ಕ್ರಿ.ಶ.೧೦೬೦

೯೮. ಕನಕದಾಸರ, ರಾಜ ತರಂಗಿಣಿ, ಪು.೨೬೯

೯೯. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೮೦

೧೦೦. ನಾಗೇಗೌಡ ಎಚ್.ಎಲ್.(ಸಂ), **ಪ್ರವಾಸಿ ಕಂಡ ಇಂಡಿಯಾ**, ಸಂಪುಟ ೨೨, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೩೬೦

೧೦೧. ಅದೇ, ಪು.೨೯೨

೧೦೨. ವಿರೂಪಾಕ್ಷ ಪಂಡಿತನ **ಚನ್ನಬಸವ ಪುರಾಣ**, ಪು.೧೭೩

೧೦೩. ಸಂಕ್ಷಿಪ್ತ ಕನ್ನಡ ನಿಘಂಟು, **ಕನ್ನಡ ಸಾಹಿತ್ಯ ಪರಿಷತ್**, ಬೆಂಗಳೂರು, ಪು.೬೪೭

೧೦೪.ಕವಿಶಾಸಂ, ಹಂಪಿ, ಕೂಡ್ಲಿಗಿ ೪, ಕ್ರಿ.ಶ.೧೫೫೨

೧೦೫. SII, IX(ii), No.647, ಕ್ರಿ.ಶ.೧೫೫೨

೧೦೬. SII, IX(ii), No. , ಕ್ರಿ.ಶ.೧೫೫೬

೧೦೭. SII, IX(ii), No.662, ಕ್ರಿ.ಶ.೧೫೫೬

೧೦೮. SII, IX(ii), No.564, ಕ್ರಿ.ಶ.೧೫೩೪

೧೦೯. ಮರುಳಯ್ಯ ಸಾ.ಶಿ., ಪೂರ್ವೋಕ್ತ, ಪು.೪೩೦

೧೧೦. SII, IX(ii), No.607, ಕ್ರಿ.ಶ.೧೫೩೪

೧೧೧. SII, IV No.260,

೧೧೨. ಭೀಮಕವಿಯ ಬಸವಪುರಾಣ, ೧೪೦೦, ಜನಪ್ರಿಯ ನೂತನ ಆವೃತ್ತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೯೬, ಪು.೪೨

೧೧೩. ಶ್ರೀಕಂಠಯ್ಯ ಬಿ., ಪೂರ್ವೋಕ್ತ, ಪು.೧೨೯

೧೧೪. SII, IX(ii), No.419, ಕ್ರಿ.ಶ.೧೩೮೦

೧೧೫. SII, IX(ii), No.492, ಕ್ರಿ.ಶ.೧೫೧೩

೧೧೬. ಸದಾನಂದ ಕನವಳ್ಳಿ(ಅನು), ಮರೆತುಹೋದ ಮಹಾಸಾಮ್ರಾಜ್ಯ, ರಾಬರ್ಟ್‌ಸಿವೆಲ್(ಮೂಲ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೭೪

೧೧೭. ಅದೇ, ಪು.೨೮೦

೧೧೮. ರತ್ನಾಕರವರ್ಣಿಯ **ಭರತೇಶ ವೈಭವ,** ಎಂಬತ್ತನೆಯ ಸಂಧಿಯಲ್ಲಿನ ವರ್ಣನೆಗಳು

೧೧೯. ನಾಗೇಗೌಡ ಎಚ್.ಎಲ್., **ಪ್ರವಾಸಿಕಂಡ ಇಂಡಿಯಾ,** ಸಂಪುಟ.೨, ಪು.೧೪೦

೧೨೦. ಶ್ರೀಕಂಠಯ್ಯ ಕೆ., ಪೂರ್ವೋಕ್ತ, ಪು.೨೨೦

೧೨೧. Salator B.A., **Political and Social Life under Vijayanagar,** P.405

೧೨೨. SII, IX(ii), No.415, ಕ್ರಿ.ಶ.೧೩೭೩

೧೨೩. SII, IX(ii), No.448, ಕ್ರಿ.ಶ.೧೪೪೨

೧೨೪. SII, IX(ii), No.450, ಕ್ರಿ.ಶ.೧೪೫೦

೧೨೫. SII, IX(ii), No.481, ಕ್ರಿ.ಶ.೧೫೧೦

೧೨೬. SII, IX(ii), No.621, ಕ್ರಿ.ಶ.೧೫೪೬

೧೨೭. ಅದೃಶ್ಯ ಕವಿ, **ಪ್ರೌಢದೇವರಾಯನ ಕಾವ್ಯ, ಮುರುಘಾಮಠ, ಧಾರವಾಡ,** ೧೯೫೭, ಪು.೧೫

೧೨೮. ಪುರಂದರದಾಸರು, **ಪುರಂದರ ದಾಸರ ಕೀರ್ತನೆಗಳು,** ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ, ಪು.೩-೧೮೭

೧೨೯. ವಿರಕ್ತ ತೋಂಟದಾರ್ಯ, **ಸಿದ್ಧೇಶ್ವರ ಪುರಾಣ,** ಶ್ರೀ ಜಗದ್ಗುರು ತೋಂಟದಾರ್ಯ ಮಹಾಸಂಸ್ಥಾನಮಠ, ಗದಗ, ೧೯೫೮, ಪು.೨೨-೬೮

೧೩೦. ದೇವಿರಪ್ಪ ಎಚ್.(ಸಂ), **ರಾಮನಾಥ ಚರಿತೆ, ಭಾಗ ೨,** ನಂಜುಂಡಕವಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೯

೧೩೧. ಭೀಮಕವಿ, **ಬಸವ ಪುರಾಣಂ,** ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ, ೧೯೬೯, ಪು.೪೨

೧೩೨. SII, IX(ii), No.407, ಕ್ರಿ.ಶ.೧೩೬೪

೧೩೩. ಶ್ರೀಕಂಠಯ್ಯ ಕೆ., ಪೂರ್ವೋಕ್ತ, ಪು.೨೨೧

೧೩೪. ಕೊಂದುರಿ ಸರೋಜಿನಿದೇವಿ, **ರಿಲಿಜಿಯಸ್ ಇನ್ ವಿಜಯನಗರ ಎಂಫಾಯರ್,** ನ್ಯೂಡೆಲ್ಲಿ, ೧೯೯೦, ಪು.೨೭೭

೧೩೫. SII, IX(ii), No.448, ಕ್ರಿ.ಶ.೧೪೪೨

೧೩೬. SII, IX(ii), No.455, ಕ್ರಿ.ಶ.೧೪೫೦

೧೩೭. SII, IX(ii), No.464 ಕ್ರಿ.ಶ.೧೪೭೨

೧೩೮. SII, IX(ii), No.468, ಕ್ರಿ.ಶ.೧೪೭೨

೧೩೯. ಸದಾನಂದ ಕನವಳ್ಳಿ(ಸಂ), ಪೂರ್ವೋಕ್ತ, ಪು.೯೨

೧೪೦. ಅದೇ, ಪು.೯೨

೧೪೧. ಶೈಲಾ ಟಿ.ವರ್ಮ, **ತುಳುನಾಡಿನ ಶಾಸನಗಳ ಸಾಂಸ್ಕೃತಿಕ** ಅಧ್ಯಯನ, ಜ್ಞಾನೋದಯ ಪ್ರಕಾಶನ, ಬೆಂಗಳೂರು, ಪು.೨೦೨

೧೪೨. SII, IX(ii), No.415, ಕ್ರಿ.ಶ.೧೩೭೩

೧೪೩. ಶೈಲಾ ಟಿ.ವರ್ಮ, ಪೂರ್ವೋಕ್ತ, ಪು.೮೩

೧೪೪. ಅದೇ, ಪು.೮೩

೧೪೫. SII, IX(ii), No.621, ಕ್ರಿ.ಶ.೧೫೪೬

೧೪೬. ರಮೇಶ ಕೆ.ವಿ, **ತುಳುನಾಡಿನ ಇತಿಹಾಸ,** ಪು.೧೧೪

೧೪೭. ಅದೇ, ಪು.೧೧೩

೧೪೮. EC VII, SK.16 ಕ್ರಿ.ಶ.೧೧೪೯

೧೪೯. ಚಿದಾನಂದಮೂರ್ತಿ ಎಂ., ಪೂರ್ವೋಕ್ತ, ಪು.೧೯೫

೧೫೦. SII, IX(ii), No.491 ಕ್ರಿ.ಶ.೧೫೧೩

೧೫೧. SII, IX(ii), No.493, ಕ್ರಿ.ಶ.೧೫೧೩

೧೫೨. SII, IX(ii), No.648, ಕ್ರಿ.ಶ.೧೫೫೨

೧೫೩. ಸೂರ್ಯನಾಥ ಯು.ಕಾಮತ್, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್,** ಕರ್ನಾಟಕ ಸರ್ಕಾರ, ಪು.೩೯೪

೧೫೪. ಸದಾನಂದ ಕನವಳ್ಳಿ(ಅನು), ಪೂರ್ವೋಕ್ತ, ಪು. ೯೩

೧೫೫. ಶ್ರೀಕಂಠಯ್ಯ ಕೆ., ಪೂರ್ವೋಕ್ತ, ಪು.೨೨೩

೧೫೬. Elliot, History of India, IV, P.117-8

೧೫೭. ಶಿವಾನಂದ ವಿರಕ್ತಮಠ, ಪೂರ್ವೋಕ್ತ, ಪು.೫೮

೧೫೮. SII, IX(ii), No.648, ಕ್ರಿ.ಶ.೧೫೫೨

೧೫೯. ಶ್ರೀಕಂಠಯ್ಯ ಕೆ., ಪೂರ್ವೋಕ್ತ, ಪು.೨೩೦

೧೬೦. ಬೆಟಗೇರಿ ಕೃಷ್ಣಶರ್ಮ, **ನಮ್ಮ ಸಂಸ್ಕೃತಿ ಪರಂಪರೆ,** ಪು.೧೨೦

೧೬೧. ಅದೇ, ಪು.೧೨೦

೧೬೨. ಅದೇ, ಪು.೧೨೧

೧೬೩. ಅದೇ, ಪು.೧೩೪

೧೬೪. ಅದೇ, ಪು.೧೩೪

# ಸಮಾರೋಪ

ಸಂಸ್ಕೃತಿ ಸ್ಥಿರವಾದುದಲ್ಲ. ಅದು ಸದಾ ಪರಿವರ್ತನಶೀಲವಾದುದು. ಸಾವಿರಾರು ವರ್ಷಗಳಿಂದ ಬೆಳವಣಿಗೆ ಹೊಂದಿ ವಿಸ್ತಾರವಾಗಿ ಬೆಳೆದ ದೇವಾಲಯ ಸಂಸ್ಕೃತಿಯನ್ನು ವಿವೇಚಿಸಿ ಕೊನೆ ಮುಟ್ಟಿಸುವುದು ಸಾಧ್ಯವಿಲ್ಲದ ಕೆಲಸ. ವಿಜಯನಗರ ಕಾಲದ ಶೈವ ದೇವಾಲಯದ ಪರಂಪರೆಯಂತು ಬಹು ವಿಸ್ತಾರವಾದ ಅಧ್ಯಯನ ಹೊಂದಿದ್ದು. ಆದುದರಿಂದ ಇದರ ಕೊನೆಯೂ ಕಷ್ಟಸಾಧ್ಯವಾದದ್ದೇ. ಈ ಕಾಲದ ಶೈವ ದೇವಾಲಯ ಪರಂಪರೆಗೆ, ಹಿರಿದಾದ ಅಂತಸತ್ವವಿದೆ, ಭವ್ಯವಾದ ಇತಿಹಾಸವಿದೆ. ಇದು ಅನೇಕ ಶತಮಾನಗಳ ಅವಧಿಯಲ್ಲಿ ಸುಂದರವಾದದ್ದನ್ನು ಸತ್ಯವಾದದ್ದನ್ನು ಮೈಗೂಡಿಸಿಕೊಂಡೆ ಸೊಂಪಾಗಿ ಬೆಳೆದಿದೆ. ಹಳೆಯದನ್ನು ಮರೆಯದೆ ಹೊಸದನ್ನು ಅಲಕ್ಷಿಸದೆ ಹಲವು ಉತ್ತಮಾಂಶಗಳನ್ನು ತನ್ನದಾಗಿಸಿಕೊಂಡದ್ದನ್ನು ನಮ್ಮ ದೇವಾಲಯಗಳಲ್ಲಿನ ಶಾಸನಗಳು ಸುಸ್ಪಷ್ಟವಾಗಿ ಸಾರಿ ಹೇಳುತ್ತಿವೆ.

ವಿಜಯನಗರ ಕಾಲದಲ್ಲಿ ದೇವಾಲಯಗಳು ಅಂದಿನ ಕಾಲದ ಜನರ ಭಕ್ತಿ ಮತ್ತು ನಿಷ್ಠೆಯ ಪ್ರತೀಕವಾಗಿದ್ದವು. ಅಂದಿನ ಕಾಲದ ಜನರು ನ್ಯಾಯವಾಗಿ ಸಂಪಾದಿಸಿದ ಧನವನ್ನು ದಾನ ಮಾಡುತ್ತಿದ್ದರು. ಆದುದರಿಂದಲೇ ಈ ಕಲಾದಲ್ಲೆ ಎರೆಡುನೂರರಷ್ಟು ಶೈವ ದೇವಾಲಯ ಪೋಷಣೆಗೆ ಒಳಗಾದವು. ಇದು ವಿಜಯನಗರ ರಾಜಮಹಾರಾಜರು ಮೊದಲುಗೊಂಡು ಆ ಕಾಲದ ಸಾಮಾನ್ಯ ಜನರೂ ಕೊಡುಗೈ ಕಲಿಗಳು ಎಂಬುದನ್ನು ಸಾಬೀತು ಪಡಿಸುವುದಲ್ಲದೆ ದಾನಧರ್ಮವು ವಿಜಯನಗರಸಂಸ್ಕೃತಿಯ ಪ್ರಧಾನ ಲಕ್ಷಣವಾಗಿತ್ತು ಎಂಬುದನ್ನು ಸಾಬೀತು ಪಡಿಸುತ್ತಿದೆ.

ಹೀಗೆ ನಿರ್ಮಾಣಗೊಂಡ ವಿಜಯನಗರ ಕಾಲದ ದೇವಾಲಯಗಳು ಅಂದಿನ ಕಾಲದ ಧಾರ್ಮಿಕ ಸಂಸ್ಥೆಯಾಗಿರುವುದರ ಜೊತೆಯಲ್ಲೆ ಸಾಮಾಜಿಕ ಜೀವನದಲ್ಲಿ ವಿಶಿಷ್ಟವಾದ ಗೌರವಸ್ಥಾನವನ್ನು ಪಡೆದಿತ್ತು. ಪವಿತ್ರ ವಾತಾವರಣದಿಂದ ಕೂಡಿದ ಈ ಸ್ಥಳ ನಿತ್ಯನೈಮಿತ್ತಿಕ ಧಾರ್ವಿಕ ಕಾರ್ಯಗಳ ಕೇಂದ್ರವಾಗಿತ್ತು. ಇದು ಸಂಗೀತ, ವಾಸ್ತುಶಿಲ್ಪ, ಶಿಲ್ಪ ಮುಂತಾದ ಕಲೆಗಳ ಪ್ರದರ್ಶನ ಕೇಂದ್ರವಾಗಿತ್ತು. ಜಾತ್ರೆ ಉತ್ಸವ ಗಳನ್ನು ಆಚರಣೆಗಳನ್ನು ನಡೆಸುವ ಮೂಲಕ ಸಾರ್ವಜನಿಕ ಸಮ್ಮೇಳನ ಮಂದಿರವಾಗಿ ದೇವಸ್ಥಾನ ಕಾರ್ಯನಿರ್ವಹಿಸುತ್ತಿತ್ತು. ಕೆಲವೊಂದು ದೇವಸ್ಥಾನಗಳು ವಿದ್ಯಾಶಾಲೆಯಾಗಿಯೂ, ನ್ಯಾಯ ಗೃಹಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದವು. ದೇವಸ್ಥಾನವು ಅನೇಕ ಪಂಡಿತರ, ವಿದ್ವಾಂಸರ ಧರ್ಮಜೀವಿಗಳ ಆಶ್ರಯ ಸ್ಥಾನವಾಗಿದ್ದಿತು. ವಿಜಯನಗರ ಕಾಲದಲ್ಲಿನ ದೇವಸ್ಥಾನಗಳು ಆರ್ಥಿಕ ಅಭಿವೃದ್ಧಿಯ ತಾಣಗಳಾಗಿ,

ಉದ್ಯೋಗ ಅವಕಾಶಗಳ ಕೇಂದ್ರಗಳಾಗಿಯೂ ಕಾರ್ಯನಿರ್ವಹಿಸುತ್ತಿದ್ದವು. ಈ ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದ ವಿಜಯನಗರ ಕಾಲದ ಶೈವ ದೇವಸ್ಥಾನಗಳನ್ನು ಈ ಕೆಲಗಿನಂತೆ ವಿವೇಚಿಸಬಹುದು.

ವಿಜಯನಗರ ಸಾಮ್ರಾಜ್ಯವು ಅದೇ ತಾನೆ ಸ್ಥಾಪನೆಗೊಂಡ ಸಾಮ್ರಾಜ್ಯವಾಗಿದ್ದ ಕಾರಣ ಈ ಅರಸರು ಅರಂಭದ ದಿನಗಳಲ್ಲಿ ದೇವಾಲಯ ನಿರ್ಮಾಣಕ್ಕೆ ಹೆಚ್ಚಿನ ಪ್ರಾಶಸ್ತ ನೀಡಿದೆ. ಇದ್ದ ಹಳೆಯ ದೇವಸ್ಥಾನದ ಜೀರ್ಣೋದ್ಧಾರ ಹಾಗೂ ಮೊದಲಿಗೆ ಅಸ್ತಿತ್ವ ಹೊಂದಿದ್ದ ದೇವಸ್ಥಾನಗಳನ್ನು ವಿಸ್ತರಿಸಿ ಕಟ್ಟುವ ಪದ್ಧತಿಯನ್ನು ಅನುಸರಿಸಿದರು. ಅಂದರೆ ಮೂದಲೆ ಕಟ್ಟಿದ್ದ ದೇವಸ್ಥಾನಕ್ಕೆ ಕಲ್ಯಾಣ ಮಂಟಪ, ಮಹಾರಂಗ ಮಂಟಪ, ಉತ್ಸವ ಮಂಟಪಗಳಂತಹ ಕಟ್ಟಡಗಳನ್ನು ನಿರ್ಮಿಸಿ ದೇವಸ್ಥಾನದ ವೈಭವತೆಯನ್ನು ಹೆಚ್ಚಿಸಿದರು. ಇದು ಆ ಕಾಲದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗೆ ಅನಿವಾರ್ಯವಾಗಿತ್ತು.

ದೇವಸ್ಥಾನಗಳು ಶೈವ, ವೈಷ್ಣವ ಎಂಬ ಪಂಥೀಯ ಬೇದಗಳಿಲ್ಲದೆ ಅಂದಿನ ಕಾಲದ ಎಲ್ಲ ಪಂಥದ ದೇವಾಲಯಗಳಲ್ಲೂ ಶೈವ, ವೈಷ್ಣವ ಪಂಥದ ಶಿಲ್ಪಗಳನ್ನು ಆಲಯದ ಸ್ತಂಭಗಳ ಮೇಲೆ ಗೋಡೆಗಳ ಮೇಲೆ ನಿರ್ಮಾಣ ಮಾಡಿರುವುದನ್ನು ಕಾಣಬಹುದು. ಅಲಸೂರಿನ ಸೋಮೇಶ್ವರ ದೇವಸ್ಥಾನದ ಮಹಾರಂಗ ಮಂಟಪದ ಸ್ತಂಭಗಳಲ್ಲಿ ವಿಷ್ಣುವಿನ ನಾನಾ ಅವತಾರದ ಚಿತ್ರಗಳನ್ನು ನಿರ್ಮಿಸಲಾಗಿದೆ. ಇದೇರೀತಿಯಲ್ಲಿ ಹೊಸಪೇಟೆ ತಾಲೂಕಿನ ತಿಮ್ಮಲಾಪುರಗ್ರಾಮದ ವೇಣುಗೋಪಾಲ ದೇವಸ್ಥಾನದ ಮಹಾರಂಗಮಂಟಪದ ಕಂಬಗಳಲ್ಲಿ ಶಿವನ ವಿವಿಧರೂಪಗಳನ್ನು ಚಿತ್ರಿಸಲಾಗಿದೆ. ಇದೇ ತಿಮ್ಮಲಾಪುರ ಗ್ರಾಮದ ತ್ರಿಕೂಟಾಚಲ ಶಿವನ ದೇವಸ್ಥಾನದ ತೆರೆದಮಹಾರಂಗಮಂಟಪದಲ್ಲಿ ವಿಷ್ಣುವಿನ ನಾನಾ ಅವತಾರಗಳನ್ನು ಕೆತ್ತಲಾಗಿದೆ. ಹಂಪೆಯ ವಿರೂಪಾಕ್ಷ, ಕೋಲಾರದ ಸೋಮೇಶ್ವರ ಮುಂತಾದ ದೇವಸ್ಥಾನಗಳಲ್ಲಿ ಈ ರೀತಿಯ ಪಂಥಿಯ ಭೇದಗಳಿಲ್ಲದ ರಚನೆಗಳನ್ನು ಕಾಣಬಹುದು.

ದೇವಾಲಯದ ನಿರ್ಮಾಣವನ್ನು ಕೇವಲ ರಾಜಧಾನಿಗೆ ಕೇಂದ್ರೀಕರಿಸದೇ ಇಡೀ ಸಾಮ್ರಾಜ್ಯಕ್ಕೆ ವಿಕೇಂದ್ರಿಕರಿಸಿ ದೇವಾಲಯಗಳನ್ನು ನಿರ್ಮಿಸಿದರು. ಹಾಗಾಗಿ ದೂರದ ಕೋಲಾರ ಮತ್ತು ನೆರೆಯ ರಾಜ್ಯಗಳಲ್ಲೂ ವಿಜಯನಗರ ವಾಸ್ತುಶೈಲಿಯ ದೇವಾಲಯಗಳು ಕಂಡುಬರುತ್ತವೆ.

ಸಂಗಮ ವಂಶವು ಶೈವದೇವಸ್ಥಾನಕ್ಕೆ ತೋರಿದಷ್ಟೆ ಉದಾರತೆಯನ್ನು ಕಾಳಜಿಯನ್ನು ದೇವಸ್ಥಾನದ ನಿರ್ಮಾಣದ ಆಸಕ್ತಿಯನ್ನು ತುಳುವ ವಂಶವೂ ಪೋಷಿಸಿದ್ದು ಒಂದು ವಿಶೇಷ. ಇದು ವಿಜಯನಗರ ಸಾಮ್ರಾಜ್ಯದ ಜಾತ್ಯಾತೀತ ಪ್ರತೀಕವೆನ್ನಬಹುದು.

ವಿಜಯನಗರ ಸಾಮ್ರಾಜ್ಯದಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದ ಶೈವ ಪಂಥಗಳೆಂದರೆ ಕಾಳಾಮುಖರು, ಲಾಕುಳರು, ಪಾಶುಪತರು, ಕಾಪಾಲಿಕರು, ಮತ್ಸೇಂದ್ರನಾಥರು, ಶಾಕ್ತರು, ಗಾಣಪತ್ಯರು, ವೈರಭದ್ರರು ಮತ್ತು ವೀರಶೈವರು, ಅದ್ವಿತಿಗಳು ಪ್ರಮುಖರಾಗಿದ್ದರು. ಈ ಪಂಥಗಳು ತಮ್ಮ ತಮ್ಮದೇ ಶಿಷ್ಯ ಸಂಕುಲ

ಮತ್ತು ಸಂಪ್ರದಾಯಗಳನ್ನು ಹೊಂದಿದ್ದರು. ಈ ಪಂಥಗಳಲ್ಲಿ ಅವರವರೊಳಗೆ ಅಷ್ಟಾಗಿ ಸೈದ್ಧಾಂತಿಕ ಅಥವಾ ತತ್ವಾತ್ಮಕ ಭಿನ್ನಾಭಿಪ್ರಾಯಗಳಿಲ್ಲ. ಇದರಿಂದಾಗಿ ಯಾವುದೇ ಒಬ್ಬ ಅನುಯಾಯಿಯು ಒಂದು ಪಂಥದಿಂದ ಇನ್ನೊಂದು ಪಂಥಕ್ಕೆ ಪಂಥಾಂತರ ಹೊಂದುವುದು ಸರ್ವೆಸಾಮಾನ್ಯವಾದ ವಿಷಯವಾಗಿತ್ತು. ಆದರೆ ಈ ಎಲ್ಲಾ ಪಂಥಗಳೂ ಶಿವನನ್ನೇಅಗ್ರದೇವರೆಂದು ನಂಬಿ, ಶೈವ ದೇವಸ್ಥಾನಗಳಿಗೆ ಪೂಜೆ, ದಾನ, ಧರ್ಮಗಳನ್ನು ಸಲ್ಲಿಸುತ್ತಿದ್ದರು. ಶಿವಲಿಂಗವು ಅಮೂರ್ತರೂಪದಲ್ಲಿರುವುದು ಈ ಕಾಲದಲ್ಲಿ ಶೈವ ಸಂಪ್ರದಾಯಗಳ ಸ್ಥಿತಿಸ್ಥಾಪಕತ್ವ ಶಕ್ತಿಯನ್ನು ಹೆಚ್ಚಿಸಿತು. ದೇವರ ಹೆಸರಿನ ಪೂವಾರ್ಧ ಏನೇ ಇರಲಿ ಅದಕ್ಕೆ ಶಾಸ್ತ್ರೀಯವಾದ ಈಶ್ವರ ಎಂಬ ಪ್ರತ್ಯೇಯವನ್ನು ಸೇರಿಸಿ ಅದನ್ನು ಪೂಜಿಸುವ ಪದ್ಧತಿ ಮಧ್ಯಯುಗೀನ ಕಾಲದಲ್ಲಿ ಪ್ರಚಲಿತಕ್ಕೆ ಬಂದಿತು. ಇದು ಎಲ್ಲಾ ವರ್ಗದ ಜನರನ್ನೂ ಶಿವಾಲಯಗಳಿಗೆ ಆಕರ್ಷಿಸುವಲ್ಲಿ ಸಫಲವಾಯಿತು. ರಾಮ ಎಂಬ ಹೆಸರಿಗೆ ಈಶ್ವರ ಎಂಬ ಪ್ರತ್ಯೇಯವನ್ನು ಸೇರಿಸಿ ರಾಮೇಶ್ವರ ಎಂಬ ಲಿಂಗಗಳು, ದೇವಾಲಯಗಳು ಪ್ರತಿಷ್ಠಾಪನೆಗೊಂಡವು. ಸೋಮನಾಥವು ಸೋಮೇಶ್ವರ ಎಂದೂ ಮಲ್ಲಿಕಾರ್ಜುನ ಎಂಬುದೂ ಮಲ್ಲೇಶ್ವರ ಎಂಬ ಹೊಸ ರೂಪದ ದೇವಸ್ಥಾನಗಳು ಈ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವು.

ಸೋಮಶ್ವೇರ ದೇವಸ್ಥಾನವಂತೂ ಹಳೇ ಮೈಸೂರಿನ ಭಾಗದಲ್ಲಿ ಹೆಚ್ಚು ಜನಪ್ರಿಯತೆಯನ್ನು ಪಡೆದುಕೊಂಡಿತ್ತು. ಮುಳುಬಾಗಿಲು, ಅಲಸೂರು, ಕುರುಡು ಮಲೈ, ಸಿಂಧುವಳ್ಳಿ, ಅರಾಭಿಕೊತ್ತನೂರುಗಳಲ್ಲಿ ವಿಜಯನಗರ ವಾಸ್ತುಶೈಲಿಯನ್ನು ಹೊಂದಿದ ಸೋಮೇಶ್ವರ ದೇವಾಲಯಗಳನ್ನು ಕಾಣಬಹುದು. ವಿಜಯನಗರ ಕಾಲದಲ್ಲಿ ಪೋಷಣೆಗೆ ಒಳಗಾದ ದೇವಾಲಯಗಳಲ್ಲಿ ಸೋಮೇಶ್ವರ ದೇವಸ್ಥಾನಗಳು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ಕಾಣಬಹುದು. ಉತ್ತರ ಕರ್ನಾಟಕದಲ್ಲಿ ವಿರೂಪಾಕ್ಷನ ದೇವಸ್ಥಾನಗಳು ಹೆಚ್ಚಾಗಿ ಪೋಷಣೆಗೆ ಒಳಗಾದವು.

ಸೋಮೇಶ್ವರ ಎಂಬ ಹೆಸರಿನ ದೇವರು ಶೈವ ಜೋತಿರ್ಲಿಂಗಗಳಲ್ಲಿ ಒಂದಾದ ಗುಜರಾತಿನ ಸೋಮನಾಥನಿಂದ ಬಂದುದಾಗಿದೆ. ಈ ಹೆಸರಿನ ದೇವಾಲಯಗಳು ಕ್ರಿ.ಶ.೭ ಮತ್ತು ೮ನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಕಾಣಸಿಗುತ್ತವೆ. ಮಧ್ಯಯುಗೀನ ಕಾಲದಲ್ಲಿ ಗುಜರಾತದಿಂದ ದಕ್ಷಿಣಕ್ಕೆ ವಲಸೆ ಬಂದ ಲಕುಲೀಶ ಪಾಶುಪತ ಪಂಥದ ವಲಸೆಯ ಜೊತೆಯಲ್ಲೆ ಕರ್ನಾಟಕಕ್ಕೆ ಈ ದೇವರು ಪಾದಾರ್ಪಣೆ ಮಾಡಿತ್ತು. ಬಳ್ಳಿಗಾವಿಯಂಥ ಕಾಳಮುಖ ಕೇಂದ್ರಕ್ಕೂ ಸೋಮನಾಥಕ್ಕೂ ಸಂಬಂಧವಿತ್ತು. ಗೊರವರ ಮೇಲೆ ಲಕುಲೀಶ ಪಾಶುಪತದ ತತ್ವಗಳು ಪ್ರಭಾವವು ಕ್ರಮೇಣವಾಗಿ ಬೆಳೆದಿರಬಹುದು. ಇದರಿಂದಾಗಿಯೇ ಎಂ.ಚಿದಾನಂದ ಮೂರ್ತಿಯವರು ಕಾಳಮುಖರೂ ಪಾಶುಪತರು ಒಂದೇ ಎಂದು ಹೇಳುವಷ್ಟರ ಮಟ್ಟಿಗೆ ಈ ಎರಡೂ ಪಂಥಗಳಲ್ಲಿ ಅನ್ಯೋನ್ಯತೆ ಬೆಳೆದು ಬಂದಿತು. ಈ ಸಾಮರಸ್ಯವು ವಿಜಯನಗರ ಕಾಲದಲ್ಲಿ ಮುಂದುವರಿದದ್ದನ್ನು ಕಾಣಬಹುದು.

ವಿಜಯನಗರ ಕಾಲದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿದ ದೇವಸ್ಥಾನಗಳಲ್ಲಿ ವಿರೂಪಾಕ್ಷನ ದೇವಾಲಯಗಳೂ ಸೇರಿವೆ. ಇವು ವಿಜಯನಗರದ ಸಾಮ್ರಾಜ್ಯದಲ್ಲಿ ಕರ್ನಾಟಕದಲೆಲ್ಲಾ ಕಂಡುಬರುತ್ತವೆಯಾದರೂ ಉತ್ತರ ಕರ್ನಾಟಕದಲ್ಲೇ ಹೆಚ್ಚು. ಈ ವಿರೂಪಾಕ್ಷನೇ ಕಾಮನನ್ನು ಸುಟ್ಟವನು. ಇವನೆ ಹೇಮಕೂಟದ ಮೇಲೆ ತಪಸ್ಸು ಮಾಡಿದವನೆಂದು ಜನರಲ್ಲಿ ಪ್ರತೀತಿ ಇತ್ತು. ಇಷ್ಟೆಲ್ಲಾ ಪ್ರಭಾವಯುತವಾದ ದೇವರು ಪ್ರಸಿದ್ಧವಾದ ಸಂಗಮ ವಂಶದ ಇಷ್ಟದೈವವಾಗಿತ್ತು. ಅಲ್ಲದೆ ಹಂಪಿಯ ಈ ಪ್ರದೇಶಕ್ಕೆಲ್ಲ ಈ ಪಂಪಾವಿರೂಪಾಕ್ಷನೆ ಅಧಿನಾಯಕ ಎಂಬ ನಂಬಿಕೆ ಆ ಕಾಲದಲ್ಲಿ ಪ್ರಚಲಿತದಲ್ಲಿತ್ತು. ಆದ್ದರಿಂದಲೇ ತುಂಗಭದ್ರಾ ನದಿಯ ಇಕ್ಕೆಲಗಳಲ್ಲಿ ವಿರೂಪಾಕ್ಷನ ದೇವಾಸ್ಥಾನಗಳು ರಚನೆಗೊಂಡವು. ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪಿಯಲ್ಲಿಯೇ ಮೂರು ವಿರೂಪಾಕ್ಷ ದೇವಾಲಯಗಳು ಕಂಡುಬರುತ್ತಿವೆ. ಎರಡನೆಯ ದೇವರಾಯನ ಮಂತ್ರಿಯಾಗಿದ್ದ ಲಕ್ಕಣ್ಣ ದಂಡೇಶನು ಕೋಲಾರ ಜಿಲ್ಲೆ ಮುಳುಬಾಗಿಲು ತಾಲ್ಲೂಕು ವಿರೂಪಾಕ್ಷಪುರದಲ್ಲಿ ವಿರೂಪಾಕ್ಷನ ಹೆಸರಿನಲ್ಲಿ ಒಂದು ದೇವಸ್ಥಾನವನ್ನು ಪೋಷಿಸಿದ್ದು ಕಾಣಬಹುದು. ಕಂಪ್ಲಿ, ಗುಳ್ಯಂ ಮುಂತಾದ ಗ್ರಾಮಗಳಲ್ಲಿ ವಿರೂಪಾಕ್ಷನ ಹೆಸರಿನಲ್ಲಿ ದೇವಸ್ಥಾನಗಳು ಈ ಕಾಲದಲ್ಲಿ ನಿರ್ಮಾಣಗೊಂಡವು.

ನಮ್ಮ ಸಂಸ್ಕೃತಿಯ ವೀರರ ಪ್ರತೀಕ ವೀರಭದ್ರ. ವಿಜಯನಗರ ಕಾಲದ ವೀರಭದ್ರನ ಮೂರ್ತಿಗಳನ್ನು ಅವಲೋಕಿಸಿದರೆ ವೀರಭದ್ರನು ಒಬ್ಬ ಯೋಧನ ಮೂರ್ತಿಯಂತೆ ಕಂಡುಬರುತ್ತಿದೆ. ಪುರಾಣದಲ್ಲಿ ಹೇಳಿರುವಂತೆ ವೀರಭದ್ರ ಶಿವನ ಸೇನಾನಿ ಎಂಬುದನ್ನು ಇದು ನೆನಪಿಗೆ ತರುತ್ತದೆ. ಕೆಲವೊಂದು ಕಡೆ ಭೈರವನ ರೂಪವಾಗಿ ವೀರಭದ್ರ ಕಾಣಿಸಿಕೊಳ್ಳುತ್ತಾನೆ. ಮತ್ತೆ ಕೆಲವು ಕಡೆಗಳಲ್ಲಿ ನಾಥಪಂಥಗಳ ಆರಾಧ್ಯ ದೈವವಾಗಿಯೂ ವೀರಭದ್ರ ಕಾಣಿಸಿಕೊಳ್ಳುತ್ತಾನೆ. ಒಟ್ಟಾರೆಯಾಗಿ ವಿಜಯನಗರ ಸಾಮಾಜ್ಯದಲ್ಲಿ ವೀರಭದ್ರನ ಆರಾಧನೆಯು ಹೆಚ್ಚಾದದ್ದು ಕಂಡುಬರುತ್ತದೆ. ಐತಿಹಾಸಿಕವಾಗಿ ವಿರೂಪಾಕ್ಷನ ಆರಾಧನೆ ಮೊದಲಿಗೆ ಕಂಡುಬಂದರೆ, ಆತನ ನಂತರದಲ್ಲಿ ವೀರಭದ್ರನ ಆರಾಧನೆ ಕಂಡುಬರುತ್ತದೆ. ವಿಜಯನಗರ ಕಾಲದಲ್ಲಿ ಬಾಳೆಹೊನ್ನೂರಿನಲ್ಲಿ, ನಾಗಮಂಗಲ, ಬೆಳ್ಳೂರು, ಮುಳುಬಾಗಿಲು, ರಾಯಶೆಟ್ಟಿಪುರ ತಿಮ್ಮಲಾಪುರಗಳಲ್ಲಿ ವೀರಭದ್ರನ ಹೆಸರಿನಲ್ಲಿ ದೇವಸ್ಥಾನಗಳು ನಿರ್ಮಾಣಗೊಂಡವು.

ಮಲ್ಲಿಕಾರ್ಜುನ ದೇವರು ಮಲ್ಲಣ್ಣ, ಮೈಲಾರಿ ಮುಂತಾದ ದೇವರುಗಳ ಜೊತೆಗೆ ಸಂಬಂಧ ಹೊಂದಿದ್ದು, ದಖ್ಖನ್ನಿನ ಪಶುಸಂಗೋಪನಾ ಸಮಾಜಗಳ ಹಿನ್ನೆಲೆ ಹೊಂದಿದೆ. ಮಲ್ಲಿಕಾರ್ಜುನನ ಪ್ರಮುಖ ಕ್ಷೇತ್ರ ಶ್ರೀಶೈಲ ಇಲ್ಲಿಗೆ ವಿಜಯನಗರದ ಅರಸರು ದಾನದತ್ತಿಗಳನ್ನು ನೀಡಿದ್ದಾರೆ. ಶ್ರೀಶೈಲವನ್ನು ಕೇಂದ್ರವಾಗಿಸಿಕೊಂಡ ಕಾಳಾಮುಖ ಕ್ಷೇತ್ರವು ಗೊರವ ಸಂಪ್ರದಾಯದ ಮೈಲಾರ, ಮಲ್ಲಣ್ಣ ಎಂಬ ದೇವರ ಹೆಸರುಗಳೊಂದಿಗೂ ಸಂಬಂಧ ಉಳಿಸಿಕೊಂಡಿದೆ. ಹೀಗಾಗಿ ವಿಜಯನಗರ ಕಾಲದಲ್ಲಿ ಮಲ್ಲಿಕಾರ್ಜುನ ಹೆಸರಿನಲ್ಲೂ ದೇವಾಲಯಗಳು ನಿರ್ಮಾಣಗೊಂಡವು. ಅವುಗಳಲ್ಲಿ ಕೆಳಗೇರಿಯ ಮಲ್ಲಿಕಾರ್ಜುನ ದೇವಸ್ಥಾನವು ಪ್ರಮುಖವಾದದ್ದು.

ಅಲ್ಲದೆ ವಿಜಯನಗರ ಕಾಲದಲ್ಲಿ ಮಾರ್ಕಂಡೇಶ್ವರ, ಕೋಟೇಶ್ವರ, ಕಾಂತೇಶ್ವರ, ನಖರೇಶ್ವರ, ಮಹಾದೇವ, ಪಂಚಲಿಂಗೇಶ್ವರ, ಶಂಕರನಾರಾಯಣ, ವಿಶ್ವನಾಥ, ಕಾಶಿವಿಶ್ವನಾಥ ಮುಂತಾದ ಹೆಸರುಗಳ ದೇವಾಲಯಗಳು ರಚನೆಗೊಂಡವು. ಇವು ವಿಜಯನಗರ ಕಾಲದ ದೇವಾಲಯದ ಸಾಂಸ್ಕೃತಿ ವೈಭವವನ್ನು ಹೆಚ್ಚಿಸುವುದಕ್ಕೆ ಕಾರಣೀಭೂತವಾಗಿದ್ದವು.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶಿವಶರಣರು ನಡೆಸಿದ ಕ್ರಾಂತಿಯ ಫಲವಾಗಿ ವೀರಶೈವ ಸಮುದಾಯ ಕರ್ನಾಟದಾದ್ಯಂತ ಬೇರು ಬಿಡುವಂತಾಯಿತು. ವಿಜಯನಗರವನ್ನಾಳಿದ ಸಂಗಮ ಮನೆತನದ ಕಾಲದಲ್ಲಿ ಶೈವ, ವೀರಶೈವ ಪರೀಷ್ಕಾರಗೊಂಡು ತನ್ನ ಉಚ್ಛ್ರಾಯ ಮಟ್ಟವನ್ನು ತಲುಪಿತು. ಸಂಗಮ ವಂಶದ ನಂತರ ಸಾಳವ, ತುಳುವ ಮನೆತನಗಳು ಅಧಿಕಾರದ ಚುಕ್ಕಾಣಿ ಹಿಡಿದವು. ಶಿವಭಕ್ತರಾದ ಸಂಗಮ ವಂಶದ ಅರಸರನ್ನೇ ಮುರಿದು ವಿಷ್ಣುಭಕ್ತರಾದ ಸಾಳವ ವಂಶದ ಅರಸರುಗಳು ಅಧಿಕಾರ ಹಿಡಿದರು. ಈ ಕಾಲದಲ್ಲಿ ಹೊರಗೆ ಇದ್ದ ವೈಷ್ಣವ ಮತ ಹಂಪೆಯನ್ನು ಪ್ರವೇಶಿಸಿತು. ಒಳಗೆ ಇದ್ದ ವೀರಶೈವ ಮತ ದಕ್ಷಿಣ ಕರ್ನಾಟಕದತ್ತ ತನ್ನ ಬಾಹುಗಳನ್ನು ಚಾಚಿಕೊಂಡಿತು.

ಇಲ್ಲಿಯವರೆಗೆ ತಾತ್ವಿಕವಾಗಿ ದೇವಾಲಯವನ್ನು ನಿರಾಕರಿಸಿದ್ದ ವೀರಶೈವ ಧರ್ಮ ದೇವಾಲಯವನ್ನು ಅಂಗೀಕರಿಸಿದ ಹೊಸ ಶೈವಪಂಥಗಳ ಸೇರ್ಪಡೆಯಿಂದ ದೇವಾಲಯ ನಿರ್ಮಾಣ ಸ್ಥಾವರಲಿಂಗ ಪೂಜೆಯತ್ತ ತನ್ನ ಒಲವನ್ನು ತೋರಿಸಿದ್ದು ಕರ್ನಾಟಕದಲ್ಲಿ ಬಹಳಷ್ಟು ಶೈವಧರ್ಮದ ನಿರ್ಮಾಣಕ್ಕೆ ಕಾರಣವಾಯಿತು.

ಒಟ್ಟಾರೆಯಾಗಿ ಜೀವನದ ಪ್ರತಿಯೊಂದು ಹಂತದಲ್ಲೂ ದೇವಾಲಯವನ್ನು ತನ್ನ ಜೀವನ ಅವಿಭಾಜ್ಯ ಅಂಗವೆಂದು ಪರಿಗಣಿಸಿದ ಅಂದಿನ ಸಮಾಜವು ಅದನ್ನು ಪೋಷಿಸಿ ಬೆಳಸುತ್ತಾ ಬಂದಿತು. ಸಮಾಜದ ಎಲ್ಲಾ ವರ್ಗದ ಜನ ಉತ್ಸಾಹದಿಂದ ದೇವಾಲಯದ ಉತ್ಸವಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ರಥ ಕಟ್ಟುವ ಒಂದು ವರ್ಗ, ವಾದ್ಯ ಊದುವುದು ಮತ್ತೊಂದು. ಹೀಗೆ ಎಲ್ಲಾ ವರ್ಗದ ಜನರೂ ದೇವಸ್ಥಾನದ ಕಾರ್ಯಚಟುವಟಿಕೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ರಥ ಎಳೆಯುವಾಗ ಎಲ್ಲರೂ ಕೈ ಹಚ್ಚಿ ನಾವೆಲ್ಲ ಒಂದು ಎಂಬ ಸಾಮಾಜಿಕ ಸಾಮರಸ್ಯವನ್ನು ಎತ್ತಿ ತೋರಿಸುತ್ತಿತ್ತು. ಹೀಗೆ ಸಮಾಜದ ಅವಿಭಾಜ್ಯ ಅಂಗವಾಗಿ, ನಮ್ಮ ಸಾಂಸ್ಕೃತಿಕ ಪರಂಪರೆಯ ದ್ಯೋತಕವಾಗಿ ವಿದ್ಯಾಸಂಸ್ಥೆಯಾಗಿ ನ್ಯಾಯಾಲಯವಾಗಿ ನಮ್ಮ ಸಮಾಜದ ಭಾವೈಕ್ಯತೆಯನ್ನು ಹೆಚ್ಚಿಸುವ ಸಾಮರಸ್ಯದ ಕೇಂದ್ರವಾಗಿ ನಮ್ಮ ಕಲೆಗಳ ವಸ್ತುಸಂಗ್ರಹಾಲಯವಾಗಿ ಅಂದಿನ ಕಾಲದ ಶೈವದೇವಸ್ಥಾನಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದನ್ನು ನೋಡಬಹುದು.

# ಗ್ರಂಥಋಣ

**ಕನ್ನಡ ಗ್ರಂಥಗಳು**


ಅ.ನ.ಕೃ., **ವೀರಶೈವ ಸಾಹಿತ್ಯ ಸಂಸ್ಕೃತಿ,** ಪ್ರದೀಪ ಪ್ರಕಾಶನ, ಬೆಂಗಳೂರು, ೧೯೮೧

ಅ.ನ.ಕೃ., **ಶ್ರೀಕೃಷ್ಣದೇವರಾಯ,** ಬೆಂಗಳೂರು, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೧

ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ಅಮರೇಶ ನುಗಡೋಣಿ(ಸಂ), **ಶೂನ್ಯಸಂಪಾದನೆಗಳು ಸಾಂಸ್ಕೃತಿಕ ಮುಖಾಮುಖಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ಆಲೂರು ವೆಂಕಟರಾಯರು, **ಕರ್ನಾಟಕದ ಗತವೈಭವ,** ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ, ೧೯೪೦

ಈಶ್ವರಪ್ಪ ಎಂ.ಜಿ.(ಸಂ), **ದವನ ಸಿರಿ,** ಸ್ವಾಗತಸಮಿತಿ ೬೧ನೇ ಕನ್ನಡ ಸಾಹಿತ್ಯ ಸಮ್ಮೇಳನ, ದಾವಣಗೆರೆ

ಕರುಣ ಮಂಗಳವೇಡೆ, **ಕರ್ನಾಟಕ ದೇವಾಲಯಗಳಲ್ಲಿ ರಂಗಭೋಗ(ನೃತ್ಯ),** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಕರವೀರ ಪ್ರಭು ಕ್ಯಾಲಕೊಂಡ, **ಚಾಲುಕ್ಯ ವಾಸ್ತುಶಿಲ್ಪ ವೈಭವ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಕರೂರ್ ಎಸ್.ಆರ್., **ಶ್ರೀಕೃಷ್ಣದೇವರಾಯ,** ಬಳ್ಳಾರಿ, ಕರೂರು ಶೇಷಗಿರಿರಾಯರು ಪ್ರಕಾಶನ

ಕಲಬುರ್ಗಿ ಎಂ.ಎಂ., **ಶಾಸನಗಳಲ್ಲಿ ಶಿವಶರಣರು,** ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೭೮

ಕಲಬುರ್ಗಿ ಎಂ.ಎಂ., **ಧಾರವಾಡ ಜಿಲ್ಲೆಯ ಶಾಸನಗಳ ಸೂಚಿ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫

ಕಲಬುರ್ಗಿ ಎಂ.ಎಂ., **ಮಾರ್ಗ, ಸಂ.೧,೨,೩,** ಕರ್ನಾಟಕ ಏಜೆನ್ಸಿ, ಬೆಂಗಳೂರು

ಕಲಬುರ್ಗಿ ಎಂ.ಎಂ., **ಕರ್ನಾಟಕದ ಕೈಫಿಯತ್ತುಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

ಕಲಬುರ್ಗಿ ಎಂ.ಎಂ., **ಶಾಸನಗಳಲ್ಲಿ ಶಿವಶರಣರು,** ವೀರಶೈವ ಅಧ್ಯಯನ ಸಂಸ್ಥೆ, ಗದಗ, ಡಂಬಳ, ೧೯೭೮

ಕಲಬುರ್ಗಿ ಎಂ.ಎಂ., **ಶಾಸನ ವ್ಯಾಸಂಗ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪

ಕುಂಬಾಸ, **ಕಂನಾಡಿಗೆ ಜೈನರ ಕೊಡುಗೆ,** ಮಾಲತೇಶ ಪ್ರಕಾಶನ, ಕುಂಚೂರು, ೨೦೦೧

ಕುಂಬಾಸ, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ,** ಮಾಲತೇಶ, ಪ್ರಕಾಶನ, ಕುಂಚೂರು, ೧೯೯೦

ಕುಂಬಾಸ, **ಹಲವು ಹನ್ನೊಂದು ಹರಪನಳ್ಳಿ,** ಮಾಲತೇಶ ಪ್ರಕಾಶ, ಕುಂಚೂರು, ೨೦೦೧

ಕುಮಾರಸ್ವಾಮಿ, ಕೆ.ಎಸ್. **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

ಕುರುಡುಕೇರಿ, **ಹಂಪೆ ಅಥವಾ ವಿಜಯನಗರದ ಹಂಪೆ,** ವಿಭೂತಿ ಬಸಯ್ಯನವರು(ಪ್ರಕಾಶನ), ಹಂಪಿ, ೧೯೬೧

ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಎಂ.(ಸಂ), **ಕರ್ನಾಟಕ ಇತಿಹಾಸ ದರ್ಶನ,** ಪಿ.ಎಸ್.ಭಟ್, ಕರ್ನಾಟಕ ಸಹಕಾರಿ ಪ್ರಕಾಶನ, ನಿಯಮಿತ, ಬೆಂಗಳೂರು, ೧೯೭೦

ಕೃಷ್ಣಮೂರ್ತಿ ಪಿ.ಪಿ., **ಕರ್ನಾಟಕದ ಪ್ರಾಚೀನ ಆಡಳಿತ ವಿಭಾಗಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ,

ಕೃಷ್ಣಮೂರ್ತಿ ಪಿ.ವಿ. ಇತರರು(ಸಂ), **ಸೂರ್ಯಕೀರ್ತಿ ಸೂರ್ಯನಾಥ ಕಾಮತರ ಅಭಿನಂದನ ಗ್ರಂಥ,** ಸೂರ್ಯನಾಥ ಕಾಮತ್ ಅಭಿನಂದನಾ ಸಮಿತಿ, ಬೆಂಗಳೂರು, ೨೦೦೦

ಕೃಷ್ಣಮೂರ್ತಿ ಚೇಕೂರು, **ಹಂಪಿಯ ಇತಿಹಾಸದ ಕಥೆಗಳು,** ೨೪ನೆಯ ಅಖಿತ ಕರ್ನಾಟಕ ಮಕ್ಕಳ ಸಮ್ಮೇಳನ, ಬಳ್ಳಾರಿ, ೧೯೭೨

ಕೆಮ್ತೂರು ರಘುಪತಿ ಭಟ್, **ತುಳುನಾಡಿನ ಸ್ಥಳನಾಮಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೮

ಕೆಳದಿ ಗುಂಡಾಜೋಯಿಸ್, ಕೆಳದಿ ನೃಪವಿಜಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

ಕೊಪ್ಪ ಎಸ್.ಕೆ., **ತರ್ದವಾಡಿ ನಾಡು ಒಂದು ಅಧ್ಯಯನ,** ಪ್ರತಿಭಾ ಪ್ರಕಾಶನ, ಇಂಡಿ, ೧೯೯೦

ಕೊಟ್ರಯ್ಯ ಸಿ.ಟಿ.ಎಂ., **ಸರ್ವಾಂಗ ಲಿಂಗ,** ಶ್ರೀ ಶರಣ ಸುವಾಸಿನ ಬಳಗ, ಹೊಸಪೇಟೆ, ೧೯೯೯

ಕೊಟ್ರಯ್ಯ ಸಿ.ಟಿ.ಎಂ., **ಹಂಪೆ ವೀರಶೈವ ಮಠಗಳು ಮತ್ತು ಸಾಹಿತ್ಯ ಪರಂಪರೆ,** ಶರಣ ಸುವಾಸಿನ ಬಳಗ, ಹೊಸಪೇಟೆ, ೧೯೯೭

ಕೋಡದ ಎಸ್.ಬಿ., **ವಿಜಯನಗರ ಸಾಮ್ರಾಜ್ಯ ಸ್ಥಾಪನೆ,** ಪ್ರಯಾಗ ಪ್ರಕಾಶನ, ಹುಬ್ಬಳ್ಳಿ, ೧೯೬೭

ಕೋಡದ ಎಸ್.ಬಿ., **ವಿಜಯನಗರ ಸಾಮ್ರಾಜ್ಯ ಹಾಗೂ ಹಿಂದು ಮುಸ್ಲಿಂ ಬಾಂಧವ್ಯ**, ಕೋಡದ ಪ್ರಕಾಶನ, ಧಾರವಾಡ, ೧೯೬೬

ಗವಿಸಿದ್ದ ಎನ್.ಬಳ್ಳಾರಿ, **ತಿರುಳ್ಗನ್ನಡ**, ಅಖಿಲಭಾರತ ೬೩ನೇ ಕನ್ನಡ ಸಾಹಿತ್ಯ ಸಮ್ಮೇಳನ, ನೃಪತುಂಗ ಮಂಟಪ, ಕೊಪ್ಪಳ, ೧೯೯೩

ಗುಂಡಪ್ಪ ಡಿ.ವಿ., **ವಿಜಯನಗರ ಸ್ಥಾಪನೆ**, ಮೈಸೂರು, ೧೯೪೧

ಗುಂಡಪ್ಪ ಡಿ.ವಿ., ವಿದ್ಯಾರಣ್ಯರ ಸಮಕಾಲೀನರು, ಬೆಂಗಳೂರು, ೧೯೩೩

ಗುರುರತ್ನಬಾಬು ಡಿ., **ದಕ್ಷಿಣ ಭಾರತೀಯ ಕಲೆ ಮತ್ತು ವಾಸ್ತುಶಿಲ್ಪ**, ಯುವವಾಣಿ ಕ್ರಿಯೇಟಿವ್, ಮಾನಸಗಂಗೋತ್ರಿ, ಮೈಸೂರು, ೧೯೯೭

ಗೋಪಾಲ ಬಾ.ರಾ., **ಕರ್ನಾಟಕದ ಕಲೆಗಳು-ವಾಸ್ತು**, ಸಂಪುಟ ೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩

ಗೋಪಾಲ ಬಾ.ರಾ., **ವಿಜಯನಗರ ವಾಸ್ತುಶಿಲ್ಪ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩

ಗೋಪಾಲ ಬಾ.ರಾ., **ಕರ್ನಾಟಕದ ಇತಿಹಾಸ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೦

ಗೋಪಾಲರಾವ್ ಎಚ್.ಎಸ್.(ಸಂ), **ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ**(ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೯೦

ಗೋಪಾಲರಾವ್ ಎಚ್.ಎಸ್., **ನಾಗಾಭಿನಂದನೆ**, ಎಂ.ಜಿ.ನಾಗರಾಜ ಅಭಿನಂದನಾ ಸಮಿತಿ, ಬೆಂಗಳೂರು, ೨೦೦೦

ಗೋಪಾಲರಾವ್ ಎಚ್.ಎಸ್., **ಕನಕಸಿರಿ**, ಕನ್ನಡ ಸಾಹಿತ್ಯ ಪರಿಷತ್ತು, ೬೭ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಂಸ್ಮರಣೆ, ೧೯೭೧

ಚನ್ನಬಸಪ್ಪ ಕೋ. **ವಿಜಯನಗರದ ಶ್ರೀಕೃಷ್ಣದೇವರಾಯ**, ಶ್ರೀ ಗೌರಿಶಂಕರ್ ಬುಕ್ ಡಿಪೋ, ಮೈಸೂರು, ೧೯೫೫

ಚನ್ನಬಸಪ್ಪ ಪಾಟೀಲ, ವಿನೋದ ಪಾಟೀಲ(ಸಂ), **ವಿಜಯನಗರದ(ಹಂಪಿ ಶಾಸನಗಳು)**, ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೬

ಚಂದ್ರಶೇಖರ ನಾಣ್ಯಾಪುರ, **ಕರ್ನಾಟಕ ವೀರಶೈವ ಮಠಗಳು**, ಗೆಳೆಯ ಪ್ರಕಾಶನ, ಚಿಕ್ಕಮಗಳೂರು, ೨೦೦೨

ಚಿದಾನಂದಮೂರ್ತಿ ಎಂ., **ಕನ್ನಡಾಯಣ**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೯

ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯

ಚಿದಾನಂದಮೂರ್ತಿ ಎಂ., **ಕರ್ನಾಟಕ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು**, ಬೆಂಗಳೂರು, ೨೦೦೧

ಚಿದಾನಂದಮೂರ್ತಿ ಎಂ., **ಪಾಂಡಿತ್ಯ ರಸ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಚಿದಾನಂದಮೂರ್ತಿ ಎಂ., **ಸಂಶೋಧನೆ**, ಡಿ.ವಿ.ಕೆ.ಮೂರ್ತಿ, ಪ್ರಕಾಶಕರು, ಮೈಸೂರು, ೨೦೦೨

ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

ಚೆಲುವರಾಜು, **ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೨೦೦೦

ಜವರೇಗೌಡ ದೇ.(ಪ್ರಸಂ), **೬೦ನೇ ಕನ್ನಡ ಸಾಹಿತ್ಯ ಸಮ್ಮೇಳನ, ಮೈಸೂರು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೦

ಜವರೇಗೌಡ ದೇ.(ಸಂ), **ಸ್ವಾಗತ ಸಮಿತಿ**, ೬೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಮಂಡ್ಯ, ೧೯೯೪

ಜವರೇಗೌಡ ದೇ.(ಸಂ), **ಸಿರಿಯೊಡಲು**, ೬೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಮಂಡ್ಯ, ೧೯೯೪

ಜಯಶ್ರೀ ದಂಡೆ, **ವಚನಗಳಲ್ಲಿ ಶೈವ ಹಾಗೂ ವೀರಶೈವ**, ಕವಿಮಾರ್ಗ, ಪ್ರಕಾಶನ, ಕಲಬುರ್ಗಿ, ೧೯೯೪

ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು, ೧೯೯೭

ತಿಪ್ಪೇಸ್ವಾಮಿ ಎಚ್., **ದಾವಣಗೆರೆ ಜಿಲ್ಲೆಯ ದೇವಾಲಯಗಳು** (ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ದಯಾನಂದ ಪೈ, **ಗುಡಿ ಜನರ ಜೀವನಾಡಿ**, ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು, ೧೯೯೪

ದೀಕ್ಷಿತ್ ಜಿ.ಎಸ್., ಇತರರು, ಕೃಷ್ಣದೇವರಾಯನ ಜೀವನ ಸಾಧನೆಗಳು, ಪ್ರಾಚ್ಯವಸ್ತು ಸಂಗ್ರಹಾಲಯ, ಮೈಸೂರು, ೧೯೯೭

ದೀಕ್ಷಿತ್ ಜಿ.ಎಸ್.(ಸಂ), **ಶ್ರೀಕೃಷ್ಣದೇವರಾಯ ಮತ್ತು ಕನ್ನಡ ಸಂಸ್ಕೃತಿ, ಮೂರು ದತ್ತಿ ಉಪನ್ಯಾಸಗಳು**, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು, ೧೯೮೬

ದೇವರಕೊಂಡಾರೆಡ್ಡಿ ಮತ್ತು ಇತರರು, **ಹಂಪಿ ಶಾಸನಗಳು, ಸಂ.೩**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ದೇವರಕೊಂಡಾರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪

ದೇವರಕೊಂಡಾರೆಡ್ಡಿ, **ಲಿಪಿಯ ಉಗಮ ಮತ್ತು ವಿಕಾಸ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

ದೇಸಾಯಿ ಪಿ.ಬಿ., **ವಿಜಯನಗರ ಸಾಮ್ರಾಜ್ಯ**, ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಮಂಡಲ, ಧಾರವಾಡ, ೧೯೩೬

ದೇಸಾಯಿ ಪಿ.ಬಿ., ಮತ್ತಿತರರು, **ಕರ್ನಾಟಕ ಇತಿಹಾಸ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೧

ನರಸಿಂಹಮೂರ್ತಿ ಎಚ್.ವಿ. ಮತ್ತು ಮಾಲತಿಮೂರ್ತಿ ಕೆ.(ಸಂ), **ಕುಂದಾಪುರ ತಾಲ್ಲೂಕು ಒಂದು ಅಧ್ಯಯನ**, ಭಂಡಾರ್ಕರ್ಸ್ ಕಾಲೇಜು, ಕುಂದಾಪುರ

ನಂಜುಂಡಸ್ವಾಮಿ ಎ.ಎಸ್., **ವಿಜಯನಗರ ಇತಿಹಾಸ**, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೧

ನಂದಿಮಠ ಎಸ್.ಸಿ., **ಕರ್ನಾಟಕ ಧರ್ಮಗಳು**, ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ ೭೦, ಕರ್ನಾಟಕ ಸರ್ಕಾರ, ೧೯೮೩

ನರಸಿಂಹನ್ ಅ.ಲ. ಮತ್ತು ಮರಿಶಾಮಚಾರ್(ಸಂ), **ವಿಜಯನಗರ ಕಾಲದ ಶಿಲ್ಪಕಲೆ**, ಶಿಲ್ಪಕಲಾ ಪ್ರಪಂಚ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪

ನಾಗರಾಜಯ್ಯ ಎಚ್.ಎಂ., **ವಿಜಯನಗರ ಮತ್ತು ಮೈಸೂರು ಇತಿಹಾಸ**, ದಖನ್ ಪ್ರಕಾಶನ, ಬೆಂಗಳೂರು, ೧೯೭೨

ನಾಯಕ ಹಾ.ಮಾ., ವೆಂಕಟಾಚಲಶಾಸ್ತ್ರೀ ಟಿ.ವಿ.(ಸಂ), **ಕನ್ನಡ ಸಾಹಿತ್ಯ ಚರಿತ್ರೆ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೧

ನಾರಾಯಣಶೆಟ್ಟಿ ಕೆ., **ವಿಜಯನಗರದ ತುಳುವಂಶ**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೨

ನಾಗೇಗೌಡ ಎಚ್.ಎಲ್., **ಪ್ರವಾಸಿ ಕಂಡ ಇಂಡಿಯಾ**, ಸಂಪುಟಗಳು ೩, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೬

ನಾಗೇಂದ್ರಪ್ಪ ಕೆ., **ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

ನಿರೂಪಮಾ, **ಸಂಶೋಧನಾ ವಿಧಾನಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

ಪಂಚಮುಖಿ ಆರ್.ಎಸ್., ವಿರೂಪಾಕ್ಷ ವಸಂತೋತ್ಸವ, ಚಂಪು, ಧಾರವಾಡ, ೧೯೫೩

ಪಾಂಡುರಂಗರಾವ್ ದೇಸಾಯಿ, ವಿಜಯನಗರ ಸಾಮ್ರಾಜ್ಯ, ವಿಜಯನಗರ ಸಾಮ್ರಾಜ್ಯ ಸ್ಮಾರಕೋತ್ಸವ ಮಂಡಲ, ಧಾರವಾಡ, ೧೯೩೬

ಪಾಂಡುರಂಗರಾವ್ ದೇಸಾಯಿ, ಹಂಪೆ, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೧

ಪ್ರಭಾಕರ್ ಎಂ.ಎಸ್., ದೇವಾಲಯ ವಾಸ್ತುಚಂದ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಬಸಪ್ಪ ಎಸ್.(ಸಂ), ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೬

ಬಸಪ್ಪ ಎಸ್., ಶಿವತತ್ವ ಚಿಂತಾಮಣಿ, ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು,

ಬಸವರಾಜ ಮಲಶೆಟ್ಟಿ(ಸಂ), ವಿಜಯನಗರ ಇತಿಹಾಸದ ಬಗ್ಗೆ ಕೆಲವು ಭ್ರಮೆಗಳು, ತಿರುಳ್ಗನ್ನಡ, ಕೊಪ್ಪಳ ಸಾಹಿತ್ಯ ಸಮ್ಮೇಳನದ ಸವಿಸಂಚಿಕೆ, ೧೯೯೩

ಬಸವರಾಜ ಮಲಶೆಟ್ಟಿ, ಎನಗಿಂತ ಕಿರಿಯರಿಲ್ಲ, ಅಗಡಿ ಸಂಗಣ್ಣ ಅಭಿನಂದನಾ ಸಮಿತಿ, ಕೊಪ್ಪಳ

ಭೀಮಸೇನರಾವ್ ಡಿ.ಕೆ., ಅವಲೋಕನ-ಸಂಶೋಧನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦

ಭೂಸನೂರುಮಠ ಸಂ.ಶಿ.(ಸಂ), ವಿಜಯಕಲ್ಯಾಣ, ವಿಜಯನಗರ ಸಂಸ್ಕೃತಿಯ ಸಮಗ್ರ ದರ್ಶನ, ಮ.ಹ.ಸ್ಮಾ.ಸಂ.ಕೇಂದ್ರ, ಶ್ರೀ ಜ.ಕೋ.ಮಠ, ಹಂಪಿ, ೧೯೮೮

ಬೆಟಗೇರಿ ಕೃಷ್ಣಶರ್ಮ, ಕರ್ನಾಟಕದ ಜನಜೀವನ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೧

ಬ್ಯಾತನಾಳ್ ಎಸ್.ಎನ್., ಹೋಳಿ ಸಂಪ್ರದಾಯ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂಪುಟ ೬೬, ಸಂಚಿಕೆ ೧, ಜೂನ್ ೧೯೯೧

ಬೋರೆ ಅನಂತ ಕುಲಕರ್ಣಿ ಪ್ರಹ್ಲಾದ, ವಿಜಯನಗರ ಸಾಮ್ರಾಜ್ಯ, ೧೯೩೨

ಬ್ರೊದೋವ್ ವಿ.(ಮೂಲ), ಪ್ರಧಾನ ಗುರುದತ್ತ(ಅನು), ಆಧುನಿಕ ಯುಗದಲ್ಲಿ ಭಾರತೀಯ ತತ್ವಶಾಸ್ತ್ರ, ನವಕರ್ನಾಟಕ ಪ್ರಕಾಶನ, ಬೆಂಗಳೂರು

ಮಂಜುನಾಥ ಬೇವಿನಕಟ್ಟೆ(ಸಂ), ವಿಜಯನಗರ ಸಾಂಸ್ಕೃತಿಕ ಆಯಾಮಗಳು, ಶ್ರೀ ವಿದ್ಯಾವಿಜಯನದಕ ಹಂಪಿ ಹೆರಿಟೇಜ್ ಟ್ರಸ್ಟ್, ಆನೆಗೊಂದಿ, ೧೯೯೭

ಮಲ್ಲಾಪುರ ಬಿ.ವ್ಹಿ., ಪ್ರೌಢದೇವರಾಯ ವಿಜಯಕಲ್ಯಾಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಮಹಾದೇವ ಸಿ., **ವಿಜಯಗರ ದೇವಾಲಯಗಳ ಗಾರೆಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಮುತ್ತುಚಾರ್ಯ ಟಿ.ವಿ., **ಭಾರತೀಯ ಶಿಲ್ಪಶಾಸ್ತ್ರಸಾರ, ಭಾಗ ೧**, ಶಿಲ್ಪಕಲಾ ಪರಿಷತ್ತು, ಬೆಂಗಳೂರು, ೧೯೮೭

ಮನೋಜ್ ದಾಸ್(ಮೂಲ), **ಭಾರತದ ದೇವಾಲಯಗಳು**, ಸೀತಾರಾಮಯ್ಯ(ಅನು), ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೮

ರಮೇಶ ಕೆ.ವಿ., **ತುಳುನಾಡಿನ ಇತಿಹಾಸ**, ರಾ.ಗೋ.ಸಂಶೋಧನಾ ಕೇಂದ್ರ, ಉಡುಪಿ

ರಮಾನಂದ, **ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯನ**, (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ಬೆಂಗಳೂರು ವಿಶ್ವವಿದ್ಯಾಲಯ, ೧೯೮೯

ರಂಗಸ್ವಾಮಿ ಡಿ.ಟಿ., **ಭಾರತದ ಹಬ್ಬಗಳು**, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೩

ರಾಜಶೇಖರ ಸಿಂದಗಿ, **ಕರ್ನಾಟಕದ ವಾಸ್ತುಶಿಲ್ಪ ಮತ್ತು ಶಿಲ್ಪಕಲೆ**, ಸುಜಾತ ಪಬ್ಲಿಕೇಷನ್ಸ್, ಧಾರವಾಡ, ೧೯೮೮

ರಾಜಶೇಖರ್ ಎಸ್., **ವಿಜಯಗರದ ಘಟನಾವಳಿ ಸೂಚಿ**, ಸುಜಾತ ಪಬ್ಲಿಕೇಷನ್, ಧಾರವಾಡ

ರಾಜಾರಾಮ ಹೆಗಡೆ, **ಲೌಕಿಕ-ಅಲೌಕಿಕ**, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧

ರಾಬರ್ಟ್ ಸಿವೆಲ್, **ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ**, ಸದಾನಂದ ಕನವಳ್ಳಿ(ಅನು), ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೨

ರಾಮಚಂದ್ರರಾವ್ ಎಸ್.ಕೆ., **ಭಾರತದ ದೇವಾಲಯ ನೆಲೆ-ಹಿನ್ನೆಲೆ**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೭೯

ರಾಮಚಂದ್ರರಾವ್ ಎಸ್.ಕೆ., **ತಿರುಪತಿ-ತಿಮ್ಮಪ್ಪ**, ಐಬಿಎಚ್.ಪ್ರಕಾಶನ, ಬೆಂಗಳೂರು, ೧೯೮೦

ರಾಮಚಂದ್ರರಾವ್ ಎಸ್.ಕೆ., **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

ಲಕ್ಷ್ಮೀನಾರಾಯಣರಾವ್ ಎನ್. ಮತ್ತು ಪಂಚಮುಖಿ ಆರ್.ಎಸ್., **ಕರ್ನಾಟಕದ ಅರಸು ಮನೆತನಗಳು**, ಧಾರವಾಡ, ೧೯೪೬

ವಸುಂಧರ ಫಿಲಿಯೋಜ, ವಿಜಯನಗರ **ಸಾಮ್ರಾಜ್ಯ ಸ್ಥಾಪನೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೮

ವಸುಂಧರ ಪಿಳಿಯೋಜ, **ಅಳಿದುಳಿದ ಹಂಪೆ**, ಮಾನಸೋಲ್ಲಾಸ ಪ್ರಕಾಶನ, ಬೆಂಗಳೂರು, ೧೯೮೩

ವಸುಂಧರ ಫಿಲಿಯೋಜ, **ಹಂಪೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

ವಾಸುದೇವರಾವ್ ಎಂ.ವಿ. ಮತ್ತು ಕೇಶವನ್(ಸಂ), **ಕರ್ನಾಟಕ ಡೈರೆಕ್ಟರಿ**, ಅಜಾದ್ ಪಬ್ಲಿಕೇಷನ್ಸ್, ಬಸವನಗುಡಿ, ಬೆಂಗಳೂರು, ೧೯೫೨

**ವಿಜಯನಗರ ಅಧ್ಯಯನ, ಐದು ಸಂಪುಟಗಳು**, ಹಂಪಿ ಉತ್ಸವ ಸಂಚಿಕೆ, ಪ್ರಾಚ್ಯವಸ್ತು ಸಂಗ್ರಹಾಲಯ, ನಿರ್ದೇಶನಾಲಯ, ಮೈಸೂರು, ೧೯೯೭-೨೦೦೦

**ವಿಜಯನಗರ ಸ್ಮಾರಕೋತ್ಸವ**, ವಿಜಯನಗರ ಸ್ಮಾರಕೋತ್ಸವ ಮಂಡಲಿ, ಧಾರವಾಡ, ೧೯೩೮

ವೀರಭದ್ರಪ್ಪ ಕುಂ., **ಶ್ರೀ ಕೃಷ್ಣದೇವರಾಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ವೆಂಕಟರತ್ನಂ ಎ.ವಿ., **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

ವೆಂಕಟರಾಮಪ್ಪ ಕೆ., **ಶ್ರೀಕೃಷ್ಣದೇವರಾಯನ ಕಾಲದ ಕರ್ನಾಟಾಂಧ್ರ** ಸಾಹಿತ್ಯ ಸಮೀಕ್ಷೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪

ವೆಂಕಟರಾಮಣ್ಣ ಬಿ., **ವಿಜಯನಗರ ಇತಿಹಾಸಕ್ಕೆ ಕೋಲಾರ ಜಿಲ್ಲೆಯ ಕೊಡುಗೆಗಳು** (ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೪

ವೆಂಕೋಬರಾವ್ ಬಿ., **ಮೈಸೂರು ದೇಶದ ವಾಸ್ತುಶಿಲ್ಪ**, ಬೆಂಗಳೂರು, ೧೯೫೫

ಶರ್ಮಾ ಆರ್.ಎಸ್., **ಪ್ರಾಚೀನ ಭಾರತ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೭

ಶರ್ಮ ಡಿ.ಎಸ್.(ಮೂಲ), **ಕಾಲಗತಿಯಲ್ಲಿ ಹಿಂದೂ ಧರ್ಮ**, ರಾಮರಾವ್ ಎ. (ಅನು), ಭಾರತೀಯ ವಿದ್ಯಾಭವನ ಬೆಂಗಳೂರು ಕೇಂದ್ರ, ಬೆಂಗಳೂರು, ೧೯೮೭

ಶಾಮರಾವ್ ಜೆ.ಎನ್. **ವಿದೇಶಿಯರು ಕಂಡ ವಿಜಯನಗರ**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೧

ಶಿವಣ್ಣ ಕೆ.ಎಸ್., **ಕರ್ನಾಟಕ ಚರಿತ್ರೆ ಮಾಲಿಕೆ**, ಸಂ.೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಶಿವರಾಮ ಕಾರಂತ ಕೆ., **ಭಾರತೀಯ ಶಿಲ್ಪ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

ಶಿವರಾಮ ಕಾರಂತ ಕೆ., **ಚಾಲುಕ್ಯ ವಾಸ್ತು ಮತ್ತು ಶಿಲ್ಪ**, ಮೈಸೂರು ರಾಜ್ಯದ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೭೯

ಶಿವರಾಮ ಕಾರಂತ ಕೆ., **ಕಲೆಯ ದರ್ಶನ**, ಹರ್ಷ ಪ್ರಕಟಣಾಲಯ, ಪುತ್ತೂರು, ದಕ್ಷಿಣ ಕನ್ನಡ, ೧೯೬೫

ಶಿವರುದ್ರಸ್ವಾಮಿ ಎಸ್.ಎಸ್., **ಬಯಕಾರ ರಾಮಪ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಶಿವಶಂಕರ್ ಎಂ.ಎಲ್. ಮತ್ತು ಇತರರು(ಸಂ), **ವಿಜಯನಗರದ ಅಧ್ಯಯನ**, ಸಂ.೨, ಹಂಪಿ ಉತ್ಸವ, ೧೯೯೭ರಲ್ಲಿ ಮಂಡಿಸಿದ ಪ್ರಬಂಧಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, ೧೯೯೭

ಶಿವಾನಂದ ವಿರಕ್ತಮಠ, **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

ಶಾಂತೇಶ್ ಸಿ.ಪಾಟೀಲ್, **ಮೈಸೂರು ರಾಜ್ಯ**, ಮೈಸೂರು ಸರ್ಕಾರ, ವಾರ್ತಾ ಮತ್ತು ಪ್ರಚಾರ ಇಲಾಖೆ, ವಿಧಾನ ಸೌಧ, ಬೆಂಗಳೂರು, ೧೯೬೬

ಶೀಲಾಕಾಂತ ಪತ್ತಾರ್, **ಬಾದಾಮಿ ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಶ್ರೀಕಂಠಶಾಸ್ತ್ರೀ ಎಸ್., **ಹೊಯ್ಸಳ ವಾಸ್ತುಶಿಲ್ಪ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೫

ಶೇಷಶಾಸ್ತ್ರೀ ಆರ್., **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

ಷೇಕ್ ಅಲಿ ಬಿ.(ಪ್ರಸಂ)., **ಕರ್ನಾಟಕ ಚರಿತ್ರೆ ಕ್ರಿ.ಶ.೧೩೩೬-೧೭೬೦** ಸಂ.೩, ಚರಿತ್ರೆ ಮಾಲೆ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಸಜ್ಜನ ಎಸ್.ಎಸ್., **ವಿಜಯನಗರ ಕಾಲದ ಜಾತ್ರೆ ಮತ್ತು ಉತ್ಸವಗಳು**, ಕರ್ನಾಟಕ ವಿಶ್ವವಿದ್ಯಾಲಯ (ಎಂ.ಫಿಲ್. ಅಪ್ರಕಟಿತ ಪ್ರಬಂಧ), ಧಾರವಾಡ, ೧೯೯೬

ಸದ್ಯೋಜಾತಸ್ವಾಮೀಜಿ, **ವಿಜಯನಗರ ಕಾಲದ ಧಾರ್ಮಿಕ ಜೀವನ**, ಧಾರವಾಡ, ೧೯೮೧

ಸಂಗಮೇಶ ಸವದತ್ತಿಮಠ, **ವೀರಶೈವ ವಿನ್ಯಾಸ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦

ಸಂಪತ್ಕುಮಾರಾಚಾರ್ಯ ವಿ.ಎಸ್. ಇತರರು, **ಕರ್ನಾಟಕ ಸಂಗೀತ ದೀಪಿಕೆ**, ಡಿ.ವಿ.ಕೆ.ಮೂರ್ತಿ, ಮೈಸೂರು, ೨೦೦೦

ಸಾವುಕಾರ ಎಸ್.ಕಾಂಬಳೆ, **ಲಿಂಗಾಯತ ಅಸ್ಪೃಶ್ಯರು**, ವೀರಶೈವ ಅಧ್ಯಯನ ಸಂಸ್ಥೆ, ಗದಗ, ೨೦೦೩

ಸೀತಾರಾಮಯ್ಯ ಎಂ.ವಿ.(ಸಂ), **ಕೃಷ್ಣದೇವರಾಯನ ದಿನಚರಿ**, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೩

ಸೀತಾರಾಮಯ್ಯ ಎಂ.ವಿ.(ಸಂ), **ಚಿನ್ನದ ಬೆಳಕು**, ಕನ್ನಡ ಸಾಹಿತ್ಯ ಪರಿಷತ್ತು, ಸುವರ್ಣ ಮಹೋತ್ಸವದ ನೆನಪಿನ ಸಂಪುಟ, ೧೯೭೦

ಸುಂದರ ಅ.ಸಂ., **ಕರ್ನಾಟಕ ಚರಿತ್ರೆ ಮಾಲೆ, ಸಂ.೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಸುರೇಶ್ ಕೆ.ಎಂ.(ಸಂ), **ಬಳ್ಳಾರಿ ಜಿಲ್ಲೆಯ ದೇವಾಲಯ ಕೋಶ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಸೂರ್ಯನಾಥ ಕಾಮತ್, **ವಿಜಯನಗರ ಕಥೆಗಳು**, ಹಂಸಧ್ವನಿ ಪ್ರಕಾಶನ, ಬೆಂಗಳೂರು, ೧೯೯೨

ಸೂರ್ಯನಾರಾಯಣರಾವ್ ಬಿ., **ಮರೆಯಲಾಗದ ಮಹಾಸಾಮ್ರಾಜ್ಯ**, ಬಾಲಸುಬ್ರಮಣ್ಯ(ಅನು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಸೋಮಶೇಖರ್ ಎಸ್.ವೈ., **ಹಂಪೆಯ ಬಜಾರುಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಸೋಮಶೇಖರ್ ಎಸ್.ವೈ., **ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ** (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಹಂಪ ನಾಗರಾಜಯ್ಯ(ಸಂ), **ಚಾಮರಸ ವಿಚಾರ ಸಂಕಿರಣ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

ಹಿರೇಮಠ ಆರ್.ಸಿ.(ಸಂ), **ಕನಕದಾಸರ ಮೋಹನ ತರಂಗಣಿ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

ಹಿರೇಮಠ ಬಿ.ಆರ್., **ಸಾಹಿತ್ಯ ಪರಿಶೋಧ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮

ಹಿರೇಮಠ ಎಸ್.ಎಸ್., ಪಾಶುಪತ ದರ್ಶನ, ಸಮತಾ ಪ್ರಕಾಶನ, ಹರಪನಹಳ್ಳಿ, ೨೦೦೩

ಹಿರೇಮಠ ಆರ್.ಸಿ., **ಮಹಾಯಾತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಹಿರೇಮಲ್ಲೂರು ಈಶ್ವರನ್, **ಲಿಂಗಾಯತ ಧರ್ಮ ಸಂಸ್ಕೃತಿ ಮತ್ತು ಸಮಾಜ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೧

ಹುಣಶ್ಯಾಳ ಎಸ್.ಎಂ(ಪ್ರಸಂ), **ಕೃಷ್ಣೆ-ತುಂಗೆ, ೧೯೭೧, ಸಂಸ್ಮರಣೆ ಸಂಚಿಕೆ, ರಾಯಚೂರು**, ರಾಯಚೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು

ಹರಿದಾಸ ಎಂ.ಎಚ್., **ಲಕ್ಕುಂಡಿ ಕಲೆಯ ಬಲೆ**, ವಿಕ್ರಮ ಪ್ರಕಾಶನ, ಗದಗ, ೧೯೯೮

ಹರಿದಾಸ ಎಂ.ಎಚ್., **ಗದುಗಿನ ಶ್ರೀ ವೀರನಾರಾಯಣ ಹಾಗೂ ಕುಮಾರವ್ಯಾಸ** ವಿಕ್ರಮ ಪ್ರಕಾಶನ ಗದಗ, ೧೧೯೭

ಹರಿದಾಸ ಎಂ.ಎಚ್., **ಗದುಗಿನ ಶ್ರೀ ತ್ರಿಕೂಟೇಶ್ವರ ಹಾಗೂ ಸರಸ್ವತಿ ದೇವಾಲಯಗಳು** ವಿಕ್ರಮ ಪ್ರಕಾಶನ, ಗದಗ, ೧೯೯೯

ಜ್ಞಾನನಂದ ಜಿ., **ವಾಸ್ತು ಪುರುಷ ನೆಲೆ-ಹಿನ್ನೆಲೆ**, ಸಂಸ್ಕೃತಿ ಸಾಹಿತ್ಯ ಪ್ರಸಾರ ಸಮಿತಿ, ಕೆಜಿಎಫ್, ೧೯೯೨

## ಇಂಗ್ಲಿಶ್ ಗ್ರಂಥಗಳು


Acharya P.K., **Encyclopedia of Hindu Architecture,** J.K.Publishing House, Bhopa, 1978

Acharya P.K., **Architecture of Manasara,** Vol.iv, Oriental Books Reprint Corporation, New Delhi, 1934

Adam Hardy, **Indian Temple Architecture,** The Karnataka Dravida tradition 7th to 13th Centuries, Abhinava Publishing, New Delhi, 1995

Agarwala P.K., **Temple Architecture in Gupta Period,** Varanasi, 1968

Altekar A.S., **The Position of Women in Hindu Civilization,** Motilal Banarsidass Publishers, Delhi, 1991

Anita Vegeese, **Religious Traditions at Vijayanagara,** American Insititute of India Studies, New Delhi, 1995

Anne L, Dellapiccola and other, **The Ramachandra Temple at Vijayanagar,** Manohar, American Institute of Indian Studies, New Delhi, 1992

Ayyangar S.K., **The yet Remembered Ruler of a long forgotten Empire: Krishnadevaraya of Vijayanagara,** Madras, 1971

Ayyangar S.K., **Sources of Vijayanagar History,** Gian Publishing house, Delhi, 1981

Benerjea J.N., **Development of Hindu Iconography,** University of Calcutta, Calcutta, 1941

Bhajapai, K.D, **Evolution of Stupa,** J.O.E.S.I, Vol.xii

Bharagavi Shivaiah, **Krishnadevaraya his life and achivements(Ph.D.Thesis),** Karnataka University, Dharwad, 1943

Brown Percy, **Indian Architecture (Buddhist of Hindu Periods)**, D.B.Tarapore Vale sons & Co., Private Ltd., Bombay, 1943

Burton Stain, **Vijayanagar, The New Cambridge History of India,** Cambridge University Press, 1997

Burton Stein(Ed), **South Indian Temples,** New Delhi, 1978

Devakanjari D., **Hampi,** New Delhi, A.S.I, 1983

Devaraj D.V. and others(Ed), **In Vijayanagar Progress of Research,** 1983-88, Directorate of Archaeology and museums, Mysore

Dhaki M.A., **The Indian Temple Forms in Karnataka Inscriptions and Architecture,** Abhinava Publications, New Delhi, 1977

Divakar and others(Ed), **Karnataka through the Ages,** The Govt. of Mysore, Mysore 1968

Gravely and Ramachandran T.N., **Three main Styles temple Art Architecture Recognised by Silpasastra,** Madras, 1977

Gururaja Bhatta, **P.Studies in Tuluva History and Culture,** Kalyanapur, 1975

Haris, **Dictionary of Architecture and construction,** Mysore University, Mysore

Hari Rao, V.N., **The Srirangam Temple: Art and Architecture,** T.S.V.H.Series-8, Madras, 1967

Heras, H., **South Indian under the Vijayanagar Empire,** Cosmo Publications, New Delhi, 1980

Ismail K, **Karnataka Temples,** Sundeep Prakashana, Delhi, 1984

Jayanti V.G., **Hampi: A Cultural Study(Ph.D.Thesis: Unpublished),** Dharawad, Karnataka University, 1993

Kamaleshwera Rao, **Selected Vijayanagara temples of Rayalaseema,** Hyderbad, 1976

Kamble, M.T., **Vijayanagar temples at Hampi(Ph.D.Thesis : Unpublished),** Karnataka University, Dharwar, 1993

Karmarkar D.P.(Ed), **Vijayanagar Six Centenary Commemoration Volume,** Dharwad, 1936

Konduri Sarojinidevi, **Religious in Vijayanagar Empire,** New Delhi, 1990

Kotershwara Rao, **T.Amuktamalyada of Krishnadevaraya(Ph.D.Thises),** Osmania University, Hyderbad, 1964-66

Kotraiah C.T.M., **Inscriptions of the Vittala Temple at Hampi,** Indian History and Epigraphy, Dr.G.S.Goy Felicitation Volume, 1990

Krishnaswamy Ayyangar S., **Sources of Vijayanagara History,** Gion Publishing House, Delhi, 1986

Krishnaswamy Ayyangar S.(Ed), **Dravidian Architecture,** Asian Educational Services, New Delhi, 1987

Langharst A.H., **Hampi Ruins,** AES, New Delhi, 1998

Mahalingam T.V., **Administrative and Social life under Vijayanagar,** Part II, Madras, 1969-76

Mahalingam T.V., **South Indian temple Complex,** Karnataka Research Institute, Dharwar, 1970

Nagaraja Rao M.S.(Ed), **The Vijayanagar: Progress of research,** Directorate of Archaeology and Museums, Mysore, 1979-83

Nilakantasastri K.A. and Venkataramanayya N.(Ed), **Further Sources of Vijayanagar History,** Volumes 3, Madras, 1946

Patil C.S, **Temples of Bellary and Raichur District,** Directorate of Archaeology and Museums, Mysore, 1994

Patil C.S. and Vinoda Patil, **Inscriptions of Bellary District,** Dirctorate of Archaeology and Museums, Mysore, 1997

Radhakrishna Sharma M., **Temples of Telingana,** Munshiram Manoharlal Publications Pvt, Ltd, 1972

Rajashekara S., **The Inscriptions of Vijayanagara,** Sujatha Publications, Dharwad, 1984

Rajashekara S., **Master Pieces of Vijayanagar Art,** Dharwar, 1983, Taraporevala sons & Co., Bombay

Rajasekara S., **Map approach to Vijayanagara History,** Dharwar, 1983

Rajasekara S., **Karnataka Architecture,** Sujata Publications, Dharwar, 1985

Rao S.R., **The Note on the Cronoogy of early Chalukyan Temples,** Lalithakala, No.15, New Delhi, 1972

Ramarao M, **Krishandevaraya, National Book Trust,** New Delhi, 1971

Ramasharma M.H., **The History of Vijayanagar Empire,** Vol.I, II, Popular Prakashan, Bombay, 1978

Ramesan N., **Tirumala Temple,** TTD, 1981

Ramachandraiah O., **Studies on Krishnadevaraya of Vijayanagar,** ARIE, 1912, Varangal, 1953

Ramachandra Rao S.K., **Art and Architecture of Indian Temples,** Vol.III, Bangalore, 1992

Reddeppa K., **Vijayanagar Temples, Bharatiya Kala Prakashana,** New Delhi, 2001

Robert Sewell, **A Forgatten Empire,** Asian Educational Services, New Delhi, Madras 1991

Salatore B.A., **Social and Political life in Vijayangara Empire,** Part II, 1934

Salatore B.A., **Vijayanagara Art,** Sundeep Prakashan, Delhi, 1982

Salatore R.N., **Some aspects of art during the region of Krishnaraya the great,** VSC, Vol. Dharwad, 1936

Saraswathi Nanaiah, **N.Position of Women during Vijayanagar,** Saraswathi Publications, Mysore, 1992,

Sarkar D.C., **Select Inscriptions,** Calcutta, 1942

Seetapati P., **Sri Ahobila Narasimhaswami Temple,** Hyderabad, Govt. of A.P.Archaeological Survey-56, 1982

Shivaramamurthy C., **Vijayanagara Paintings Publications Division,** Ministry of Information and Broadcasting Govt. of India, 1985

Shivarudra Swamy N., **Vijayanagara temples in Karnataka,** Directiorate of Archacology of Muscums, Mysore, 1996

Smith D.H., **Festival in Pancharatra Literature,** Manohar Publications, New Delhi, 1982

Soundara Rajan, **Indian Temples Styles**, Munsiram Manoharala Publications, New Delhi, 1971

Sreenivasa K.R., **Temples of South India,** NBT, Madras, 1972

Sreerama Murthy Y., **Studies in the History of the Telugu country during the Vijayanagar period(1336-1650)**(Ph.D.Thesis), Karnakata University, Dharwad, 1973

Srinivasan P.R., **The Indian Temple Art and Architecture,** The Director, Prasaranga, University of Mysore, 1982

Stellakramriseh, **The Hindu Temple,** Vol-II, University of Calcutta, Calcutta, 1946

Sundara A., **The Early Kadamba temple Architecture,** QJMS, LXXV-3

Suresh K.M., **Sculptural Art of Hampi,** Directorate of Archaeology and Museum, Mysore, 1998

Suryakumari A., **The Temples in Andhradesh,** Gian Publishing house, Delhi, 1988

Venkataramanayya N., **Studies in the History of the third dynasty of Vijayanagar,** Madras, 1935

Venkkataramanayya N., **The date of the construction of the temples of Hazara Ramaswami and Vittala at Vijayanagar,** Journal of Orient Resrarch 15, 1945

Venkataramanayya N., **An eassay on the South Indian Temples,** Asian Educational Services, New Delhi, 1985

Vijayaraghavacharya, **Vijayanagar Inscriptions of Krishnadevarayas time,** Vol.iii, Sri Sat Guru Publications, India, 1984

**ಕನ್ನಡ ಲೇಖನಗಳು**

ಚನ್ನಪ್ಪ ಎ., **ಪ್ರೌಢದೇವರಾಯನ ಕಾವ್ಯದಲ್ಲಿ ಮತಸಂಘರ್ಷ,** ಹೊಸಪೇಟೆ ತಾಲೂಕು, ವೀರಶೈವ ನೌಕರರ ಸಂಘ, ೨೦೦೦, ಪು.೪೭-೫೦

ಚಿದಾನಂದಮೂರ್ತಿ ಎಂ., *ಬುಕ್ಕರಾಯನ ಶ್ರವಣಬೆಳಗೊಳದ ಮೇಲೆ ಹೊಸಬೆಳಕು,* **ಹೊಸತು ಹೊಸತು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩, ಪು.೨೩೦-೩೮

ದೀಕ್ಷಿತ್ ಜಿ.ಎಸ್., *ವಿಜಯನಗರ ಸಾಮ್ರಾಜ್ಯ ಸ್ಥಾಪನೆ,* **ನಾಗಾಭಿನಂದನ,** ಎಂ.ಜಿ.ನಾಗರಾಜ್ ಅಭಿನಂದನ ಸಮಿತಿ, ಬೆಂಗಳೂರು, ಪು.೯೪-೯೮

ದೇವರಾಜ್ ಡಿ.ವಿ., *ವಿಜಯನಗರದ ಶಾಸನಗಳು,* **ನಾಗಭಿನಂದನ,** ಎಂ.ಜಿ.ನಾಗರಾಜ್ ಅಭಿನಂದನ ಸಮಿತಿ, ಬೆಂಗಳೂರು, ಪು.೯೯-೧೦೪

ನರಸಿಂಹಚಾರ್ ಜಿ.ಎಲ್., *ವಿಜಯನಗರ ಕಾಲದ ಸಾಹಿತ್ಯ,* **ಪ್ರಬುದ್ಧ ಕರ್ನಾಟಕ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು,

ನಿರುಪಮಾ, *ವಿಜಯನಗರದ ಇತಿಹಾಸಕ್ಕೆ ತೆಲುಗು ಸಾಹಿತ್ಯದ ಆಕರಗಳು,* **ಇತಿಹಾಸ ದರ್ಶನ,** ಸಂ.೩, ಸಂಚಿಕೆ ೧, ಪು.೨೧೪ ೧೮, ಕ.ಇ.ಅ., ಬೆಂಗಳೂರು, ೧೯೮೮

ಪರಮಶಿವಮೂರ್ತಿ ಡಿ.ವಿ., *ಅತ್ತಿವಟ್ಟಿಯ ಅಪ್ರಕಟಿತ ಶಾಸನ,* **ಹಂಪೆಯ ಬಾಲಕೃಷ್ಣ,** ಸೂರ್ಯಕೀರ್ತಿ, ಸೂ.ಅ.ಸಮಿತಿ, ಬೆಂಗಳೂರು, ೨೦೦೦

ಬಸವರಾಜ ಮಲಶೆಟ್ಟಿ, *ವಿಜಯನಗರ ಇತಿಹಾಸದ ಬಗ್ಗೆ ಕೆಲವು ಭ್ರಮೆಗಳು,* **ತಿರುಳ್ಗನ್ನಡ,** ಕೊಪ್ಪಳ, ೧೯೯೩

ಲಕ್ಷ್ಮಣ್ ತೆಲಗಾವಿ, *ಕೃಷ್ಣದೇವರಾಯನ ಇನ್ನೊಂದು ಹೊಸ ಶಾಸನ,* **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ,** ೭೫-೨, ಬೆಂಗಳೂರು, ೧೯೯೭

ವಿರೂಪಾಕ್ಷಿ ಪೂಜಾರಹಳ್ಳಿ, *ವಿಜಯನಗರ ಕಾಲದ ವಾಸ್ತುಶಿಲ್ಪದಲ್ಲಿ ಬೇಟೆ ಚಿತ್ರಣ,* **ಇತಿಹಾಸ ದರ್ಶನ** ೧೪, ಪು.೧೬೬-೧೭೩, ಕ.ಇ.ಅ, ಬೆಂಗಳೂರು, ೧೯೯೯

### ಪತ್ರಿಕೆಗಳು

ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಬೆಂಗಳೂರು

ಕರ್ನಾಟಕ ಭಾರತಿ, ಧಾರವಾಡ

ಪ್ರಜಾವಾಣಿ, ಬೆಂಗಳೂರು

ಮಾನವಿಕ ಕರ್ನಾಟಕ, ಮೈಸೂರು

ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ

ಸಾಧನೆ, ಬೆಂಗಳೂರು

ಇತಿಹಾಸ ದರ್ಶನ, ಬೆಂಗಳೂರು

Journal of Indian History

Mysore State Gazetter, Vol.1-5, Bangalore, 1927-30

Mysore Archaeological Reports, 1928-46

**Reports and Journals**

Annual Report of Indian Epigraphy(ARIE)

Annual Report, Archaeological Survey of India(ARASI)

Annual Report of South Indian Epigraphy(ARSIE)

Epigrapia Indica(EI)

Epigrapia Cornatika(EC)

Indian Antiquary, Bombay

Kannda University Inscriptions, Volume 1-5, Vidyaranya

Karnataka Inscriptions(KI), Dharwad

Madras District Gazette, Bellary, 1916(W.Francies), Madras

Progress Research of Kannada Research Insitute(PRKRI), Dharwad

Quarterly Journal of Mythic Society, Bangalore

South Indian Inscriptions(SII)

Vijayanagar Progress of Research(VPR), Mysore

Tirupati Tirumala Devastanam Inscriptions Volumes(TTDI)

Tirupati Tirumala Epigraphical Report(TTER)

Imperial Gazetteer of India

Mysore Gazetteer-Volumes 1-5, C.Hayavadan Rao, Bangalore, 1930

J.O., E.S.I., Vol-13

Encyclopeadia of Britanica

**Reports**

Iswara Dutt, **The Years of Birth and death of Tirumaladeva,** Karnataka Historical Review, V, 1938

Hanumantha Rao S., *The Influence of the religious school of Srimadhava on the history of Vijayanagara,* **Q.J.M.S.,** Vol-70, P.284, Bangalore, 1929-30

Heras H., *Seven days at Vijayanagara,* **Journals of Indian History,** ix-1930

Krishna Sastri H., *The Second Vijayanagar dynasty: the third Vijayanagar dynasty,* **Annual Report** of the A.S.I., New Delhi, 1908-09 and 1911-12

Mahalingam T.V., *Tirumaladeva Maharaja,* **Journal of Indian History,** xvii, 1938

Oruganti Ramachandraiah, **Krishnadevaraya of Vijayanagara,** Q.J.M.S. LXIX, Jan-June, No.1-2, Bangalore, 1978

Rangaswamy Saraswati A., *Political maxims of the Emperor poet Krishnadeyaraya,* **Journal of Indian History** 4-3, 1926

Sivaramamurthy C. *Balakrishna from Hampi in the Madras Museum,* **Journal of Oriental research,** x, Madras, 1936

Srikantasastri S., ***The Vittala temple at Hampi,*** **Q.J.M.S.,** 1940-41, Bangalore.

ನಿಘಂಟು

**ಇಂಗ್ಲೀಷ್ ಕನ್ನಡ ನಿಘಂಟು,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೯

**ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯

**ಕನ್ನಡ ಕನ್ನಡ ಕಸ್ತೂರಿಕೋಶ,** ಧಾರವಾಡ

**ಸಂಕ್ಷಿಪ್ತ ಕನ್ನಡ ನಿಘಂಟು,** ಕ.ಸಾ.ಪ., ಬೆಂಗಳೂರು, ೨೦೦೧

**ಕನ್ನಡ ವಿಷಯ ವಿಶ್ವಕೋಶ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೫

**ಜ್ಞಾನಗಂಗೋತ್ರಿ,** ಕಿರಿಯ ವಿಶ್ವಕೋಶ, ಸಂ.೫, ಕಲೆ ಸಾಹಿತ್ಯ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೩

## ಪಾರಿಭಾಷಿಕ ಪದಗಳು

| | |
|---|---|
| ಅಂಕಣ | ವಿಂಗಡಣೆಯ ಒಂದು ಭಾಗ |
| ಅಂಜಲಿಮುದ್ರೆ | ಕೈ ಜೋಡಿಸಿ ಮುಗಿಯುವುದು |
| ಅಂತರ್ಭಿತ್ತಿ | ಗರ್ಭಗೃಹದ ಸುತ್ತ ಇರುವ ಒಳಬಿತ್ತಿ |
| ಅಂತರಾಳ | ಗರ್ಭಗುಡಿ ಮತ್ತು ನವರಂಗದ ಮಧ್ಯಭಾಗ |
| ಅಧಿಷ್ಠಾನ | ದೇವಾಲಯದ ಗೋಡೆಗೆ ಆಧಾರವಾಗಿರುವ ಕೆಳಭಾಗ |
| ಅಭಯ ಹಸ್ತ | ಸಂರಕ್ಷಣಾ ಸೂಚಿಹಸ್ತ |
| ಅಭಿಷೇಕ ಜಲ | ದೇವತಾಮೂರ್ತಿಗೆ ಎರೆಯುವ ನೀರು |
| ಅಮ್ಮನವರ ಗುಡಿ | ಪುರುಷ ದೇಗುಲದ ಎಡಬದಿಯ ಸಣ್ಣ ಸ್ತ್ರೀ ದೇಗುಲ |
| ಅರೆಗಂಬ(ಕಂಬ) | ಗೋಡೆಗಳ ನಡುವಣ ಅರ್ಧಕಂಬ, ಕಂಬದ ಅರ್ಧಭಾಗ ಗೋಡೆಯಲ್ಲಿ ಸೇರಿದ್ದು, ಉಳಿದ ಅರ್ಧಭಾಗ ಮಾತ್ರ ಗೋಚರಿಸುತ್ತದೆ. |
| ಅಕ್ಷಮಾಲಾ | ಮಣಿಗಳ ಸರ(ಜಪಮಾಲೆ) |
| ಉತ್ತರೀಯ | ಮೇಲೆ ಹೊದಿಕೆ; ಪಂಚೆ |
| ಉತ್ಸವ ಮಂಟಪ | ರಥೋತ್ಸವ, ಉತ್ಸವಗಳು, ದೇವಾಲಯದಿಂದ ಹೊರಟು ತಲುಪಬೇಕಾದ ನಿರ್ದಿಷ್ಟ ಸ್ಥಳ |
| ಉದರಬಂಧ | ಮೂರ್ತಿಯ ಎದೆಯ ಭಾಗದಲ್ಲಿ ಧರಿಸಿರುವ ಆಭರಣ |
| ಉಪಪೀಠ | ದೇವಾಲಯದ ಅಧಿಷ್ಠಾನದಲ್ಲಿನ ಒಂದು ಭಾಗ |
| ಉಪಾನ | ದೇಗುಲದ ತಳಭಾಗ |
| ಏಕಕೂಟ | ಒಂದು ಗರ್ಭಗೃಹವಿರುವ ದೇಗುಲ |
| ಊರ್ಧ್ವಮುಖಕ್ರಮ | ದೇವಾಲಯದ ಹೊರಭಾಗದಲ್ಲಿ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತ ರೀತಿಯಲ್ಲಿ ರಚಿಸುವುದು. |
| ಕಟಾಂಜನ | ಕಟಕಟೆ, ಕುಳಿತುಕೊಳ್ಳಲು ಅನುವಾಗುವ ಕಟ್ಟೆ |
| ಕಟ್ಯಾವಲಂಬಿತ | ಕಟಿ ಸೊಂಟ ಹಿಡಿದಿರುವ ಕೈ |
| ಕಕ್ಷಾಸನ | ಕುಳಿತುಕೊಳ್ಳಲು ನಿರ್ಮಿಸಿದ ಕಟ್ಟೆ |
| ಕಲ್ಯಾಣ ಮಂಟಪ | ಶುಭಕಾರ್ಯಗಳಿಗೆ ಕಟ್ಟಲಾದ ಮಂಟಪ |

| | |
|---|---|
| ಕಪೋತ | ದೇಗುಲದ ಮೇಲ್ಭಾವಣಿಯ ನೀರು ಗೋಡೆಯ ಮೇಲೆ ಬೀಳದಂತೆ ಮಾಡಿದ ಮುಂಚಾಚಿದ ರಚನೆ |
| ಕಳಸ | ಶಿಖರದ ಮೇಲಿನ ಪಾತ್ರೆಯಂತಹ ಭಾಗ |
| ಕಳಸ | ದೇವಾಲಯದ ಗೋಪುರಕ್ಕೆ ಹಾಕುವ ಕಂಚು ಅಥವಾ ಹಿತ್ತಾಳೆಯ ಅಲಂಕಾರದ ಶಿಖರ |
| ಕಿರೀಟ ಮುಕುಟ | ತಲೆಯ ಮೇಲೆ ಕಿರೀಟ ಧರಿಸಿದ ಮೂರ್ತಿ |
| ಕೀರ್ತಿಮುಖ | ಅಲಂಕಾರದ ಒಂದು ವಿಧ, ವೈಭವ, ಭವ್ಯತೆಯ ಸೂಚಿಸುವ ಅಲಂಕಾರ |
| ಕುಂಡಲ | ಕಿವಿಯ ಅಭರಣ, ಕಿವಿಯೋಲೆ |
| ಕುಂಭ | ಗಡಿಗೆ, ಕುಂಭದ ಆಕಾರದ ಕಳಸ |
| ಕುಂಭಲತಾ | ಭಿತ್ತಿಯಲ್ಲಿ ಕುಡ್ಯಸ್ತಂಭಗಳ ನಡುವಿನ ಅಲಂಕಾರಿಕ ಭಾಗ |
| ಕುಚಬಂಧ | ಸ್ತನಪಟ್ಟಿ |
| ಕುಮುದ | ಅಧಿಷ್ಠಾನದಲ್ಲಿ ಕಾಣಬರುವ ಅಂಗ |
| ಕೋಷ್ಠಕ | ಮೂರ್ತಿಗಳನ್ನು ಇಡಲು ಮಾಡಿದ ಚಿಕ್ಕ ಗೂಡು |
| ಖಟ್ವಾಂಗ | ಮೊಳಕ್ಕೆ ಮೂಳೆಯಿಂದ ತಯಾರಿಸಿದ ಗದೆಯಾಗಿದ್ದು, ಮೇಲ್ಭಾಗದಲ್ಲಿ ಮನುಷ್ಯನ ತಲೆಬುರುಡೆ ಇರುತ್ತದೆ |
| ಗರ್ಭಗೃಹ | ಮೂಲ ದೇವತಾ ಮೂರ್ತಿ ಇರುವ ದೇವಾಲಯದ ಭಾಗ |
| ಗರುಡಗಂಭ | ದೇವಾಲಯದ ಮುಂದೆ ನಿಲ್ಲಿಸಿರುವ ಗರುಡನ ಚಿತ್ರ ಕೆತ್ತಿದ ದೀಪಸ್ತಂಭ |
| ಗೃಹಪಿಂಡಿ | ಗರ್ಭಗೃಹದ ಸುತ್ತ ಇರುವ ಭಿತ್ತಿ |
| ಗ್ರೀವ | ಶಿರೋಭಾಗ, ಶಿಖರದ ಕತ್ತಿನ ಭಾಗ |
| ಗೋಪಾರ | ಪ್ರವೇಶದ್ವಾರದ ಮೇಲಿನ ಮೇಲ್ಕಟ್ಟಡ |
| ಚಕ್ಕಕುಂಡಲ | ದುಂಡಾಕಾರದ ಕಿವಿಯೋಲೆ ಕಿವಿಯ ಆಭರಣ |
| ಚಾಚುಪೀಠ | ಕಂಬದ ಮೇಲ್ಭಾಗದ ಮುಂಚಾಚಿದ ರಚನೆ |
| ಜಗತಿ | ಅಧಿಷ್ಠಾನದ ತಳಹದಿ |
| ಜಗಲಿ | ವೇದಿಕೆ, ಕಟ್ಟೆ |
| ತಳ(ಲ) | ಅಂತಸ್ತು |
| ತ್ರಿಪಟ್ಟಕುಮುದ | ಮೂರು ಮುಖದ ಕುಮುದ |
| ದ್ವಾರಪಾಲಕರು | ಬಾಗಿಲನ್ನು ಕಾಯುವ ಸೇವಕರು |
| ದ್ವಾರಬಂಧ | ಬಾಗಿಲ ಚೌಕಟ್ಟು, ಬಾಗಿಲಿನ ನಿಲವು |

| | |
|---|---|
| ದ್ರಾವಿಡ ಶೈಲಿ | ದಕ್ಷಿಣ ಭಾರತೀಯ ದೇವಾಲಯಗಳ ವಾಸ್ತುಶಿಲ್ಪ ಮಾದರಿ |
| ದ್ವಿಕೂಟ | ಎರಡು ಗರ್ಭಗುಡಿಗಳಿರುವ ದೇವಾಲಯ |
| ದ್ವಿತಳ(ಲ) | ಎರಡು ಅಂತಸ್ತಿರುವ ಗೋಪುರ |
| ದೀಪಸ್ತಂಭ | ವಿಶೇಷ ಸಂದರ್ಭಗಳಲ್ಲಿ ದೀಪ ಹಚ್ಚಲು ನಿಲ್ಲಿಸಿದ ಕಲ್ಲಿನ ಕಂಭ |
| ಧನಸ್ಸು | ಬಿಲ್ಲು |
| ನಾಭಿ | ಹೊಕ್ಕಳು |
| ನಿರಂಧಾರ ದೇವಾಲಯ | ಗರ್ಭಗೃಹದ ಸುತ್ತ ಪ್ರದಕ್ಷಿಣಾಪಥ ಇಲ್ಲದಿರುವ ದೇವಾಲಯ |
| ಪಂಜರ | ಗೂಡು ಕೂಟ ಶಾಲಾಗಳ ಮಧ್ಯಭಾಗ |
| ಪಟ್ಟಿಕಾ | ಅಧಿಷ್ಠಾನದ ಕೊನೆಯ ಅಂಗ, ವಾಜನದಂತೆಯೇ ಹೊರಚಾಚಿರುವ ಅಗಲವಾದ ಪಟ್ಟಿ |
| ಪದ್ಮ | ಕಮಲ |
| ಪದ್ಮಪೀಠ | ಪದ್ಮದಿಂದ ಅಲಂಕರಿಸಿದ ಪೀಠ |
| ಪದ್ಮಾಸನ | ಪದ್ಮದ ಮೇಲೆ ಕುಳಿತಿರುವುದು ಎರಡು ಕಾಲನ್ನು ಒಳಭಾಗಕ್ಕೆ ಮಡಚಿ ಕುಳಿತಿರುವುದು |
| ಪರಿವಾರ | ಮುಖ್ಯ ದೇವತೆಯರ ಉಪದೇವತೆಗಳು |
| ಪುಷ್ಪಬೋದಿಗೆ | ಪದ್ಮಾಲಂಕಾರವುಳ್ಳ ಬೋದಿಗೆ |
| ಪ್ರಣಾಳ | ಅಭಿಷೇಕ ಮಾಡಿದ ನೀರು ಹೊರ ಹೋಗಲು ಮಾಡಿರುವ ನಾಳ |
| ಪ್ರದಕ್ಷಿಣಾ ಪಥ | ಭಕ್ತಾದಿಗಳು ಗರ್ಭಗುಡಿಯನ್ನು ಸುತ್ತಿಬರಲು ಇರುವ ದಾರಿ |
| ಪ್ರಭಾವಳಿ | ಮೂರ್ತಿಗಳ ಬೆನ್ನ ಹಿಂದೆ ಮಾಡಿರುವ ಸುತ್ತಲಿನ ಅಲಂಕಾರಿಕ ಪಟ್ಟಿ |
| ಪ್ರಾಕಾರ ಗೋಡೆ | ದೇವಾಲಯದ ಸುತ್ತ ಕಟ್ಟಲಾದ ರಕ್ಷಣಾತ್ಮಕ ಗೋಡೆ |
| ಬಲಿಪೀಠ | ಬಲಿಕೊಡುವ ಸ್ಥಳ |
| ಬೋದಿಗೆ | ಕಂಭದ ಮೇಲೆ ಮುಂಚಾಚಿದ ಭಾಗ |
| ಭಜನಾ ಮಂಟಪ | ಭಜನೆ ಇತ್ಯಾದಿ ಕಾರ್ಯಕ್ರಮಗಳಿಗೆಂದು ಕಟ್ಟಿದ ಮಂಟಪ |
| ಭುಜಬಂಧ | ಮೂರ್ತಿಭುಜಕ್ಕೆ ಧರಿಸಿದ ಆಭರಣ |
| ಭುವನೇಶ್ವರಿ | ಸೂಕ್ಷ್ಮ ಕೆತ್ತನೆಯ ಕೆಲಸದಿಂದ ಕೂಡಿದ ದೇಗುಲದ ಮೇಲ್ಛಾವಣಿಯ ಒಳಮೈ ಭಾಗ |
| ಮಕರತೋರಣ | ಮೊಸಳೆಯ ಬಾಯಿಂದ ತೋರಣಗಳು ಹೊರಬಂದ ಹಾಗೆ ಮಾಡಿರುವ ಅಲಂಕಾರ |

| | |
|---|---|
| **ಮಹಾದ್ವಾರ** | ಮುಖ್ಯ ಪ್ರವೇಶದ್ವಾರ |
| **ಮಹಾಮಂಟಪ** | ನವರಂಗ(ಸಭಾಮಂಟಪ)ಕ್ಕೆ ಹೊಂದಿಕೊಂಡಿರುವ ಉದ್ದನೆಯ ಭಾಗ |
| **ಮುಖಮಂಟಪ** | ಪ್ರವೇಶಮಂಟಪ |
| **ಮುಖ್ಯವಿಮಾನ** | ಐದರಿಂದ ಹನ್ನೆರಡು ತಲಗಳನ್ನು ಹೊಂದಿರುವ ದೇವಾಲಯದ ಗೋಪುರಗಳ ಭಾಗ |
| **ಯಜ್ಞೋಪವೀತ** | ದೇಹದಲ್ಲಿ ಧರಿಸಿದ ಪವಿತ್ರ ದಾರ |
| **ಯಾಳಿ** | ಸಿಂಹಮುಖ, ಆನೆಯ ಕೋರೆ ಹಾಗೂ ಸೊಂಡಿಲುಗಳಿರುವ ಕಾಲ್ಪನಿಕ ಪ್ರಾಣಿ |
| **ಯೋಗಮುದ್ರೆ** | ಧ್ಯಾನದಲ್ಲಿ ಕುಳಿತ ಭಂಗಿ |
| **ರಂಗಮಂಟಪ** | ಸಂಗೀತ, ನೃತ್ಯ, ನಾಟಕ ಮುಂತಾದವುಗಳ ಪ್ರದರ್ಶನ ಸ್ಥಳ |
| **ರೂವಾರಿ** | ಶಿಲ್ಪಿ |
| **ಲಲಾಟಬಿಂಬ** | ದ್ವಾರದ ಮಧ್ಯದಲ್ಲಿ ಧಾರ್ಮಿಕ ಪಂಥವನ್ನು ಸೂಚಿಸುವ ಪ್ರತಿಬಿಂಬಕ ಚಿತ್ರ |
| **ಲಲಿತಾಸನ** | ಒಂದು ಕಾಲನ್ನು ಇಳಿಬಿಟ್ಟು ಮತ್ತೊಂದು ಕಾಲನ್ನು ಮಡಚಿ ಕುಳಿತಿರುವ ಭಂಗಿ |
| **ವರದ ಹಸ್ತ** | ಭಕ್ತರಿಗೆ ವರ ನೀಡುವ ಹಸ್ತ |
| **ವಲ್ಲಿಬಂಧ** | ಬಳ್ಳಿಗಳು ಒಂದಕ್ಕೊಂದು ವೃತ್ತಾಕಾರದಲ್ಲಿ ಹೆಣೆದುಕೊಂಡಂತಿರುವ ಕಿಟಕಿ |
| **ವಾತಾಯನ** | ಗಾಳಿ ಬೆಳಕಿಗಾಗಿ ಗೋಡೆಯಲ್ಲಿ ಮಾಡಿರುವ ಕಿಟಕಿ |
| **ವಿಮಾನ** | ಗರ್ಭಗೃಹದ ಮೇಲಿನ ಶಿಖರ |
| **ವೇದಿ(ವೇದಿಕಾ)** | ಭಿತ್ತಿಯಲ್ಲಿ ಬರುವ ಮೊದಲ ಅಂಗ |
| **ಶಿಖರ** | ದೇವಾಲಯದ ಗರ್ಭಗೃಹದ ಮೇಲಿನ ರಚನೆ |
| **ಸಾಂಧಾರ ದೇವಾಲಯ** | ಗರ್ಭಗೃಹದ ಸುತ್ತ ಪ್ರದಕ್ಷಿಣಾಪಥವಿರುವ ದೇವಾಲಯ |
| **ಸಭಾಮಂಟಪ** | ಅಂತರಾಳದ ಮುಂಬದಿಯ ಒಂಭತ್ತು ಅಂಕಣಗಳಿಂದ ಕೂಡಿದ ಭಾಗ |
| **ಸಮಭಂಗಿ** | ಎರಡು ಕಾಲಿನ ಮೇಲೆ ಸಮನಾಗಿ ನಿಂತ ಭಂಗಿ |
| **ಸುಕನಾಶಿ** | ಗಿಣಿಯ ಕೊಕ್ಕಿನಂತೆ ಶಿಖರದ ಮುಂಭಾಗದಲ್ಲಿ ಮುಂಚಾಚಿದ ರಚನೆ |
| **ಸೂತ್ರಧಾರಿ** | ವಾಸ್ತುಶಿಲ್ಪಿ |
| **ಸ್ತೂಪಿ** | ಕಲಶದ ಮೇಲಿನದ ಮೊನಚಾದ ಕೊನೆಯ ಭಾಗ |
| **ಸೋಪಾನ** | ಮೆಟ್ಟಿಲು, ಪಾವಟಿಗೆ |



೧. ಅರಾಭಿಕೊತ್ತನೂರಿನ ಮೂಲ ವೀರಭದ್ರ ಮೂರ್ತಿ



೨. ವಿಜನಯಗರ ಕಾಲದ ಅವಶೇಷಗಳನ್ನು ಹೊಂದಿರುವ
ವೀರಭದ್ರ ದೇವಸ್ಥಾನ



೩. ಅಲಸೂರಿನ ಸೋಮೇಶ್ವರ ದೇವಸ್ಥಾನದ



೪. ಸೋಮೇಶ್ವರ ದೇವಸ್ಥಾನದ ಅಮ್ಮನವರ ದೇವಸ್ಥಾನದ
ಬಿತ್ತಿಯಲ್ಲಿರುವ ಗಿರಿಜಾ ಕಲ್ಯಾಣದ ಚಿತ್ರಗಳು



೫. ಗಣೇಶನ ದೇವಸ್ಥಾನ ಕುರುಡುಮಲೈ



೬. ಗಣೇಶನ ದೇವಸ್ಥಾನದಲ್ಲಿರುವ ವಿಜಯನಗರ
ಸಾಮ್ರಾಜ್ಯದ ರಾಜ್ಯ ಲಾಂಛನ



೭. ನಟೇಶ್ವರ ದೇವಸ್ಥಾನ, ಕುರುಡುಮಲೈ
ಹಿಂಬದಿಯ ನೋಟ



೮. ನಟೇಶ್ವರ ಶಿವಲಿಂಗ



೯. ಕೆಳಗೇರಿಯ ಮಲ್ಲಿಕಾರ್ಜುನ ದೇವಸ್ಥಾನದ
ವಿಹಂಗಮ ನೋಟ



೧೦. ಮಲ್ಲಿಕಾರ್ಜುನ ದೇವಸ್ಥಾನದ
ನವರಂಗದ ಕಂಬಗಳು



೧೧. ಕೋಲಾರದ ಸೋಮೇಶ್ವರ ದೇವಾಲಯದ
ವಿಹಂಗಮ ನೋಟ



೧೨. ಸೋಮೇಶ್ವರ ದೇವಸ್ಥಾನದ ಗರ್ಭಗೃಹ
ಮತ್ತು ಶಿಖರ



೧೩. ಕೋಗಳಿಯ ವೀರಭದ್ರ ದೇವಸ್ಥಾನ



೧೪. ವೀರಭದ್ರನ ಮೂರ್ತಿ

ಈಗ ಕಲ್ಲೇಶ್ವರ ದೇವಾಲಯದಲ್ಲಿದೆ



೧೫. ಗುಡಿಪಲ್ಲಿಯ ಸೋಮೇಶ್ವರ ದೇವಾಲಯ



೧೬. ಸೋಮೇಶ್ವರ ದೇವಸ್ಥಾನದ ನವರಂಗದ
ಮೇಲಿರುವ ಶಾಸನ



೧೭. ಬೆಳ್ಳೂರಿನ ಈಶ್ವರ ದೇವಾಲಯದ
ಸಮಗ್ರ ನೋಟ



೧೮. ಈಶ್ವರನೋಟ ದೇವಾಲಯದ
ಜೀರ್ಣಾವಸ್ಥೆಯಲ್ಲಿರುವ ಶಿಖರ



೧೯. ನಾಗಮಂಗಲ ತಾಲ್ಲೂಕು ಬೆಳ್ಳೂರಿನ
ವೀರಭದ್ರ ದೇವಸ್ಥಾನ




೨೦. ವಿದ್ಯಾಶಂಕರ ದೇವಸ್ಥಾನ ಮುಳುಬಾಗಿಲು



೨೧. ಸೋಮೇಶ್ವರ ದೇವಸ್ಥಾನ, ಮುಳುಬಾಗಿಲು



೨೨. ತ್ರಿಕೂಟಾಚಲ ಶಿವದೇವಸ್ಥಾನ, ತಿಮ್ಮಲಾಪುರ



೨೩. ತಿಮ್ಮಲಾಪುರ ದೇವಸ್ಥಾನದ ನವರಂಗ
ಮತ್ತು ಶಿಖರಗಳು



೨೪. ನಾಗಮಂಗಲ ವೀರಭದ್ರ ದೇವಾಲಯದ
ಸಮಗ್ರ ನೋಟ



೨೫. ವೀರಭದ್ರ ದೇವಾಲಯದ ಎಡಭಾಗದಲ್ಲಿರುವ
ಭದ್ರಕಾಳಮ್ಮ ದೇವಸ್ಥಾನದಲ್ಲಿರುವ ಉತ್ಸವ ವಾಹನ



೨೬. ಯಳಂದೂರಿನ ಗೌರೀಶ್ವರ ದೇವಸ್ಥಾನದ
ಸಮಗ್ರನೋಟ



೨೭. ಗೌರೀಶ್ವರ ದೇವಸ್ಥಾನದಲ್ಲಿರುವ ಶಾಸನ



೨೮. ಸಿಂಧುವಳ್ಳಿಯ ಸೋಮೇಶ್ವರ ದೇವಸ್ಥಾನ



೨೯. ಶ್ರೀರಂಗಪಟ್ಟಣದ ಗಂಗಾಧರೇಶ್ವರ
ದೇವಾಲಯದ ಮುಂಭಾಗದ ನೋಟ



೩೦. ಗಂಗಾಧರೇಶ್ವರ ದೇವಾಲಯದ ಗರ್ಭಗೃಹ
ಮತ್ತು ಶಿಖರ



೩೧. ಹರಳುಕೋಟೆ ವೀರಭದ್ರ



೩೨. ವೀರಭದ್ರದೇವಸ್ಥಾನ, ಹಂಪೆ



೩೩. ವೀರಭದ್ರದೇವಸ್ಥಾನದ ದೀಪಸ್ತಂಭ
ಮತ್ತು ಮುಕಮಂಟಪ



೩೪. ಹಂಪಿಯ ವಿರೂಪಾಕ್ಷ ದೇವಸ್ಥಾನದ
ಸಮಗ್ರ ನೋಟ



೩೫. ವಿರೂಪಾಕ್ಷ ದೇವಸ್ಥಾನದ
ರಾಯಗೋಪುರ



೩೬. ಜಂಬುನಾಥ ದೇವಸ್ಥಾನ ಹೊಸಪೇಟೆ
ಪ್ರವೇಶದ್ವಾರ

